# ರಘುವಂಶ ಸಾರ

[ಒಂದನೆಯ ಭಾಗ]

ಲೇಖಕರು

ರಾಜಸೇವಾಸಕ್ತ **ಸಿ.ಕೆ ವೆಂಕಟರಾಮಯ್ಯ** ಎಂ ಎ, ಎಲ್ ಎಲ್ ಬಿ,

ಮುದ್ರಕರು

ಸ್ವತಂತ್ರ ಕರ್ನಾಟಕ ಪವರ್ ಪ್ರೆಸ್, ಬೆಂಗಳೂರು

**೧೯೫೧**



ಮೈಸೂರು ಮಹಾರಾಜಾ ಕಾಲೇಜಿನಲ್ಲಿ

ಸಂಸ್ಕೃತ ಭಾಷೆಯ ಪ್ರಾಧ್ಯಾಪಕರಾಗಿದ್ದು ವಿಶ್ರಾಂತರಾಗಿದ್ದ

**ದಿವಂಗತ ಎಂ. ಹಿರಿಯಣ್ಣ, ಎಂ ಎ, ಅವರು**

ಪೂಜ್ಯರೂ ಕೀರ್ತಿಶೇಷರೂ ಆದ

# ಶ್ರೀ ಎಂ. ಹಿರಿಯಣ್ಣನವರ ಅಂತರಾತ್ಮನಿಗೆ

**ಗ್ರಂಥಕರ್ತನ ಭಕ್ತಿ ಗೌರವಗಳಿಂದ ಸಮರ್ಪಿತವಾದ**

**ಕಾಣಿಕೆ**

# ಮುನ್ನುಡಿ

ಕಾಲಿದಾಸನು ಅಮರರಾದ ವಿಶ್ವಕವಿಗಳಲ್ಲೊಬ್ಬನೆನಿಸಿ ಯಶಃಕಾಯ ದಿಂದ ಶೋಭಿಸುತ್ತಿದ್ದಾನೆ ಅವನು ಬರೆದಿರುವ ರಘುವಂಶವು ಜಗತ್ಪ್ರಸಿದ್ಧ ವಾದ ಮಹಾಕಾವ್ಯಗಳಲ್ಲೊಂದು ಅದು ರಚಿತವಾದ ಕಾಲದಿಂದ ಇಂದಿನ ವರೆಗೂ, ಸರ್ವವಿಧಗಳಲ್ಲಿಯೂ ವಾಚಕರ ಮನಸ್ಸನ್ನಾಕರ್ಷಿಸಿ ಕುಣಿಸಿ ತಣಿ ಸುವ ಮಹಾಕಾವ್ಯವೆಂದು ಅದನ್ನು ಭರತಖಂಡದ ವಿದ್ವನ್ಮಣಿಗಳು ಶ್ಲಾಘಿ ಸುತ್ತ ಬಂದಿದ್ದಾರೆ ಈಗ ಸಂಸ್ಕೃತ ಸಾಹಿತ್ಯ ವ್ಯಾಸಂಗವು ನಡೆಯುತ್ತಿರುವ ಸಮಸ್ತ ಪಾಶ್ಚಾತ್ಯ ದೇಶಗಳಲ್ಲಿಯೂ ರಘುವಂಶವು ವಿದ್ವಾಂಸರಿಗೂ ವಿದ್ಯಾರ್ಥಿ ಗಳಿಗೂ ಅಚ್ಚುಮೆಚ್ಚಾಗಿದೆ ಈ ಮಹಾಕಾವ್ಯದ ಪ್ರತಿಯೊಂದು ಪುಟ ದಲ್ಲಿಯೂ ಕಾಲಿದಾಸನ ಪ್ರತಿಭೆಯೂ, ಕಲ್ಪನಾಸಾಮರ್ಥ್ಯವೂ ಬೆಳಗುತ್ತಿವೆ ರಘುವಂಶ ಮಹಾಕಾವ್ಯದಲ್ಲಿ ಚಿತ್ರಿತವಾಗಿರುವ ನಾನಾ ಸನ್ನಿವೇಶಗಳೂ ಅದ ರಲ್ಲಿ ಬರುವ ನಾನಾ ವರ್ಣನೆಗಳೂ ರಸಿಕರನ್ನು ತಲೆದೂಗಿಸಿ ಅವರು ಮೈಮರೆ ಯುವಂತೆ ಮಾಡುವಷ್ಟು ಸೊಗಸಾಗಿವೆ ಅವುಗಳಲ್ಲಾವುವು ಉತ್ತಮ ಮತ್ತು ಅವುಗಳಲ್ಲಾವುವು ಮಧ್ಯಮವೆಂದು ಹೇಳುವುದು ಕೂಡ ಬಹಳ ಕಷ್ಟ ವೆನಿಸುವ ಮಟ್ಟಿಗೆ ಅವು ಸ್ವಾರಸ್ಯವಾಗಿವೆ ಕವಿಕುಲ ಗುರುವೆಂದು ಪ್ರಖ್ಯಾತ ನಾದ ಕಾಲಿದಾಸ ಮಹಾಕವಿಯು ವಾಲ್ಮೀಕಿ ರಾಮಾಯಣ, ವಿಷ್ಣುಪುರಾಣ ಮುಂತಾದುವುಗಳಿಂದ ವಿಷಯ ಸಂಗ್ರಹಮಾಡಿ, ಮೂಲದಲ್ಲಿಲ್ಲದ ಅನೇಕ ಘಟನೆಗಳನ್ನು ಕಲ್ಪಿಸಿ ಕಳೆಯೇರಿಸಿ, ರಘುವಂಶ ಮಹಾಕಾವ್ಯವನ್ನು ರಚಿಸಿ ದ್ದಾನೆ ಅವನು ವಾಗ್ದೇವತೆಗೆ ರತ್ನಾಕ್ಷತೆಗಳಿಂದ ಪೂಜೆಯನ್ನು ಸಲ್ಲಿಸಿದ್ದಾನೆ ಆಕೆಯ ಕೃಪಾಕಟಾಕ್ಷಕ್ಕೆ ಪಾತ್ರರಾಗಿ ಅನುಗೃಹೀತರಾದ ವರಕವಿಗಳಲ್ಲೆಲ್ಲ ಅತ್ಯಂತ ಶ್ರೇಷ್ಠರೆನಿಸಿದವರಲೊಬ್ಬನೆನಿಸಿ ಅವನು ಸುಪ್ರಸಿದ್ಧನಾಗಿದ್ದಾನೆ

ಸಂಸ್ಕೃತ ಸಾಹಿತ್ಯದ ಪಂಚ ಮಹಾಕಾವ್ಯಗಳೆನಿಸಿ ಬೆಳಗುತ್ತಿರುವ ರಘುವಂಶ, ಕುಮಾರಸಂಭವ, ಶಿಶುಪಾಲವಧ, ನೈಷಧ ಮತ್ತು ಕಿರಾ ತಾರ್ಜುನೀಯ–ಈ ಐದು ಕೃತಿರತ್ನಗಳ ಸಾರವನ್ನು ಸಂಗ್ರಹಿಸಿ ಕನ್ನಡ ಗದ್ಯ

ದಲ್ಲಿ ಅನುವಾದ ಮಾಡಬೇಕೆಂಬುದು ಅನೇಕ ವರ್ಷಗಳಿಂದಲೂ ನನ್ನ ಮನಸ್ಸಿನಲ್ಲಿದ್ದ ಅಭಿಲಾಷೆ. ಅದನ್ನು ಕಾರ್ಯರೂಪಕ್ಕೆ ತರುವ ಪ್ರಯತ್ನವು ಈಗ ಪ್ರಾರಂಭವಾಗಿದೆ.

ನಾನು ಆ ಕೆಲಸದಲ್ಲಿ ತೊಡಗಬೇಕೆಂದು ಮೊಟ್ಟಮೊದಲು ವಿಶ್ವಾಸದಿಂದ ಸೂಚಿಸಿದವರು ಪೂಜ್ಯರಾದ ಶ್ರೀ ಎಂ ಹಿರಿಯಣ್ಣ ಎಂ ಎ., ಅವರು ಅವರು ದಿವಂಗತರಾದುದಕ್ಕೆ ಮುಂಚೆ ಈ ಕೆಲಸವನ್ನು ನಾನು ಪ್ರಾರಂಭಿಸಲಿಲ್ಲವಲ್ಲಾ ಎಂದು ಪಶ್ಚಾತ್ತಾಪ ಪಡುತ್ತಿದ್ದೇನೆ. ನನ್ನ ಗ್ರಂಥಗಳ ವಿಷಯದಲ್ಲಿ ಮೆಚ್ಚಿಗೆಯನ್ನು ಸೂಚಿಸಿ ಅವರು ವಿಶೇಷ ಪ್ರೋತ್ಸಾಹಕೊಟ್ಟು ಉಪಕರಿಸಿದರು ಅದಕ್ಕಾಗಿ ನಾನು ಎಷ್ಟು ಕೃತಜ್ಞತೆಯಿಂದಿದ್ದರೂ ಸಾಲದು ವಿದ್ವನ್ಮಣಿಗಳೂ, ಸದ್ಗುಣ ಮಂಡಿತರೂ ಮತ್ತು ಸರಳ ಸ್ವಭಾವದವರೂ ಆಗಿದ್ದ ಅವರ ಬಳಿಗೆ ಹೋಗಿಬರುವುದೇ ಒಂದು ತೀರ್ಥಯಾತ್ರೆಯೆಂದು ನಾನು ಭಾವಿಸಿದ್ದೆ

ಮೂಲದಲ್ಲಿ ರತ್ನಗಳಂತೆ ತೊಳಗುತ್ತಿರುವ ಪದಗಳನ್ನೇ ಕೂಡಿದ ಮಟ್ಟಿಗೂ ಉಪಯೋಗಿಸಿರುವುದು ಈ ಗದ್ಯಾನುವಾದದ ವೈಶಿಷ್ಟ್ಯ. ಈ ಗದ್ಯಾನುವಾದವನ್ನು ಕೈಕೊಂಡುದೇ ಆ ಸದುದ್ದೇಶದಿಂದ ಇದರ ಎರಡನೆಯ ಭಾಗವನ್ನು ರಚಿಸುವಾಗಲೂ ಮತ್ತು ಇತರ ಮಹಾಕಾವ್ಯಗಳನ್ನು ಅನುವಾದಿಸುವಾಗಲೂ ಅದೇ ಮಾರ್ಗವನ್ನನುಸರಿಸಬೇಕೆಂದಿದ್ದೇನೆ ಮೂಲವನ್ನು ಓದಿ ಹರ್ಷಿಸಲಾರದವರಿಗೆ ಆ ಕವಿಯ ಶಬ್ದ ಸಂಪತ್ತಿನ ಸಾಮಾನ್ಯಪರಿಚಯವಾಗುವುದಕ್ಕೆ ಅದರಿಂದ ಸ್ವಲ್ಪ ಮಟ್ಟಿಗಾದರೂ ಸಹಾಯವಾಗುತ್ತದೆಂಬುದು ನನ್ನ ಭಾವನೆ ಸಾಧ್ಯವಾದ ಮಟ್ಟಿಗೂ ಮೂಲದಲ್ಲಿರುವ ಸೊಗಸಾದ ಶಬ್ದಗಳಿಂದಲೇ ತುಂಬಿರುವಂತೆ ರಘುವಂಶ ಮುಂತಾದ ಮಹಾಕಾವ್ಯಗಳೂ ಮತ್ತು ಚಾಣಕ್ಯನ ಅರ್ಥಶಾಸ್ತ್ರ ಮುಂತಾದ ಶಾಸ್ತ್ರ ಗ್ರಂಥಗಳೂ ಕನ್ನಡ ಗದ್ಯಾನುವಾದ ರೂಪದಲ್ಲಿ ಪ್ರಕಟವಾದರೆ, ಕನ್ನಡ ಸಾಹಿತ್ಯದಲ್ಲಿ ಶಬ್ದ

ಸಂಪತ್ತು ಇನ್ನೂ ಹೆಚ್ಚಿ ಅನುಕೂಲವಾಗುವುದರಲ್ಲಿ ಸಂದೇಹವಿಲ್ಲ. ಕೇವಲ ಪಾರಿಭಾಷಿಕ ("ಟೆಕ್ನಿಕಲ್") ಸ್ವಭಾವದ ಅನೇಕ ಪದಗಳು ಕೂಡ, ಕಾವ್ಯಗಳಲ್ಲಿಯೂ, ಅರ್ಥಶಾಸ್ತ್ರ ಮುಂತಾದ ಗ್ರಂಥಗಳಲ್ಲಿಯೂ ದೊರೆಯುತ್ತವೆ.

ರಘುವಂಶವು ಕಾವ್ಯದೃಷ್ಟಿಯಿಂದ ಮನೋಹರವಾಗಿರುವಂತೆಯೇ ಸಾಮಾಜಿಕ ವ್ಯವಹಾರ ಧರ್ಮದೃಷ್ಟಿಯಿಂದಲೂ ಮನೋಜ್ಞವಾಗಿದೆ ಯುದ್ಧಾಸಕ್ತಿಯು ಅಮಿತವಾಗಿದ್ದ ವೀರಯುಗದಲ್ಲಿ ಸ್ವಯಂ ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದು ರಘುವಂಶದ ಅರಸರ ಯುದ್ಧೋದ್ಯಮಗಳನ್ನೂ ಶೌರ್ಯ ಪರಾಕ್ರಮಗಳನ್ನೂ ವರ್ಣಿಸಿಯೂ ಕೂಡ ತನ್ನ ಒಲವಿರುವುದು ಅಹಿಂಸೆಯಿಂದ ಉದ್ದೀಪಿತವಾದ ವಿಶ್ವಪ್ರೇಮದ ಕಡೆಗೆಂಬುದನ್ನು ಕಾಲಿದಾಸ ಮಹಾಕವಿಯು ಸ್ಪಷ್ಟವಾಗಿ ವ್ಯಕ್ತಗೊಳಿಸಿದ್ದಾನೆ. ಅದನ್ನು ಕುರಿತು ಪರ್ಯಾಲೋಚಿಸಿದಷ್ಟೂ ನಮ್ಮ ಮನಸ್ಸಿಗೆ ವಿಸ್ಮಯವಾಗುತ್ತದೆ ದಿಲೀಪ ಕೌತ್ಸರ ಗುರುಭಕ್ತಿ, ರಘುದಿಲೀಪರ ಸರಳ ಜೀವನ, ಸುದಕ್ಷಿಣಾದೇವಿಯ ಧರ್ಮಶ್ರದ್ಧೆ, ವಸಿಷ್ಠರ ವಾತ್ಸಲ್ಯ, ರಘುವಿನ ಪಿತೃ ಭಕ್ತಿ, ಅಜನ ಪತ್ನೀಪ್ರೇಮ ಮುಂತಾದುವು ಒಟ್ಟು ಮಾನವ ವರ್ಗಕ್ಕೇ ಆದರ್ಶವಾಗಿವೆಯೆಂದರೆ ಅತಿಶಯೋಕ್ತಿಯೆನಿಸುವುದಿಲ್ಲ ದಿಲೀಪನ ಪ್ರಜಾವಾತ್ಸಲ್ಯವೂ, ರಘುವಿನ ಔದಾರ್ಯವೂ, ಇಂದಿನ ಪ್ರಜಾಧಿಕಾರ ಯುಗದಲ್ಲಿ ರಾಜ್ಯಭಾರವೇಮುಂತಾದ ಲೌಕಿಕ ವ್ಯವಹಾರಗಳಲ್ಲಿ ತೊಡಗಿರುವ ನಾನಾದೇಶಗಳ ನಾಯಕರಿಗೆ ಕೂಡ, ಅನುಕರಣಯೋಗ್ಯವಾಗಿವೆ ಕಾಲಿದಾಸ ಮಹಾಕವಿಯ ದೃಷ್ಟಿಯಲ್ಲಿ ಯೋಗ್ಯತೆಯೊಂದೇ ಪ್ರಧಾನ, ಜಾತಿ ಮುಂತಾದುವು ಗೌಣ ದಶರಥನು ಜಾತಿಯಲ್ಲಿ ಕ್ಷತ್ರಿಯನಾದರೂ, ದ್ವಿಜೇತರನಾದ-ಎಂದರೆ ಬಹುಶಃ ಶೂದ್ರನಾದ ತಪಸ್ವಿಯನ್ನು "ಭಗವನ್" ಎಂದು ಸಂಬೋಧಿಸಿ ಗೌರವಿಸುವಂತೆ ಕಾಲಿದಾಸನು ಚಿತ್ರಿಸಿದ್ದಾನೆ ಇದನ್ನೂ ಮತ್ತು ಇತರ ಕೆಲವು ನಿದರ್ಶನಗಳನ್ನೂ ಕುರಿತು ವಿಚಾರಮಾಡಿದರೆ, ಕಾಲಿದಾಸ ಮಹಾಕವಿಯ ಅಭಿಪ್ರಾಯದಲ್ಲಿ ಯೋಗ್ಯತೆಯೊಂದೇ ಪೂಜಾಸ್ಥಾನವೆಂದು ನಿಸ್ಸಂದೇಹವಾಗಿ ಹೇಳಬಹುದು ಈ ಅನು

ವಾದವನ್ನು ನಾನು ಬೇಗ ಬರೆಯಬೇಕೆಂದು ನನ್ನ ಮಾನ್ಯ ಮಿತ್ರರಾದ ಆಸ್ಥಾನ ವಿದ್ವಾನ್, ಪಂಡಿತ ರತ್ನಂ, ಕೀರ್ತನಾಚಾರ್ಯ ಶ್ರೀ ಬಿ ಶಿವಮೂರ್ತಿ ಶಾಸ್ತ್ರಿಯವರು ಪ್ರೀತಿ ಪೂರ್ವಕವಾಗಿ ಹಲವು ಸಾರಿ ಒತ್ತಿ ಹೇಳದೆಹೋಗಿದ್ದರೆ ಇದು ಇಷ್ಟು ಬೇಗ ಸಿದ್ಧವಾಗುತ್ತಿರಲಿಲ್ಲವೆಂದೇ ಹೇಳಬೇಕಾಗಿದೆ ಈ ಉಪಕಾರಕ್ಕಾಗಿಯೂ ಮತ್ತು ಈ ಗದ್ಯಾನುವಾದವನ್ನು ಬಹಳ ಶೀಘ್ರವಾಗಿ ತಮ್ಮ ಸ್ವತಂತ್ರ ಕರ್ಣಾಟಕ ಮುದ್ರಾಣಾಲಯದಲ್ಲಿ ಮುದ್ರಿಸಿಕೊಟ್ಟುದಕ್ಕಾಗಿಯೂ ನಾನು ಅವರಿಗೆ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇನೆ

ರಘುವಂಶ ಮಹಾಕಾವ್ಯದ ಮೊದಲಿನ ಒಂಬತ್ತು ಸರ್ಗಗಳ ಗದ್ಯಾನುವಾದವು ಈಗ ಪ್ರಕಟವಾಗಿದೆ ಉಳಿದ ಹತ್ತು ಸರ್ಗಗಳ ಗದ್ಯಾನುವಾದವೂ ಶೀಘ್ರವಾಗಿ ಪ್ರಕಟವಾಗುತ್ತದೆ

ನನ್ನ ಗ್ರಂಥಗಳ ವಿಷಯದಲ್ಲಿ ಮೊದಲಿನಿಂದಲೂ ವಿಶೇಷವಾಗಿ ಪ್ರೀತ್ಯಾದರಗಳನ್ನು ತೋರಿಸಿರುವ ಕನ್ನಡ ಬಂಧುಗಳಿಗೆ ಈ ಗ್ರಂಥದಿಂದ ಅಲ್ಪ ಸ್ವಲ್ಪ ಸಂತೋಷವಾದರೂ ನನ್ನ ಶ್ರಮವು ಸಾರ್ಥಕವಾಯಿತೆಂದು ಭಾವಿಸುತ್ತೇನೆ

ಬೆಂಗಳೂರು
ತಾರೀಖು. ೧೧-೬-೧೯೫೧

**ಸಿ ಕೆ ವೆಂಕಟರಾಮಯ್ಯ**

# ವಿಷಯಾನುಕ್ರಮಣಿಕೆ


| ವಿಷಯ | ಪುಟ ಸಂಖ್ಯೆ |
| --- | --- |
| ಒಂದನೆಯ ಪರಿಚ್ಛೇದ· | ೧ |
| **ವಸಿಷ್ಠಾಶ್ರಮಕ್ಕೆ ದಿಲೀಪನ ಆಗಮನ** | |
| ಎರಡನೆಯ ಪರಿಚ್ಛೇದ | ೧೬ |
| **ನಂದಿನೀ ವರಪ್ರಸಾದ** | |
| ಮೂರನೆಯ ಪರಿಚ್ಛೇದ | ೩೧ |
| **ರಘುರಾಜ್ಯಾಭಿಷೇಕ** | |
| ನಾಲ್ಕನೆಯ ಪರಿಚ್ಛೇದ | ೪೬ |
| **ರಘುದಿಗ್ವಿಜಯ** | |
| ಐದನೆಯ ಪರಿಚ್ಛೇದ | ೬೨ |
| **ಅಜಸ್ವಯಂವರಾಭಿಗಮನ** | |
| ಆರನೆಯ ಪರಿಚ್ಛೇದ | ೭೯ |
| **ಇಂದುಮತೀ ಸ್ವಯಂವರ** | |
| ಏಳನೆಯ ಪರಿಚ್ಛೇದ | ೯೮ |
| **ಇಂದುಮತೀ ಪಾಣಿಗ್ರಹಣ** | |
| ಎಂಟನೆಯ ಪರಿಚ್ಛೇದ: | ೧೧೩ |
| **ಅಜವಿಲಾಪ** | |
| ಒಂಬತ್ತನೆಯ ಪರಿಚ್ಛೇದ | ೧೩೨ |
| **ಮೃಗಯಾ ವರ್ಣನೆ** | |


—:o —

# ಶುದ್ಧಾಶುದ್ಧ ಪತ್ರಿಕೆ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೧ | ೧೫ | ಭ್ಯುದಯುವನ್ನೂ | ಅಭ್ಯುದಯುವನ್ನೂ |
| ೨೪ | ೧೧ | ಹೋಮಧೇನುವಾನ | ಹೋಮಧೇನುವಾದ |
| ೨೬ | ೧೨ | ಮನುಷ್ಯದೇವು | ಮನುಷ್ಯದೇವ |
| ೫೦ | ೨೨ | ನುತ್ತು ಗಜ | ಮತ್ತ ಗಜ |
| ೫೯ | ೨೫ | ಕಾಳಿದಾಸನ | ಕಾಲಿದಾಸನ |
| ೬೫ | ೧೬ | ಭೂಷಣಪ್ರಾಯವಾಗಿಯೂ | ಭೂಷಣಪ್ರಾಯುವಾಗಿಯೂ |
| ೭೬ | ೨೧ | ಮತು | ಮತ್ತು |
| ೮೩ | ೧೫ | ಚಿರಕಾರ ಬಿಟ್ಟರು | ಚಿರಕಾಲ ಬಿಟ್ಟರ |
| ,, | ೧೬ | ಶಚೀದೇವಿಯು | ಶಚೀದೇವಿಯು |
| ,, | ೨೩ | ಆವಕಾಶ | ಅವಕಾಶ |
| ೮೫ | ೧೮ | ಸವಿಾಪರ್ತಿಯಾಗಿ | ಸವಿಾಪವರ್ತಿಯಾಗಿ |
| ೯೨ | ೧೯ | ಸಂಚಾರಣೀ | ಸಂಚಾರಿಣೀ |
| ೯೮ | ೧೩ | ಪುಷ್ಪಾದ್ಪಿ | ಪುಷ್ಪಾದಿ |
| ,, | ೧೫ | ಕಲಿ | ಕಲ್ಪಿ |
| ೯೯ | ೨೮ | ಧೂವರರ | ವಧೂವರರ |
| ೧೧೩ | ೭ | ಹಾಗಿದ್ದೂರ | ಹಾಗಿದ್ದೂ |
| ,, | ೧೦ | ಮಹಿರ್ಷಿಯು | ಮಹರ್ಷಿಯು |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೧೩ | ೧೩ | ಭೂವಿಯ | ಭೂಮಿಯು |
| ೧೧೬ | ೧೧ | ಜಯಿಸದ್ದ | ಜಯಿಸದಿದ್ದ |
| ೧೧೮ | ೩ | ಪಡೆದ | ಪಡೆದು |
| ೧೨೪ | ೯ | ಅಲಕಾರಾಭರಣವಾಗಿ | ಅಲಕಾಭರಣವಾಗಿ |
| ೧೨೯ | ೨೨ | ಹೃದಯುವನು | ಹೃದಯುವನ್ನು |
| ೧೩೬ | ೨೨ | ಮಧುಪುಷ್ಪವಾದ | ಮಧುಪ್ರಷ್ಟವಾದ |
| ೧೩೭ | ೯ | ದೋಹದಿಂದ | ಡೋಹದದಿಂದ |
| ,, | ೨೫ | ಪಡೆಡುವೆಂದು | ಪಡೆದುವೆಂದು |
| ೧೪೬ | ೧೯ | ಆಸಕಿ | ಆಸಕ್ತಿ |
| ,, | ೨೦ | ತರುವಾಯ್ತು | ತರುವಾಯು |
| ೧೫೦ | ೧೦ | ಕಾಡ | ಕಾಡು |

# ರ ಘು ವಂ ಶ ಸಾ ರ

## ಒಂದನೆಯ ಪರಿಚ್ಛೇದ

### ವಸಿಷ್ಠಾಶ್ರಮಕ್ಕೆ ದಿಲೀಪನ ಆಗಮನ

ಕವಿಕುಲಗುರುವಾದ ಕಾಲಿದಾಸನು ಮನೋಹರವಾದ ರೀತಿಯಲ್ಲಿ ಪಾರ್ವತೀ ಪರಮೇಶ್ವರರನ್ನು ಪ್ರಾರ್ಥಿಸಿ ತನ್ನ ಮಹಾಕಾವ್ಯವನ್ನು ಪ್ರಾರಂಭಿಸುತ್ತಾನೆ ವಾಗರ್ಥಗಳಂತೆ ನಿತ್ಯ ಸಂಬದ್ಧರಾಗಿ ಒಬ್ಬರನ್ನೊಬ್ಬರು ಅಗಲದಿರುವ–ಒಟ್ಟು ಜಗತ್ತಿಗೇ ಮಾತಾಪಿತೃಗಳಾದ–ಪಾರ್ವತೀ ಪರಮೇಶ್ವರರು ವಾಗರ್ಥಗಳ ಉತ್ತಮ ಜ್ಞಾನವನ್ನು ತನಗೆ ಕರುಣಿಸುವಂತೆ ಪ್ರಾರ್ಥಿಸಿ ಅವರನ್ನು ವಂದಿಸುವುದಾಗಿ ಕವಿಸಾರ್ವಭೌಮನು ಸೂಚಿಸುತ್ತಾನೆ ಪಾರ್ವತೀ ಪರಮೇಶ್ವರರು ವಾಗರ್ಥಗಳಂತೆ ನಿತ್ಯ ಸಂಬದ್ಧರೆಂಬ ಉಪಮಾನವು ಮನೋಜ್ಞವಾಗಿದೆ ಜಗತ್ತು ಪ್ರಕೃತಿಪುರುಷರ ಲೀಲಾ ಪರಿಣಾಮವೆಂಬ ಕಲ್ಪನೆಯೂ ರಮಣೀಯವಾಗಿದೆ ಕಾವ್ಯಾರಂಭದಲ್ಲಿ ಕಾಲಿದಾಸ ಮಹಾಕವಿಯು "ಸೂರ್ಯವಂಶ ಪ್ರಭುಗಳ ಚರಿತ್ರೆಯೆಲ್ಲಿ? ಅಲ್ಪಜ್ಞನಾದ ನನ್ನ ಬುದ್ಧಿಯೆಲ್ಲಿ? ಮೋಹಪರವಶನಾಗಿ ದುಸ್ತರವಾದ ಸಾಗರವನ್ನು ಸಣ್ಣದೊಂದು ತೆಪ್ಪದಲ್ಲಿ ದಾಟಲಿಚ್ಛಿಸುತ್ತಿದ್ದೇನೆ ನಾನು. ಮೂಢನಾದ ನಾನು ಕವಿಯೆಂಬ ಖ್ಯಾತಿಗೆ ಆಶಿಪಟ್ಟು, ಎತ್ತರವಾದ ದೇಹಕಟ್ಟಿನವನಿಗೆ ಮಾತ್ರವೇ ಎಟುಕಬಹುದಾದ ಹಣ್ಣಿಗೆ ಆಶಿಪಟ್ಟು ಮರದ ಮೇಲಿರುವ ಆ ಹಣ್ಣನ್ನು ಕೀಳಲು ಕೈ ಎತ್ತುವ ಕುಬ್ಜನಂತೆ ಜನರ ಹಾಸ್ಯಕ್ಕೆ ಗುರಿಯಾಗುವುದರಲ್ಲಿ ಸಂದೇಹವಿಲ್ಲ" ಎಂದು ಸೂಚಿಸಿ ಅನನ್ಯ ಸುಲಭವಾದ ರೀತಿಯಲ್ಲಿ ತನ್ನ ವಿನಯವನ್ನು ಮೆರೆದಿದ್ದಾನೆ ಜಗದ್ವಂದ್ಯರಾದ ಕವಿಗಳಲ್ಲಿ ಶ್ರೇಷ್ಠರಾದವರ ಗುಂಪಿಗೆ ಸೇರಿ ಅಮರ ಕವಿಗಳಾಗಿ ಶೋಭಿಸುವ ಯೋಗ್ಯತಾ ಸಿದ್ಧಿಯನ್ನು ಪಡೆದಿದ್ದೂ, ಹೀಗೆ ವಿನಯರ್ಥ

ರಾಗಿರುವವರ ಸಂಖ್ಯೆಯು ಒಟ್ಟು ಸಾಹಿತ್ಯ ಪ್ರಪಂಚದಲ್ಲೇ ಹೆಚ್ಚಾಗಿಲ್ಲ. ಸೂರ್ಯವಂಶದ ಅರಸರ ಚರಿತ್ರೆಯನ್ನು ಕುರಿತು ಕಾವ್ಯ ರಚನೆ ಮಾಡಲು ತನಗೆ ಸಾಮರ್ಥ್ಯ ಸಾಲದೆಂಬುದನ್ನು ಮೇಲೆ ಸೂಚಿತವಾಗಿರುವಂತೆ ತಿಳಿಸಿದ ಮೇಲೆ ಕಾಲಿದಾಸನು ಪೂರ್ವಕವಿಗಳಿಗೆ ಗೌರವದ ಕಾಣಿಕೆಯನ್ನು ಸಲ್ಲಿಸಿದ್ದಾನೆ ರತ್ನವನ್ನು ವಜ್ರಸೂಚಿಯಿಂದ ಕೊರೆದು ರಂಧ್ರಮಾಡಿದಂತೆ ಪೂರ್ವಸೂರಿಗಳು* ಸೂರ್ಯವಂಶ ಚರಿತ್ರೆಯ ವಿಚಾರವಾಗಿ ತಮ್ಮ ಕಾವ್ಯಗಳ ರೂಪದ ವಾಗ್ದ್ವಾರವನ್ನು ಸಿದ್ಧಮಾಡಿರುವಲ್ಲಿ,ಆ ರಂಧ್ರದಲ್ಲಿ ಪೋಣಿಸುವ ದಾರ ದಂತೆ ತನ್ನ ಕಾವ್ಯ ಸಂಚಾರವು ಸುಲಭವೆಂದು ಕಾಲಿದಾಸನು ಸೂಚಿಸಿದ್ದಾನೆ

ಅನಂತರ, "ಪೂರ್ವ ಕವಿಗಳು ಕಲ್ಪಿಸಿರುವ ಆ ವಾಗ್ದ್ವಾರದಲ್ಲಿ ಸೂತ್ರ ಗತಿಯುಳ್ಳವನಾದ ನಾನು ವಾಗ್ವಿಭವವನ್ನು ಹೆಚ್ಚಾಗಿ ಪಡೆದಿಲ್ಲವಾದರೂ ರಘು ಕುಲದ ಅರಸರ ವರ್ಣನೆಯನ್ನು ಕೇಳಿ ಅವರನ್ನು ಕೊಂಡಾಡಬೇಕೆಂಬ ಚಪಲದಿಂದ ಪ್ರಚೋದಿತನಾಗಿ ಅವರ ವಿಷಯವನ್ನು ತಿಳಿಸಲುದ್ಯುಕ್ತನಾಗಿ ದ್ದೇನೆ. ಗುಣದೋಷ ವಿವೇಚನೆಯುಳ್ಳ ಸಜ್ಜನರು ಈ ನನ್ನ ರಘುವಂಶ ಕಾವ್ಯವನ್ನು ಆಲಿಸಿ ವಿಮರ್ಶಿಸಬೇಕು ಬಂಗಾರದ ಶುದ್ಧ ಸ್ವರೂಪವಾಗಲಿ ಅಥವಾ ಇತರ ಲೋಹ ಸಂಸರ್ಗ ದೋಷವಾಗಲಿ ವ್ಯಕ್ತವಾಗುವುದು ಅಗ್ನಿ ಪರೀಕ್ಷೆಯಿಂದಲೇ" ಎಂದು ಹೇಳಿ ರಘುಕುಲದ ಅರಸರ ಸದ್ಗುಣಗಳನ್ನು ಅವನು ಕೊಂಡಾಡಿದ್ದಾನೆ ರಘುವಂಶದ ರಾಜಶ್ರೇಷ್ಠರು ಆಜನ್ಮ ಶುದ್ಧರು, ತಮ್ಮ ಪ್ರಯತ್ನಕ್ಕೆ ಫಲ ಪ್ರಾಪ್ತಿಯಾಗುವ ವರಗೂ ಶ್ರದ್ಧೆಯಿಂದ ಕೆಲಸ ಮಾಡುತ್ತಿದ್ದವರು, ಆಸಮುದ್ರ ಕ್ಷಿತೀಶರಾಗಿದ್ದ ಸಮ್ರಾಟರು ತಮ್ಮ ರಥ ಗಳಲ್ಲಿ ಭೂಲೋಕದಿಂದ ಸ್ವರ್ಗಲೋಕದವರೆಗೂ ಸಂಚಾರ ಮಾಡುತ್ತಿದ್ದ ಸುರೇಂದ್ರ ಮಿತ್ರರು ರಘುಕುಲದ ಅರಸರು ವಿಧಿಪೂರ್ವಕವಾಗಿ ಹೋಮಾ ದಿಗಳನ್ನು ನೆರವೇರಿಸಿ, ಅತಿಥಿಗಳನ್ನು ಆರಾಧಿಸಿ ಅವರ ಅಭಿಲಾಷೆಯನ್ನು

---

* ಪೂರ್ವಸೂರಿಗಳು ಎಂದು ಸೂಚಿಸಿರುವುದರಲ್ಲಿ ಕಾಲಿದಾಸನು ರಾಮಾಯಣ ವನ್ನು ಬರೆದ ಆದಿಕವಿ ವಾಲ್ಮೀಕಿ, ಅದೇ ವಿಷಯವನ್ನು ಕುರಿತು ಕಾವ್ಯ ರಚನೆಮಾಡಿ ದಂತೆ ಪ್ರತೀತಿಯಿರುವ ಚ್ಯವನ, ಮುಂತಾದವರನ್ನು ಗೌರವಿಸಿದ್ದಾನೆ.

ಪೂರ್ತಿಗೊಳಿಸುತ್ತಿದ್ದವರು, ಅಪರಾಧ ತಾರತಮ್ಯಗಳಿಗೆ ತಕ್ಕಂತೆ ಯಥೋಚಿತವಾಗಿ ಶಿಕ್ಷೆಗಳನ್ನು ವಿಧಿಸುತ್ತಿದ್ದವರು, ಕಾಲಗತಿಯನ್ನು ಗಮನಿಸಿ ಅದಕ್ಕೆ ಅನುಸಾರವಾಗಿ ಪ್ರಬೋಧನ ಶೀಲರಾಗಿ ಪ್ರಜಾ ಪಾಲನದಲ್ಲಿ ಜಾಗರೂಕತೆಯಿಂದ ವರ್ತಿಸುತ್ತಿದ್ದವರು ಅವರು ತ್ಯಾಗಕ್ಕಾಗಿ ಧನಸಂಗ್ರಹ ಮಾಡುತ್ತಿದ್ದವರು, ಸತ್ಯಕ್ಕಾಗಿ ಮಿತಭಾಷಿಗಳಾಗಿದ್ದವರು, ಯಶಸ್ಸಿಗಾಗಿ ವಿಜಯಯಾತ್ರೆ ಮಾಡುತ್ತಿದ್ದವರು, ಸಂತಾನ ಭಾಗ್ಯಕ್ಕಾಗಿ ಗೃಹಸ್ಥಾಶ್ರಮದಲ್ಲಿದ್ದವರು* ಅವರು ಬಾಲ್ಯದಲ್ಲಿ ಚೆನ್ನಾಗಿ ವಿದ್ಯಾಭ್ಯಾಸಮಾಡಿ, ಯೌವನದಲ್ಲಿ ಸಂಸಾರ ಸುಖವನ್ನನುಭವಿಸಿ, ವಾರ್ಧಕ್ಯದಲ್ಲಿ–ವಾನಪ್ರಸ್ಥಾಶ್ರಮ ಧರ್ಮಕ್ಕನುಸಾರವಾಗಿ ಆಶ್ರಮವಾಸಿಗಳಾಗಿ–ಮುನಿವೃತ್ತಿಯನ್ನನುಸರಿಸುತ್ತಿದ್ದವರು ಕೊನೆಗೆ ಯೋಗಾಭ್ಯಾಸ ನಿರತರಾಗಿದ್ದು–ಆಧ್ಯಾತ್ಮಿಕ ಮಾರ್ಗವನ್ನವಲಂಬಿಸಿ ಪರಮಾತ್ಮ ಧ್ಯಾನದಲ್ಲಿ ಕಾಲವನ್ನು ಕಳದು–ತನುವನ್ನು ತ್ಯಜಿಸುತ್ತಿದ್ದವರು.

ಪ್ರಾಚೀನ ಕಾಲದಲ್ಲಿ ಸೂರ್ಯನಿಗೆ ಮಗನಾಗಿ ಸಂಯಮಿಗಳಾದ ವಿದ್ವಾಂಸರಿಗೂ ಮಾನನೀಯನಾಗಿದ್ದ ವಿವಸ್ವತನೆಂಬ ಹೆಸರಿನ ಮನುವಿದ್ದನು. ಆ ಮನುಚಕ್ರವರ್ತಿಯು ಕ್ಷಿತೀಶರಲ್ಲಿ–ವೇದಗಳಲ್ಲಿ ಓಂಕಾರದಂತೆ–ಶ್ರೇಷ್ಠನೆನಿಸಿ ಪ್ರಮುಖನಾಗಿದ್ದನು ಶುದ್ಧವಾದ ವೈವಸ್ವತ ವಂಶದಲ್ಲಿ ಶುದ್ಧತರನಾದ ದಿಲೀಪನೆಂಬ ರಾಜೇಂದ್ರನು ಕ್ಷೀರಸಾಗರದಲ್ಲಿ ಚಂದ್ರನು ಉದ್ಭವಿಸಿದಂತೆ ಜನಿಸಿದನು ವಿಶಾಲವಾದ ಎದೆಯುಳ್ಳವನೂ, ಮಹಾ ಭುಜನೂ, ಮಹಾಬಾಹುವೂ, ಶಾಲವೃಕ್ಷದಂತೆ ದೀರ್ಘಕಾಯನೂ ಆಗಿದ್ದ ದಿಲೀಪರಾಜೇಂದ್ರನು ತನ್ನ ವೀರವೃತ್ತಿಗನುರೂಪವಾದ ದೇಹವುಳ್ಳವನಾಗಿ ಕ್ಷಾತ್ರಧರ್ಮವೇ ಮನುಷ್ಯಾಕಾರವನ್ನು ಧರಿಸಿ ಧರೆಗಿಳಿದು ಬಂದಿದ್ದಂತೆ ಶೋಭಿಸುತ್ತಿದ್ದನು. ಇತರ

---

*ಎಂದರೆ ರಘುಕುಲದ ಅರಸರು ಪ್ರಜೆಗಳ ಸಹಾಯಾರ್ಥವಾಗಿ ತ್ಯಾಗಕ್ಕೋಸ್ಕರ ಹಣವನ್ನು ಸಂಗ್ರಹಿಸುತ್ತಿದ್ದರೇ ಹೊರತು, ದುರ್ವ್ಯಾಪಾರಕ್ಕೋಸ್ಕರವಲ್ಲ; ಸತ್ಯಕ್ಕೋಸ್ಕರ ಮಿತಭಾಷಿಗಳಾಗಿದ್ದರೇ ಹೊರತು, ಪರಾಭವಕ್ಕೋಸ್ಕರವಲ್ಲ, ಯಶಸ್ಸಿಗೋಸ್ಕರ ವಿಜಯ ಯಾತ್ರೆ ಮಾಡುತ್ತಿದ್ದರೇ ಹೊರತು, ಧನಲೋಭಕ್ಕೋಸ್ಕರವಲ್ಲ; ಸಂತಾನಭಾಗ್ಯಕ್ಕೋಸ್ಕರ ವಿವಾಹಮಾಡಿಕೊಂಡು ಗೃಹಸ್ಥಾಶ್ರಮದಲ್ಲಿದ್ದವರೇ ಹೊರತು, ಭೋಗಕ್ಕೋಸ್ಕರವಲ್ಲ.

ರೆಲ್ಲರಿಗಿಂತಲೂ ಬಲಿಷ್ಠನಾಗಿ, ಇತರರೆಲ್ಲರಿಗಿಂತಲೂ ತೇಜಸ್ವಿಯಾಗಿ ಇತರ [illegible] ಎತ್ತರವಾಗಿ ಉನ್ನತವಾದ ಮೇರುಪರ್ವತದಂತೆ ಕಂಗೊಳಿ ತ್ತಿದ್ದ ದಿಲೀಪ ಚಕ್ರವರ್ತಿಯು ಭೂಮಂಡಲವನ್ನೇ ಆಕ್ರಮಿಸಿದ್ದನು. ಆತನದು, ಆಕಾರಕ್ಕೆ ಸದೃಶವಾದ ಪ್ರಜ್ಞೆ, ಆ ಪ್ರಜ್ಞೆಗೆ ಅನುರೂಪವಾದ ಶಾಸ್ತ್ರಪರಿಶ್ರಮ, ಆ ಶಾಸ್ತ್ರಪರಿಶ್ರಮಕ್ಕೆ ತಕ್ಕ ಮಹತ್ತ್ವಮ ಪ್ರಯತ್ನ, ಆ ಪ್ರಯತ್ನಕ್ಕೆ ಸದೃಶವಾದ ಫಲಸಿದ್ಧಿ ದಿಲೀಪನಲ್ಲಿ ನೃಪೋಚಿತವಾದ ಭೀಮ ಗುಣಗಳೂ ಕಾಂತ ಗುಣಗಳೂ ಇದ್ದುವು, ಎಂಗರೆ ತೇಜಸ್ಸು ಪ್ರತಾಪ, ದರ್ಪ ಕುಂತಾದ ಭೀಮ ಗುಣಗಳೂ ಇದ್ದುವು ಮತ್ತು ದಾಕ್ಷಿಣ್ಯ, ಆಕರ್ಷಣೆ ಮೊದಲಾದ ಕಾಂತಗುಣಗಳೂ ಇದ್ದುವು ಕ್ರೂರ ಜಲಚರಗಳಿಂದಲೂ ಮತ್ತು ರತ್ನಗಳಿಂದಲೂ ತುಂಬಿರುವ ಸಮುದ್ರವು, ಅದನ್ನು ಸಮೀಪಿಸುವವರಿಗೆ ಭಯಂಕರವಾಗಿಯೂ ಮತ್ತು ಆಕರ್ಷಕವಾಗಿಯೂ ಇರುವುದಿಲ್ಲವೆ? ಅದ ರಂತೆಯೇ ದಿಲೀಪ ಚಕ್ರವರ್ತಿಯೂ ತನ್ನ ಆಶ್ರಿತರಿಗೆ ತನ್ನ ದರ್ಪದಿಂದ ಕೊಂಚ ಭಯವುಂಟಾಗುವಂತೆಯೂ, ತನ್ನ ದಾಕ್ಷಿಣ್ಯದಿಂದ ಆಕರ್ಷಣ ವುಂಟಾಗುವಂತೆಯೂ ಇದ್ದನು ದಿಲೀಪನು ಮಾರ್ಗದರ್ಶಕನಾಗಿ ನಿಯೋ ಜಿಸುತ್ತಿರುವಲ್ಲಿ, ಆತನ ಪ್ರಜೆಗಳು ವೈವಸ್ವತ ಮನುವಿನ ಕಾಲದಿಂದ ನಡೆದು ಬಂದಿದ್ದ ಧರ್ಮಾಚರಣೆಗಳಲ್ಲಿ ಲೇಶಮಾತ್ರವೂ ವ್ಯತ್ಯಾಸವಿಲ್ಲದಂತೆ ವರ್ತಿಸು ತ್ತಿದ್ದರು ಸಮರ್ಥನಾದ ಸಾರಥಿಯು ನಡೆಯಿಸುವ ರಥದ ಚಕ್ರಗಳು* ಜಾಡಿನಿಂದ ರೇಖಾಮಾತ್ರವೂ ತಪ್ಪಿಹೋಗದಿರುವಂತೆ ದಿಲೀಪನ ಪ್ರಜೆಗಳೂ ದಿಲೀಪನ ಪ್ರಭುತ್ವದಲ್ಲಿ ಧರ್ಮಮಾರ್ಗವನ್ನು ಸ್ವಲ್ಪವೂ ಉಲ್ಲಂಘಿಸದೆ ವರ್ತಿಸುತ್ತಿದ್ದರು ಪ್ರಜೆಗಳ ಅಭ್ಯುದಯಕ್ಕಾಗಿ ವಿನಿಯೋ[illegible] ರವೇ ದಿಲೀಪನು ಅವರ ವರಮಾನದಲ್ಲಿ ಆರನೆಯ ಒಂದು ಭಾಗದ ತೆರಿಗೆ ಯನ್ನು ಅವರಿಂದ ತೆಗೆದುಕೊಳ್ಳುತ್ತಿದ್ದನು, ಪ್ರಜೆಗಳ ಸುಖ ಸಾಧನೆಗಾಗಿಯೇ ಆ ತೆರಿಗೆಯ ಹಣವನ್ನು ಹಿಂದಕ್ಕೆ ಕೊಡುತ್ತಿದ್ದನು ಸೂರ್ಯನು ನೀರನ್ನು

* ರಥಕ್ಕೆ ಚಕ್ರಗಳು ಆಧಾರವಾಗಿರುವಂತೆ ರಾಜ್ಯಕ್ಕೆ ಪ್ರಜೆಗಳೇ ಆಧಾರವೆಂಬ ಉದಾತ್ತ ತತ್ತ್ವವೂ ಇದರಿಂದ ಸೂಚಿತವಾಗುತ್ತದೆ

ಅವಿಯು ರೂಪದಲ್ಲಿ ಸೆಳೆದುಕೊಳ್ಳುವುದು ಮಳೆಯ ರೂಪದಲ್ಲಿ ಮತ್ತೆ ಒಂದಕ್ಕೆ ಸಾವಿರ ಪಾಲಿನಷ್ಟು ಪ್ರಮಾಣದಲ್ಲಿ ಹಿಂದಕ್ಕೆ ಕೊಡುವುದಕ್ಕೇ ತಾನೆ! ದಿಲೀಪನ ರಾಜನೀತಿ ಕೌಶಲ್ಯದ ಪರಿಣಾಮವಾಗಿಯೂ ಮತ್ತು ಅವನ ರಣ ಪಾಂಡಿತ್ಯದ ಪ್ರಭಾವದಿಂದಲೂ ಆವನ ಸೈನಿಕರಿಗೆ ಯುದ್ಧೋದ್ಯೋಗದ ಆವಶ್ಯಕತೆಯೇ ಇರಲಿಲ್ಲ ಅವನ ಶೌರ್ಯವು ನೀತಿಪುರಸ್ಸರವಾಗಿದ್ದುದರಿಂದ—ಶತ್ರುನಿಗ್ರಹದ ಆವಶ್ಯಕತೆಯೇ ಇಲ್ಲದೆ—ಅವನ ಚತುರಂಗ ಸೈನ್ಯವೂ ಛತ್ರಚಾಮರಾದಿಗಳಂತೆಯೇ ಕೇವಲ ಪದವಿ ಪ್ರತಿಷ್ಠೆಗಳ ಸಾಧನವಾಗಿ ಪರಿಣಮಿಸಿತು. ಪೂರ್ವಜನ್ಮ ಸಂಸ್ಕಾರಗಳು ಅಗೋಚರವಾಗಿದ್ದರೂ ಅವುಗಳ ಪರಿಣಾಮ ಲಕ್ಷಣಗಳಿಂದ ಅವುಗಳನ್ನು ಊಹಿಸಿಕೊಳ್ಳಬಹುದಷ್ಟೆ : ಅವುಗಳಂತೆಯೇ ದಿಲೀಪನ ಸಮಾರಂಭಗಳೂ ಗೂಢವಾಗಿರುತ್ತಿದ್ದುವು ಬಾಹ್ಯ ಲಕ್ಷಣಗಳಾವುವೂ ಅವನ ಮನೋಗತವನ್ನು ವ್ಯಕ್ತಪಡಿಸುತ್ತಿರಲಿಲ್ಲ ಅವನು ಯಾವ ಉದ್ಯಮಗಳನ್ನು ಕೈಕೊಂಡರೂ ಅವುಗಳ ಫಲಿತಾಂಶಗಳನ್ನು ಕಂಡ ಮೇಲೆ ಮಾತ್ರವೇ ಪ್ರಜೆಗಳು ಅವನ ಸಮಾರಂಭಗಳ ಸ್ವರೂಪವನ್ನು ಗ್ರಹಿಸುವುದು ಸಾಧ್ಯವಾಗುತ್ತಿದ್ದಿತೇ ಹೊರತು, ಅನ್ಯಥಾ ಅವನ ನಡೆನುಡಿಗಳಿಂದಲೂ, ಆಕಾರೇಂಗಿತಗಳಿಂದಲೂ ಅದನ್ನು ಗ್ರಹಿಸಲು ಸರ್ವಥಾ ಸಾಧ್ಯವಾಗುತ್ತಿರಲಿಲ್ಲ ಅದಕ್ಕೆ ಕಾರಣ, ಅವನ ಉದ್ಯಮಗಳೆಲ್ಲ ಕೇವಲ ಫಲಾನುಮೇಯಗಳಾಗಿದ್ದುವು. ದಿಲೀಪನು ಚಕ್ರವರ್ತಿ ಪದವಿಯಲ್ಲಿದ್ದರೂ ಯೋಗಿಯಂತೆ ಕರ್ತವ್ಯವನ್ನು ನೆರವೇರಿಸುತ್ತಿದ್ದ ಮಹಾಪುರುಷನಾಗಿದ್ದನು ಆದಕಾರಣ, ಅವನು ಮರಣವೆಲ್ಲಿ ಸಂಭವಿಸೀತೋ ಎಂಬ ಭಯವು ಸ್ವಲ್ಪಮಾತ್ರವೂ ಇಲ್ಲದೆಯೇ ದೇಹರಕ್ಷಣೆ ಮಾಡಿಕೊಳ್ಳುತ್ತಿದ್ದನು ; ರೋಗವೇನೂ ಸಂಭವಿಸಿಲ್ಲದಿದ್ದೂ ಧರ್ಮಾಚರಣೆ ಮಾಡುತ್ತಿದ್ದನು,* ಧನದ ಮೇಲಿನ ದುರಾಶೆಯು ಲವಲೇಶವೂ ಇಲ್ಲದೆಯೇ ಅರ್ಥ ಸಂಗ್ರಹ ಮಾಡುತ್ತಿದ್ದನು ; ಎಂದರೆ ಯಾವ ಧನಲೋಲುಪತೆಯೂ ಇಲ್ಲದೆ ತ್ಯಾಗಾರ್ಥವಾಗಿ ಅರ್ಥ ಸಂಗ್ರಹ ಮಾಡುತ್ತಿದ್ದನು ; ಮತ್ತು

* ವ್ಯಾಧಿಗ್ರಸ್ತರಾದವರು ಆರೋಗ್ಯ ಪ್ರಾಪ್ತಿಗಾಗಿ ಧರ್ಮಾಚರಣೆ ಮಾಡುವುದು ವಾಡಿಕೆಯಷ್ಟೆ ! ದಿಲೀಪನು ಆರೋಗ್ಯದಿಂದಿದ್ದರೂ ಧರ್ಮಾಚರಣೆ ಮಾಡುತ್ತಿದ್ದನೆಂಬುದು ಇದರ ಆಶಯ.

ಅನಾಸಕ್ತನಾಗಿ ಸುಖಾನುಭವ ಮಾಡುತ್ತಿದ್ದನು ಇತರರಲ್ಲಿ ಕಂಡುಬರುತ್ತಿದ್ದ ದೋಷಗಳನ್ನು ಸಂಪೂರ್ಣವಾಗಿ ಅರಿತಿದ್ದೂ ಆತನು ಮೌನದಿಂದಿರುತ್ತಿದ್ದನು; ಅಪಕಾರಿಗಳಿಗೆ ಪ್ರತೀಕಾರಮಾಡಲು ಶಕ್ತನಾಗಿದ್ದೂ ಕ್ಷಮಾನ್ವಿತನಾಗಿದ್ದನು; ಮುಖಸ್ತುತಿ ವಿಮುಖನಾಗಿದ್ದೂ ತ್ಯಾಗಿಯಾಗಿದ್ದನು ಪರಸ್ಪರ ವಿರುದ್ಧಗಳಾಗಿದ್ದೂ ಈ ಗುಣಗಳು ಅವನಲ್ಲಿ–ಸೋದರರಂತೆ–ಅವಿರೋಧ ಸ್ವರೂಪಹೊಂದಿ ರೂಢಮೂಲವಾಗಿ ನೆಲಸಿದ್ದುವು (ಇತರರ ವಿಷಯಗಳನ್ನು–ಮುಖ್ಯವಾಗಿ ದೋಷಗಳನ್ನು ತಿಳಿದಿರುವವನು ಮೌನದಿಂದಿರುವುದೂ, ಬಲಿಷ್ಠನು ಕ್ಷಮಾಶೀಲನಾಗಿರುವುದೂ, ತ್ಯಾಗಿಯಾದ ಪರೋಪಕಾರಿಯು ಮುಖಸ್ತುತಿಯನ್ನಪೇಕ್ಷಿಸದಿರುವುದೂ ತೀರ ವಿರಳ ದಿಲೀಪನಲ್ಲಿ ಮಾತ್ರ ಪರಸ್ಪರ ವಿರೋಧ ಸ್ವಭಾವವುಳ್ಳ ಈ ಗುಣಗಳು ಪರಿಸ್ಫುಟವಾಗಿ ಏಕತ್ರ ನೆಲಸಿದ್ದುವೆಂಬುದು ಇದರ ಆಶಯ ) ವಯಸ್ಸಿನಲ್ಲೇನೋ ಅವನು ಯುವಕನೇ, ಆದರೆ ಅವನು ವಿದ್ಯಾಪಾರಂಗತನಾಗಿ, ವಿಷಯ ಸುಖಗಳಿಗೆ ವಶನಾಗದೆ ಜ್ಞಾನಗುಣಸಂಪತ್ತಿಯನ್ನು ಪಡೆದ ಧರ್ಮಾಭಿಮಾನಿಯಾಗಿದ್ದ ಕಾರಣ, ಜ್ಞಾನವೃದ್ಧನೆನಿಸಿದ್ದನು. ಪ್ರಜೆಗಳಿಗೆ ಸನ್ಮಾರ್ಗವನ್ನು ತೋರಿಸಿ, ಯಾವ ಭಯಕ್ಕೂ ಕಾರಣವಿಲ್ಲದಂತೆ ಅವರನ್ನು ರಕ್ಷಿಸಿ ಅನ್ನಪಾನಾದಿಗಳಿಂದ ಅವರನ್ನು ಪೋಷಿಸುತ್ತಿದ್ದ ಕಾರಣ ದಿಲೀಪನು ಅವರಿಗೆ ತಂದೆಯಂತಿದ್ದನು ಅವರ ಮಾತಾಪಿತೃಗಳಾದರೋ ಅವರಿಗೆ ಕೇವಲ ಜನ್ಮದಾತರು ಮಾತ್ರವೇ. ಶಿಕ್ಷಕನೂ, ರಕ್ಷಕನೂ ಮತ್ತು ಪೋಷಕನೂ ಆಗಿದ್ದ ದಿಲೀಪ ಚಕ್ರವರ್ತಿಯೇ ಅವರ ನಿಜವಾದ ತಂದೆಯೆನಿಸಿದ್ದನು ಸಮಾಜವು ಸುಪ್ರತಿಷ್ಠಿತವಾಗಿರುವಂತೆ ಮಾಡುವ ಕರ್ತವ್ಯ ಬುದ್ಧಿಯಿಂದ ದಿಲೀಪನು ಅಪರಾಧಿಗಳಿಂದ ದಂಡದ್ರವ್ಯವನ್ನು ಸಂಗ್ರಹಿಸುತ್ತಿದ್ದನು ವಂಶಾಭಿವೃದ್ಧಿಯ ಕರ್ತವ್ಯಬುದ್ಧಿಯಿಂದ ಅವನು ವಿವಾಹ ಮಾಡಿಕೊಂಡಿದ್ದನು. ವಿವೇಕಿಯಾದ ದಿಲೀಪನು ಕರ್ತವ್ಯ ಬುದ್ಧಿಯಿಂದ ಅರ್ಥವನ್ನೂ ಕಾಮವನ್ನೂ ಧಾರ್ಮಿಕ ರೂಪಕ್ಕೆ ತಂದುಕೊಂಡು ತನ್ನ ಧರ್ಮಾಭಿಮಾನವನ್ನು ಪ್ರದರ್ಶಿಸುತ್ತಿದ್ದನು. ದಿಲೀಪನ ರಾಜ್ಯದಲ್ಲಿ ಕಳ್ಳತನವೆಂಬುದು ಕೇವಲ ಶಬ್ದರೂಪದಲ್ಲಿ ಗ್ರಂಥಗಳಲ್ಲಿದ್ದಿತೇ ಹೊರತು, ಕಾರ್ಯರೂಪದಲ್ಲಿರ

ಲಿಲ್ಲ.* ವಿಧಾತನು ದಿಲೀಪನನ್ನು ವಿಶೇಷ ರೀತಿಯಲ್ಲಿ ಸೃಷ್ಟಿಸಿರಬೇಕೆಂದು ತೋರುತ್ತಿದ್ದಿತು, ಏಕೆಂದರೆ, ಅವನಲ್ಲಿ ನೆಲಸಿದ್ದ ಸಮಸ್ತ ಗುಣಗಳಿಗೂ ಪರಪ್ರಯೋಜನವೇ ಧ್ಯೇಯವಾಗಿ ಅವು ಸ್ವಾರ್ಥದೂರವಾಗಿ ಪರಾರ್ಥೈಕ ಫಲವುಳ್ಳವಾಗಿದ್ದುವು. ಅವನ ರಾಜ್ಯಕ್ಕೆ ಸಮುದ್ರಗಳೇ ಮೇರೆ, ಸಮುದ್ರಗಳೇ ರಕ್ಷಣೆಯ ಜಲದುರ್ಗಗಳು, ಸುವಿಸ್ತರವಾದ ಆ ರಾಜ್ಯವನ್ನೂ ಅವನು ಅನಾಯಾಸವಾಗಿ **ಅದು ಕೇವಲ ಒಂದೇ ಒಂದು ಪಟ್ಟಣವಾಗಿದ್ದರೆ ಹೇಗೋ ಹಾಗೆ** ಶಾಸನ ಮಾಡುತ್ತಿದ್ದನು ಭೂಮಂಡಲಕ್ಕೆಲ್ಲ ಅವನೊಬ್ಬನೇ ಏಕೈಕ ಪ್ರಭುವಾದ ಸಮ್ರಾಟನಾಗಿದ್ದನು

ದಿಲೀಪನಿಗೆ ಸುದಕ್ಷಿಣಾದೇವಿಯೆಂಬ ಪಟ್ಟಮಹಿಷಿಯಿದ್ದಳು. ಅವಳು ಮಗಧರಾಜ ವಂಶದವಳು, ದಾಕ್ಷಿಣ್ಯಶೀಲೆ, ಕರುಣಾಮಯಿ. ತೇಜಸ್ವಿನಿಯೂ, ಮನಸ್ವಿನಿಯೂ ಮತ್ತು ಸೌಭಾಗ್ಯಶಾಲಿನಿಯೂ ಆಗಿ ಲಕ್ಷ್ಮೀಸದೃಶಳಾಗಿದ್ದ ಸುದಕ್ಷಿಣಾದೇವಿಯು ತನ್ನ ಹೆಂಡತಿಯಾಗಿದ್ದುದಕ್ಕಾಗಿ ದಿಲೀಪನು ಆನಂದಿಸುತ್ತಿದ್ದನು. ದಿಲೀಪನು ತನಗೆ ಅನುರೂಪಳಾದ ಧರ್ಮಪತ್ನಿಯಾಗಿದ್ದ (ಆತ್ಮಾನುರೂಪಳಾಗಿದ್ದ) ಸುದಕ್ಷಿಣಾದೇವಿಯಲ್ಲಿ ಪುತ್ರನನ್ನೊಂದು ಕಂಡೇನೆಂದು ಅಭಿಲಾಷೆಪಡುತ್ತ ಕಾಲವನ್ನು ಕಳೆಯುತ್ತಿದ್ದನು. ಕೊನೆಗೆ ಅವನು ರಾಜ್ಯಭಾರವನ್ನು ಸ್ವಲ್ಪಕಾಲ ಸಚಿವರಿಗೊಪ್ಪಿಸಿ, ಸಂತಾನಾರ್ಥವಾಗಿ ಬ್ರಹ್ಮನನ್ನರ್ಚಿಸಿ ಪತ್ನೀ ಸಮೇತನಾಗಿ ತಮ್ಮ ಕುಲಗುರುವಾದ ವಸಿಷ್ಠನ ಆಶ್ರಮವನ್ನು ಕುರಿತು ಪ್ರಯಾಣಮಾಡಿದನು ಆ ದಂಪತಿಗಳು "ಸ್ನಿಗ್ಧಗಂಭೀರ ನಿರ್ಘೋಷ"ವುಳ್ಳ ಸೊಗಸಾದ ರಥದಲ್ಲಿ ಕುಳಿತು ಪ್ರಯಾಣಮಾಡಿದರು. ಆಶ್ರಮ ಪೀಡೆಯಾಗಬಾರದೆಂಬ ಉದ್ದೇಶದಿಂದ ಅವರಿಬ್ಬರೂ ಮಿತಪರಿವಾರ

---

* ಎಂದರೆ ಅವನ ರಾಜ್ಯದಲ್ಲಿ ಕಳ್ಳತನವೇ ನಡೆಯುತ್ತಿರಲಿಲ್ಲವೆಂದು ತಾತ್ಪರ್ಯ. ಇದರಲ್ಲಿ ಅಸಂಭವವಾದುದೇನೂ ಇಲ್ಲ. ಚಂದ್ರಗುಪ್ತನ ಕಾಲದಲ್ಲಿ ಮನೆಗಳಿಗೆ ಬೀಗವನ್ನು ಹಾಕಬೇಕಾದ ಅವಶ್ಯಕತೆಯೇ ಇರಲಿಲ್ಲವೆಂದು ಮೆಗಾಸ್ತನೀಸನು ಬರೆದಿಟ್ಟಿದ್ದಾನೆ. ಕಾಲಿದಾಸನ ಕಾಲದಲ್ಲಿ ಕೂಡ ಕಳ್ಳರ ಬಾಧೆಯು ಇರಲಿಲ್ಲವೆಂದು ತೋರುತ್ತದೆ.

ಡೊಡನೆ ಹೊರಟಿದ್ದರು. ಆದರೂ ಅವರ ತೇಜೋವಿಶೇಷದಿಂದ ಅವರೊಡನೆ ದೊಡ್ಡದೊಂದು ಸೈನಿಕ ತಂಡವೇ ಪ್ರಯಾಣಮಾಡುತ್ತಿದ್ದಂತೆ ಭಾಸವಾಗು ತ್ತಿದ್ದಿತು ಅವರು ಪ್ರಯಾಣಮಾಡುತ್ತಿದ್ದಾಗ ಶಾಲವೃಕ್ಷಗಳಿಂದಲೂ, ವಹ . . '' "ಪುಷ್ಪರೇಣುಪೂರಿತ' ವಾಗಿ ಬೀಸುತ್ತಿದ್ದ ಮಂದಮಾರುತದ ಸುಖಸ್ಪರ್ಶವನ್ನು ಅನುಭವಿಸಿ ಅವರು ಆನಂದಿಸಿದರು ಆ ಚಕ್ರವರ್ತಿ ದಂಪತಿಗಳು ಪ್ರಯಾಣಮಾಡುತ್ತಿದ್ದ ರಥದ ಸ್ನಿಗ್ಧ ಗಂಭೀರ ನಿರ್ಘೋಷವನ್ನು ಕೇಳಿ-ಮೇಘವು ಗುಡುಗುತ್ತಿದ್ದಿತೆಂಬ ಭ್ರಾಂತಿಯಿಂದ- ನವಿಲುಗಳು ಕೇಕೆಹಾಕುತ್ತಿದ್ದುವು ಅವುಗಳ ಕೇಕಾಧ್ವನಿಗಳು ಷಡ್ಜಸ್ವರ ಸಂವಾದಿನಿಗಳಾಗಿ ಮನೋಭಿರಾಮವೆನಿಸಿದ್ದುವು ಆ ನವಿಲುಗಳ ಕೇಕಾ ಧ್ವನಿಗಳನ್ನು ಕೇಳಿ ಅವರಿಬ್ಬರಿಗೂ ಹರ್ಷವುಂಟಾಯಿತು ಜೋಡಿ ಜಿಂಕೆ ಗಳು ಮಾರ್ಗದಿಂದ ಕೊಂಚ ಓರೆಯಾಗಿ ಓಡಿಹೋಗಿ ರಥವನ್ನೇ ದೃಷ್ಟಿಸಿ ನೋಡುತ್ತಿದ್ದುವು ಸುದಕ್ಷಿಣಾದೇವಿಯು ಹೆಣ್ಣು ಜಿಂಕೆಗಳೊಡನೆಯೂ, ದಿಲೀಪನು ಗಂಡು ಜಿಂಕೆಗಳೊಡನೆಯೂ, ಪರಸ್ಪರವಾಗಿ ಅಕ್ಷಿಸಾದೃಶ್ಯವನ್ನು ನೋಡಿ ಸಂತಸಪಡುತ್ತಿದ್ದರು ಅಂತರಿಕ್ಷದಲ್ಲಿ ಕಲಧ್ವನಿಯಿಂದ ಕೂಗುತ್ತ ಸಾಲುಗಟ್ಟಿ ಹಾರಾಡುತ್ತಿದ್ದ ಸಾರಸಗಳ ಶ್ರೇಣಿಯು ಪುಷ್ಪತೋರಣ ಭ್ರಾಂತಿ ಯನ್ನುಂಟು ಮಾಡುತ್ತಿದ್ದಿತು. ಸ್ತಂಭಗಳ ಆಸರೆಯಿಲ್ಲದ ಪುಷ್ಪತೋರಣ ದಂತಿದ್ದ ಸಾರಸ ಪಕ್ಷಿಗಳ ಶ್ರೇಣಿಯನ್ನು ಆ ಚಕ್ರವರ್ತಿ ದಂಪತಿಗಳು ಆಗಾಗ ಅಲ್ಲಲ್ಲಿ ತಲೆಯೆತ್ತಿ ನೋಡುತ್ತಿದ್ದರು ರಥವು ಹೋಗುತ್ತಿದ್ದ ದಿಕ್ಕಿಗೇ ಗಾಳಿ ಬೀಸುತ್ತಿದ್ದ ಕಾರಣ, ಕುದುರೆಗಳ ಗೊರಸಿನ ಆಘಾತದಿಂದ ಮೇಲಕ್ಕೆದ್ದ ಧೂಳು ಸುದಕ್ಷಿಣಾದೇವಿಯ ಮುಂಗುರುಳನ್ನಾಗಲಿ, ದಿಲೀಪನ ತಲೆಯ ಮೇಲೆ ಧರಿಸಿದ್ದ ಉಷ್ಣೀಷವನ್ನಾಗಲೀ ಸೋಂಕುತ್ತಿರಲಿಲ್ಲ ಹೀಗೆ ಅನುಕೂಲ ಮಾರುತವಿದ್ದ ಕಾರಣ, ಆ ಚಕ್ರವರ್ತಿ ದಂಪತಿಗಳ ಮನೋರಥ ಸಿದ್ಧಿಯು ಸೂಚಿತವಾಗುತ್ತಿದ್ದಿತು ಸರೋವರಗಳ ಅಲೆಗಳಿಂದ ತಂಗಾಳಿಯು ಬೀಸು ತ್ತಿದ್ದಿತು ಆ ಸರೋವರಗಳಲ್ಲಿದ್ದ ಅರವಿಂದಗಳ ಸುಗಂಧವು ಆ ತಂಗಾಳಿ ಯಲ್ಲಿ ತುಂಬಿದ್ದಿತು ಚಕ್ರವರ್ತಿ ದಂಪತಿಗಳು ಆ ತಂಗಾಳಿಯ ಸುಖಸ್ಪರ್ಶ ದಿಂದಲೂ, ಆ ಆಮೋದದಿಂದಲೂ ಸಂತೋಷಿಸುತ್ತಿದ್ದರು. ದಿಲೀಪನಿಂದ

ಗ್ರಾಮಗಳನ್ನು ಪಡೆದಿದ್ದ ಶ್ರೋತ್ರಿಯರು ಆ ಆ ಗ್ರಾಮಗಳಲ್ಲಿ ಆ ದಂಪತಿಗಳನ್ನು ಸತ್ಕರಿಸಿ ಆಶೀರ್ವದಿಸುತ್ತಿದ್ದರು ಮಾರ್ಗ ಮಧ್ಯದಲ್ಲಿದ್ದ ಗ್ರಾಮಗಳಲ್ಲಿ ಗ್ರಾಮವೃದ್ಧರು ಹೊಸದಾಗಿ ತೆಗೆದ ಹಸುವಿನ ಬೆಣ್ಣೆಯನ್ನು ಕಾಣಿಕೆಯಾಗಿ ಒಪ್ಪಿಸುತ್ತಿದ್ದರು ಚಕ್ರವರ್ತಿ ದಂಪತಿಗಳು ಗ್ರಾಮವೃದ್ಧರೊಡನೆ ಕುಶಲಪ್ರಶ್ನೆಮಾಡಿ ಸಮೀಪದಲ್ಲಿದ್ದ ಕಾಡುಮರಗಳ ಹೆಸರುಗಳನ್ನು (ಎಂದರೆ ಅವು ಯಾವ ಮರಗಳೆಂಬುದನ್ನು) ಅವರಿಂದ ಕೇಳಿ ತಿಳಿದುಕೊಳ್ಳುತ್ತಿದ್ದರು [1] ಅನಂತರ ಅವರು ತಮ್ಮ ಪ್ರಯಾಣವನ್ನು ಮುಂದುವರಿಸುತ್ತಿದ್ದರು ಶುಭ್ರವಾದ ಉಡುಪನ್ನು ಧರಿಸಿ-ಶುದ್ಧ ವೇಷದಿಂದ-ರಥದಲ್ಲಿ ಪ್ರಯಾಣಮಾಡುತ್ತಿದ್ದ ಸುದಕ್ಷಿಣಾ-ದಿಲೀಪರು ಹಿಮವಿಮುಕ್ತ ಚಿತ್ರಾ-ಚಂದ್ರಮರಂತೆ ಅನಿರ್ವಚನೀಯ ಶೋಭೆಯಿಂದ ಕಂಗೊಳಿಸಿದರು ಅತ್ಯಂತ ಸುಂದರನೂ, ಸಕಲಶಾಸ್ತ್ರಪಾರಂಗತನೂ ಮತ್ತು ಕಲಾನಿಷ್ಣಾತನೂ ಆದ ಪಂಡಿತನಂತೆ ಮನೋಹರ ರೂಪದಿಂದಲೂ, ವಿದ್ಯಾ ಪ್ರೌಢಿಯಿಂದಲೂ ಕಂಗೊಳಿಸುತ್ತಿದ್ದ ದಿಲೀಪನು ತನ್ನ ಪತ್ನಿಗೆ ಕಾನನದ ಸೌಂದರ್ಯವನ್ನು ವರ್ಣಿಸಿ ಹೇಳುತ್ತ ಪ್ರಯಾಣಮಾಡುತ್ತಿದ್ದನು, ಆದಕಾರಣ ರಥವು ಎಷ್ಟು ದೂರ ಸಾಗಿತೆಂಬುದರ ಅರಿವೇ ಅವರಿಗಿರಲಿಲ್ಲ. ಸುದಕ್ಷಿಣಾದೇವಿಯಲ್ಲಿ ಮೈತ್ರಿಯಿಂದಿದ್ದ (ಎಂದರೆ "ಮಹಿಷೀಸಖ ನಾಗಿದ್ದ) ದಿಲೀಪನ [†] ಸಾಯಂಕಾಲದ ವೇಳೆಗ ಸಂಯಮಿಶ್ರೇಷ್ಠನಾದ ವಸಿಷ್ಠ ಮಹರ್ಷಿಯ ಆಶ್ರಮಕ್ಕೆ ಬಂದು ಸೇರಿದನು ಆ ವೇಳೆಗೆ ರಥದ ಕುದುರೆಗಳೂ ದಣಿದಿದ್ದುವು

ಚಕ್ರವರ್ತಿ ದಂಪತಿಗಳು ಆಶ್ರಮವನ್ನು ಸೇರುವ ಹೊತ್ತಿಗೆ ಅನೇಕ

---

[1] ಇದರಿಂದ ಚಕ್ರವರ್ತಿ ದಂಪತಿಗಳ ದುರಹಂಕಾರ ದೂರವಾದ ಸರಳತೆಯೂ ವ್ಯಕ್ತವಾಗುತ್ತದೆ ಅಲ್ಲದೆ, ಅವರಿಬ್ಬರೂ ತಮ್ಮೊಡನೆ ಮಾತನಾಡಿ ಕಾಡುಮರಗಳ ಹೆಸರುಗಳನ್ನು ತಮ್ಮಿಂದ ತಿಳಿದುಕೊಂಡುದಕ್ಕಾಗಿ ಗ್ರಾಮವೃದ್ಧರಿಗೆಷ್ಟು ಸಂತೋಷವಾಗಿರಬಹುದೆಂಬುದನ್ನೂ ನಾವು ಊಹಿಸಬಹುದಾಗಿದೆ

[†] "ಮಹಿಷೀಸಖ" ಎಂಬ ಒಂದು ಮಾತಿನಿಂದಲೇ ಅವರಿಬ್ಬರ ಮಧುರ ದಾಂಪತ್ಯವನ್ನು ಕವಿಯು ಬಹಳ-ಸೊಗಸಾಗಿ ಸೂಚಿಸಿದ್ದಾನೆ.

ತಪಸ್ವಿಗಳು ಸಮಿತ್ತುಗಳನ್ನೂ, ದರ್ಭೆಗಳನ್ನೂ ಮತ್ತು ಫಲಗಳನ್ನೂ ವನಾಂತರದಿಂದ ಸಂಗ್ರಹಿಸಿ ಆಶ್ರಮಕ್ಕೆ ಹಿಂದಿರುಗುತ್ತಿದ್ದರು ಆಹಿತಾಗ್ನಿ ಜ್ವಾಲೆಗಳು ಹೋಮಕುಂಡಗಳಿಂದ ಅವರನ್ನು ಸ್ವಾಗತಿಸುತ್ತಿದ್ದುವು*. ವಸಿಷ್ಠ ಮಹರ್ಷಿಗಳ ಆಶ್ರಮದಲ್ಲಿದ್ದ ಪರ್ಣಶಾಲೆಗಳ ಬಾಗಿಲುಗಳಿಗೆ ಬಂದು ತುಂಬಿಕೊಂಡಿದ್ದ ಜಿಂಕೆಗಳನ್ನು ಋಷಿಪತ್ನಿಯರು ತಮ್ಮ ಮಕ್ಕಳಂತೆ ಭಾವಿಸಿ ವಾಡಿಕೆಯಂತೆ ನೀವಾರ ಧಾನ್ಯವನ್ನು ಅವಕ್ಕೆ ಅಕ್ಕರೆಯಿಂದ ತಿನ್ನಿಸುತ್ತಿದ್ದರು ಮುನಿಕನ್ಯೆಯರು ಗಿಡಮರಗಳ ಪಾತಿಗಳ ತುಂಬ ನೀರೆರೆದು, ಪಕ್ಷಿಗಳು ಭಯವಿಲ್ಲದೆ ಅವುಗಳಲ್ಲಿ ನೀರು ಕುಡಿಯಲು ಅವಕಾಶವಾಗಲೆಂಬ ಭಾವನೆಯಿಂದ ಒಡನೆಯೇ ದೂರವಾಗಿ ಓಡಿಬರುತ್ತಿದ್ದರು ಬಿಸಿಲು ಇಳಿಮುಖವಾಗಿ ಸೂರ್ಯಾಸ್ತವಾಗುವ ವೇಳೆಗೆ ಪರ್ಣಶಾಲೆಗಳ ಬಳಿಯಲ್ಲಿ ನೀವಾರ ಧಾನ್ಯದ ಗುಡ್ಡೆಗಳನ್ನು ಹಾಕುತ್ತಿದ್ದರು, ಆಶ್ರಮದ ಜಿಂಕೆಗಳು ಅಲ್ಲಿ ಮಲಗಿ ಆ ಧಾನ್ಯವನ್ನು ತಿಂದು ಮೆಲುಕು ಹಾಕುತ್ತಿದ್ದುವು, ಕತ್ತಲೆಯಾಗುವ ವೇಳೆಗೆ ಜಿಂಕೆಗಳು ಮೆಲುಕುಹಾಕುವುದು ಮುಗಿಯುತ್ತಿದ್ದಿತು. ಪರ್ಣಶಾಲೆಗಳಲ್ಲಿ ಮುನಿಗಳು ಅಗ್ನಿಯನ್ನು ಪ್ರಜ್ವಲಮಾಡಿ ಹೋಮ ಮಾಡುತ್ತಿದ್ದರು ಹೋಮಧೂಮವು ಗಾಳಿಯಲ್ಲಿ ಹರಡಿ ಅತಿಥಿಗಳನ್ನು ಪುನೀತರನ್ನಾಗಿ ಮಾಡುತ್ತಿದ್ದಿತು.

ದಿಲೀಪನು, ಕದುರೆಗಳ ದಣಿವಾರಿಸಲು ವಿಶ್ರಾಂತಿಯನ್ನು ಕೊಡಬೇಕೆಂದು ಸಾರಥಿಗೆ ತಿಳಿಸಿ, ತಾನು ರಥದಿಂದಿಳಿದು, ಸುದಕ್ಷಿಣಾದೇವಿಯನ್ನು ರಥದಿಂದ ಕೆಳಕ್ಕಿಳಿಸಿಕೊಂಡನು ಸಂಯಮಿಗಳೂ ಮತ್ತು ಸಭ್ಯರೂ (ಎಂದರೆ ಸಾಧುಗಳೂ), ತಮ್ಮ ರಕ್ಷಕನೂ ಮತ್ತು ಶಾಸ್ತ್ರಚಕ್ಷುವಾಗಿ ಶಾಸ್ತ್ರ

---

* ಮನೆಗೆ ಹಿಂತಿರುಗಿದ ತಂದೆಯನ್ನು ಮಕ್ಕಳು ಸ್ವಾಗತಿಸುವಂತೆ ಆಶ್ರಮಕ್ಕೆ ಹಿಂತಿರುಗಿದ ತಪಸ್ವಿಗಳನ್ನು ಆಹಿತಾಗ್ನಿಜ್ವಾಲೆಗಳು ವೇದಿಕೆಯಿಂದ ಸ್ವಾಗತಿಸುತ್ತವೆಂಬುದು ವೇದದಲ್ಲಿರುವ ವರ್ಣನೆ. ಕಾಲಿದಾಸನು ಕೇವಲ ಶಕುನ ಶಾಸ್ತ್ರದಿಂದ ಹಿಡಿದು ವೇದ ವೇದಾಂತಗಳವರೆಗೂ ಸಕಲ ಶಾಸ್ತ್ರಗಳಲ್ಲಿಯೂ ಪಾರಂಗತನಾಗಿದನೆಂಬುದಕ್ಕೆ ಅವನ ಕಾವ್ಯಗಳಲ್ಲಿ ಅನೇಕ ನಿದರ್ಶನಗಳು ದೊರೆಯುತ್ತವೆ. ಅಷ್ಟು, ಮಟ್ಟಿನ ವ್ಯಾಸಂಗಕ್ಕೆ ಅವನಿಗೆ ಅವಕಾಶವೆಲ್ಲಿ ದೊರೆಯಿತೆಂದು ಮನಸ್ಸಿಗೆ ವಿಸ್ಮಯವಾಗುತ್ತದೆ

ವಿಧಿಗಳಿಗನುಸಾರವಾಗಿ ವರ್ತಿಸುತ್ತಿದ್ದವನೂ ಆಗಿದ್ದ ದಿಲೀಪನಿಗೂ,ಅವನ ಸಹ ಧರ್ಮಿಣಿಯಾದ ಸುದಕ್ಷಿಣಾದೇವಿಗೂ ಗೌರವ ಪುರಸ್ಸರವಾದ ಸ್ವಾಗತವನ್ನಿತ್ತರು ಅನಂತರ ಚಕ್ರವರ್ತಿ ದಂಪತಿಗಳು ತಪೋನಿಧಿಯಾದ ವಸಿಷ್ಠರನ್ನು ಕಾಣಲು ತೆರಳಿದರು ವಸಿಷ್ಠ ಮಹರ್ಷಿಯು ಅರುಂಧತೀದೇವಿಯೊಡನೆ–ಸ್ವಾಹಾದೇವೀಸಮೇತನಾದ ಅಗ್ನಿದೇವನಂತೆ ಕಂಗೊಳಿಸುತ್ತ–ಸಾಯಂಕಾಲದ ಜಪಹೋಮಾದಿಗಳ ಅನುಷ್ಠಾನದಲ್ಲಿದ್ದನು ದಿಲೀಪನು ವಸಿಷ್ಠಮಹರ್ಷಿಯ ಅನುಷ್ಠಾನವು ಪೂರೈಸುವವರೆಗೂ ಕಾದಿದ್ದು ಅನಂತರ ಆತನನ್ನು ಸಂದರ್ಶಿಸಿದನು ದಿಲೀಪನೂ, ಸುದಕ್ಷಿಣಾದೇವಿಯೂ ಅರುಂಧತೀ ವಸಿಷ್ಠರ ಪಾದಗಳನ್ನು ಮುಟ್ಟಿ ನಮಸ್ಕರಿಸಿದರು ಗುರುವೂ ಮತ್ತು ಗುರುಪತ್ನಿಯೂ ಅದಕ್ಕೆ ಪ್ರತಿಯಾಗಿ ಅವರಿಬ್ಬರಿಗೂ ಪ್ರೀತಿಯಿಂದ ಆಶೀರ್ವಾದ ಮಾಡಿದರು. ಅನಂತರ ಅವರಿಬ್ಬರಿಗೂ ಆತಿಥ್ಯ ನಡೆದು, ದೂರಪ್ರಯಾಣದಿಂದ ಅವರಿಬ್ಬರಿಗೂ ಉಂಟಾಗಿದ್ದ ಮಾರ್ಗಾಯಾಸವು ಪರಿಹಾರವಾದ ಮೇಲೆ ರಾಜ್ಯಾಶ್ರಮ ಮುನಿಯಾದ* ರಾಜರ್ಷಿ ದಿಲೀಪನನ್ನು ವಸಿಷ್ಠ ಮಹರ್ಷಿಯು ಕುಶಲಪ್ರಶ್ನೆ ಮಾಡಿ ರಾಜ್ಯದ ಯೋಗಕ್ಷೇಮವನ್ನೂ ಮತ್ತು ಭ್ಯುದಯವನ್ನೂ ಕುರಿತು ವಿಚಾರಮಾಡಿದನು ಆಮೇಲೆ ದಿಲೀಪನು ಅಥರ್ವವೇದನಿಧಿಯಾದ ವಸಿಷ್ಠಮಹರ್ಷಿಯೊಡನೆ ಅರ್ಥಗರ್ಭಿತವಾದ ಮಾತುಗಳಿಂದ ತನ್ನ ಇಂಗಿತವನ್ನು ಬಿನ್ನೈಸಿ ತಿಳಿಸಿದುದೇನೆಂದರೆ "ದುರ್ಭಿಕ್ಷ ಮುಂತಾದ ದೈವಿಕವಾದ ಆಪತ್ತುಗಳನ್ನೂ, ಚೋರಭಯ ಮುಂತಾದ ಮಾನುಷವಾದ ಆಪತ್ತುಗಳನ್ನೂ ನಿವಾರಣೆ ಮಾಡಲು ತಾವು ಸಿದ್ಧವಾಗಿಯೇ ಇರುವಿರಿ ಹೀಗಿರುವಲ್ಲಿ, ನನ್ನ ರಾಜ್ಯದ ಸಪ್ತಾಂಗಗಳೂ ಕುಶಲವಾಗಿರುವುದು ಯುಕ್ತವಾಗಿಯೇ ಇದೆ. ಕಂಡ ಗುರಿಯನ್ನು ಮಾತ್ರವೇ ನನ್ನ ಶರಗಳು ಭೇದಿಸಬಲ್ಲವು. ಪರೋಕ್ಷವಾಗಿ ದೂರದಲ್ಲಿರುವ ಶತ್ರುವನ್ನು ಕೂಡ

---

* "ರಾಜ್ಯಾಶ್ರಮ ಮುನಿಂ" ಎಂದು ಮೂಲದಲ್ಲಿದೆ ಧರ್ಮನಿಧಿಯಾದ ದಿಲೀಪನು ಒಟ್ಟು ರಾಜ್ಯವೇ ಒಂದು ಋಷ್ಯಾಶ್ರಮದಂತೆ ಸರಳ ಸುಂದರವಾದ ಸಾಧು ಜೀವನದಿಂದ ಕೂಡಿರುವಂತೆ ಪ್ರಭುತ್ವ ಮಾಡುತ್ತಾ ಮುನಿಯಂತೆ ವಾಸಿಸುತ್ತಿದ್ದುದನ್ನು ಅದು ಸೂಚಿಸುತ್ತದೆ.

ನಿಗ್ರಹಿಸಬಲ್ಲ ಮಂತ್ರ ಕರ್ತೃಗಳಾದ ತಮ್ಮ ಮಂತ್ರಗಳ ಮುಂದೆ ನನ್ನ ಶರಗಳು ನಿರರ್ಥಕವೇ ಸರಿ ತಾವು ವಿಧಿವತ್ತಾಗಿ ಅಗ್ನಿಯಲ್ಲಿ ಹೋಮ ಮಾಡುವ ಹವಿಸ್ಸೇ ಪರಿಣಾಮದಲ್ಲಿ ಸಸ್ಯಪೋಷಣೆಗೆ ವೃಷ್ಟಿಯನ್ನು ಕೊಡುತ್ತದೆ ಹಾಗೆ ವೃಷ್ಟಿಯಾಗದೆ ಹೋದರೆ, ಸಸ್ಯಗಳೆಲ್ಲ ಒಣಗಿ ನಾಶವಾದಾವು ನನ್ನ ಪ್ರಜೆಗಳು ಪುರುಷಾಯುಷ್ಯವನ್ನು ಪ್ರಾರ್ತಿಯಾಗಿ ಹೊಂದಿ ನನ್ನ ರಾಜ್ಯದಲ್ಲಿ ನಿರ್ಭಯದಿಂದಿದ್ದಾರೆ ಅತಿವೃಷ್ಟಿ ಮುಂತಾದ ಈತಿಬಾಧೆಗಳಾವುವೂ ಇಲ್ಲದೆ ಅವರೆಲ್ಲರೂ ಸುಖ ಸಂತೋಷಗಳಿಂದಿದ್ದಾರೆ ಇಷ್ಟಕ್ಕೆಲ್ಲ ತಮ್ಮ ಬ್ರಹ್ಮವರ್ಚಸ್ಸಿನ ಪ್ರಭಾವವೇ ಕಾರಣ ಬ್ರಹ್ಮಪುತ್ರರಾದ ತಮ್ಮಂತಹ ಗುರುಗಳು ಯೋಗಕ್ಷೇಮವನ್ನು ವಹಿಸಿ ನೋಡಿಕೊಳ್ಳುತ್ತಿರುವಲ್ಲಿ, ನನ್ನ ಸಂಪತ್ತು ಸಿರಾಪದವೆನಿಸಿ ಅವಿಚ್ಛಿನ್ನವಾಗಿ ವೃದ್ಧಿಹೊಂದದಿರುವ ಬಗೆಯಾದರೂ ಹೇಗೆ? ಆದಾಗ್ಯೂ, ತಮ್ಮ ಸೊಸೆಯಾದ ಇವಳಲ್ಲಿ ಅನುರೂಪನಾದ ಮಗನನ್ನು ಕಾಣದಿರುವ ನನಗೆ, ದ್ವೀಪಗಳಿಂದ ಒಡಗೂಡಿ ರತ್ನಗಳನ್ನೇ ಕೊಡುವ ಮೇದಿನಿಯ ಪ್ರಭುತ್ವವಿದ್ದೂ ಅದರಿಂದ ಸಂತೋಷವಿಲ್ಲದಂತಾಗಿದೆ. ನಮ್ಮ ವಂಶದಲ್ಲಿ ನನ್ನ ಕಾಲಾನಂತರ ಪಿಂಡ ವಿಚ್ಛೇದವಾಗುವುದೆಂದು ಪಿತೃಗಳು ಶಂಕಿಸುತ್ತಿದ್ದಾರೆ , ನಾನು ಆಚರಿಸುವ ಶ್ರಾದ್ಧಗಳಲ್ಲಿ ಅವರಿಗೆ ಪೂರ್ಣ ತೃಪ್ತಿಯೆಂಬುದಿಲ್ಲವೆಂದು ತೋರುತ್ತದೆ ನನ್ನ ಕಾಲಾನಂತರ ತಮಗೆ ತರ್ಪಣವು ದುರ್ಲಭವೆಂದು ಭಾಪಿಸಿ ಅವರು ನಿಟ್ಟುಸಿರು ಬಿಡುತ್ತಾರೆ ನಾನು ಕೊಡುವ ಜಲ ತರ್ಪಣವು ಅವರ ನಿಟ್ಟುಸಿರಿನಿಂದ ಬಿಸಿಯಾಗುತ್ತದೆ ಅವರು ಆ ಬಿಸಿಯೇರಿದ ನೀರನ್ನು ಕುಡಿಯುತ್ತಾರೆ ತಪೋದಾನ ಸಮುದ್ಭವವಾದ ಪುಣ್ಯವು ಲೋಕಾಂತರ ಸುಖವನ್ನು ಕೊಡುತ್ತದೆ ಶುದ್ಧವಂಶ ಸಂತತಿಯು ಲೋಕಾಂತರ ಸುಖಕ್ಕೂ ಇಹಲೋಕ ಸುಖಕ್ಕೂ ಕಾರಣವಾಗಿ ಅವೆರಡನ್ನೂ ಕೊಡುತ್ತದೆ ವಿಧಾತ ಸದೃಶರಾದ[1] ತಾವು ಸಂತತಿ ಹೀನನಾದ ನನ್ನನ್ನು ಕಂಡು—ಸ್ನೇಹಪ್ರೀತಿಗಳಿಂದ ತಾವೇ ಬೆಳಯಿಸಿದ ಒಂದು ಆಶ್ರಮ ವೃಕ್ಷವು ಅಫಲವಾದುದನ್ನು ಕಂಡಾಗಿನಂತೆ—ಮನೋವ್ಯಥೆಪಡದಿರುವ ಬಗೆಹೇಗೆ? ಭಗವನ್ !*

---

[1] ದಿಲೀಪನಿಗೆ ವಸಿಷ್ಠ ಮಹರ್ಷಿಯಲ್ಲಿ ಎಷ್ಟು ಗೌರವವಿದ್ದಿತೆಂಬುದು ಈ ಮಾತಿನಿಂದ ವ್ಯಕ್ತವಾಗುತ್ತದೆ

ಸಂತತಿಯನ್ನು ಪಡೆದು ಪಿತೃಋಣವನ್ನು ತೀರಿಸಿಲ್ಲದ ನಾನು-ಬಂಧನಕ್ಕೊಳಗಾಗಿ ಬಿಡುಗಡೆ ಹೊಂದಿಲ್ಲದ ಆನೆಯು ಬಂಧನಸ್ತಂಭದ ದೆಸೆಯಿಂದ ಹಿಂಸೆ ಪಡುವಂತೆ-ಅಸಹ್ಯವಾದ ದುಃಖವನ್ನು ಅನುಭವಿಸುತ್ತಿದ್ದೇನೆ ತಂದೆಯಂತೆ ಪೂಜ್ಯರಾಗಿರುವ ತಾವು ಇಕ್ಷ್ವಾಕು ವಂಶಕ್ಕೆ ದುರ್ಲಭವಾಗಿರುವ ಈ ಸಂತಾನ ಭಾಗ್ಯವು ಲಭಿಸುವಂತೆ ಅನುಗ್ರಹ ಮಾಡಬೇಕೆಂದು ಪ್ರಾರ್ಥಿಸುತ್ತೇನೆ ಸಿದ್ಧಿಗಳೆಲ್ಲ ತಮ್ಮ ಅಧೀನ" ದಿಲೀಪನು ಈ ರೀತಿ ವಿಜ್ಞಾಪಿಸಿದ ಮೇಲೆ ವಸಿಷ್ಠ ಮಹರ್ಷಿಯು ಧ್ಯಾನಸ್ತಿಮಿತಲೋಚನನಾಗಿ, ಮೀನುಗಳು ನಿದ್ರಿಸುತ್ತಿದ್ದ ಸರೋವರದಂತಿದ್ದನು ಶುದ್ಧಾಂತಃಕರಣನಾದ ವಸಿಷ್ಠ ಮಹರ್ಷಿಯು ಏಕಾಗ್ರಚಿತ್ತದ ಪ್ರಣಿಧಾನದಿಂದ ಸಂತಾನ ಪ್ರತಿಬಂಧ ಕಾರಣವನ್ನು ನಿಶ್ಚೈಸಿ ಅದನ್ನು ದಿಲೀಪನಿಗೆ ತಿಳಿಸಿದನು 'ಹಿಂದೆ ನೀನು ಮಹೇಂದ್ರನನ್ನು ಕಂಡು ಸ್ವರ್ಗದಿಂದ ಭೂಲೋಕಕ್ಕೆ ಹಿಂದಿರುಗುತ್ತಿದ್ದೆ ಆಗ ಕಲ್ಪತರುವಿನ ನೆರಳಿನಲ್ಲಿ ಕಾಮಧೇನುವು ಮಲಗಿದ್ದಿತು ನೀನು ರಥವನ್ನು ನಿಲ್ಲಿಸಿ ಕಾಮಧೇನುವಿಗೆ ಪ್ರದಕ್ಷಿಣ ನಮಸ್ಕಾರ ಮಾಡಲಿಲ್ಲ ನೀನು ನಿನ್ನ ಪತ್ನಿಯನ್ನು ಕುರಿತು ಚಿಂತಿಸುತ್ತಿದ್ದ ಕಾರಣ, ಕಾಮಧೇನುವಿನ ಕಡೆಗೇ ನೋಡದೆ ಹೊರಟುಹೋದೆ ಇದು ಸಾಧುವಲ್ಲ ತನ್ನನ್ನು ಅಲಕ್ಷ್ಯಮಾಡಿದುದಕ್ಕಾಗಿ, ಕಾಮಧೇನುವಿನಿಂದ ನಿನಗೆ ಶಾಪ ಬಂದಿತು ಕಾಮಧೇನು, ಎಲೈ ರಾಜನೇ! ನನ್ನಲ್ಲಿ ತಿರಸ್ಕಾರ ಬುದ್ಧಿಯನ್ನು ತೋರಿಸಿರುವೆ ನನ್ನ ಸಂತತಿಯನ್ನು ಆರಾಧಿಸದಲ್ಲದೆ ನಿನಗೆ ಸಂತತಿಯಾಗುವುದು ಬೇಡ' ಎಂದು ಶಪಿಸಿತು ಕಾಮಧೇನುವು ಶಪಿಸಿದ ಮಾತುಗಳು ನಿನಗೂ ಕೇಳಿಸಲಿಲ್ಲ; ನಿನ್ನ ಸಾರಥಿಗೂ ಕೇಳಿಸಲಿಲ್ಲ ಸುರಗಂಗೆಯ ಪ್ರವಾಹದ ಮೊರೆತದ ಧ್ವನಿಯಿಂದಲೂ, ಸುರಗಂಗಾ ಪ್ರವಾಹದಲ್ಲಿ ಕ್ರೀಡಿಸುತ್ತಿದ್ದ ದಿಗ್ಗಜಗಳ ಬೃಂಹಿತ ಧ್ವನಿಯಿಂದಲೂ, ನಿಮ್ಮಿಬ್ಬರಲ್ಲಾರಿಗೂ ಆ ಶಾಪವಾಕ್ಯಗಳು ಕೇಳಿಸಲಿಲ್ಲ ಪೂಜ್ಯವಸ್ತುವಾದ ಕಾಮಧೇನುವಿಗೆ ಗೌರವ ತೋರಿಸದೆ ಕರ್ತವ್ಯಲೋಪ ಮಾಡಿದ ಕಾರಣದಿಂದ, ಸಂತಾನ ಪ್ರಾಪ್ತಿಗೆ ಪ್ರತಿಬಂಧಕ

---

* ಕಾಲಿದಾಸ ಮಹಾಕವಿಯು ಕರ್ತವ್ಯನಿಷ್ಠೆಗೆ ಯಾವ ಸ್ಥಾನವನ್ನು ಕೊಟ್ಟಿರುವನೆಂಬುದು ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಚಾರ. ಶಕುಂತಲೆಗೆ ಶಾಪ ಬಂದುದಕ್ಕೂ ಅವಳ ಕರ್ತವ್ಯಲೋಪವೇ ಕಾರಣ

ವುಂಟಾಗಿದೆ ಪಾತಾಲ ಲೋಕದಲ್ಲಿ ವರುಣನು ಕೈಕೊಂಡಿರುವ ದೀರ್ಘ ಕಾಲದ ಯಜ್ಞವು ನಡೆಯುತ್ತಿದೆ ಈಗ ಕಾಮಧೇನುವಿರುವುದು ವರುಣನ ಯಜ್ಞಶಾಲೆಯಲ್ಲಿ. ಆ ಯಜ್ಞಶಾಲೆಯ ದ್ವಾರದಲ್ಲಿ ಸರ್ಪಗಳು ಕಾವಲಿವೆ. ಕಾಮಧೇನುವಿನ ಪ್ರತಿನಿಧಿಯಾಗಿರುವ ನಮ್ಮ ಆಶ್ರಮದ ನಂದಿನೀಧೇನು ವನ್ನು ಶುದ್ಧಾತ್ಮನಾದ ನೀನು ಪತ್ನೀಸಮೇತನಾಗಿ ಆರಾಧಿಸು ಕಾಮಧೇನು ವಿನ ಮಗಳಾದ ನಂದಿನೀಧೇನುವಿಗೆ ನಿನ್ನ ಆರಾಧನೆಯಿಂದ ಸಂತೋಷವುಂಟಾ ದರೆ, ನಂದಿನೀಧೇನುವಿನಿಂದಲೇ ನಿನ್ನ ಇಷ್ಟಾರ್ಥವು ನೆರವೇರುತ್ತದೆ ಕಾಮ ಧೇನುವಿನ ಮಗಳಾದುದರಿಂದ ನಮ್ಮ ನಂದಿನೀಧೇನುವಿಗೂ ಇಷ್ಟಾರ್ಥವನ್ನು ನೆರವೇರಿಸುವ ಸಾಮರ್ಥ್ಯವಿದೆ.'' ವಸಿಷ್ಠ ಮಹರ್ಷಿಯು ಈ ಮಾತುಗಳ ನ್ನಾಡುತ್ತಿರುವಾಗಲೇ, ಶ್ರೇಷ್ಠವಾದ ನಂದಿನೀಧೇನುವು ಕಾಡಿನಿಂದ ಆಶ್ರಮಕ್ಕೆ ಹಿಂದಿರುಗಿತು ನಂದಿನಿಯು ವಸಿಷ್ಠಮಹರ್ಷಿಯ ಹೋಮಧೇನು ಚಿಗುರಿ ನಂತೆ ಕೆಂಪು ಬಣ್ಣದಿಂದ ಕಂಗೊಳಿಸುತ್ತಿದ್ದ ('ಸ್ನಿಗ್ಧ ಪಾಟಲ ವರ್ಣ'ದ) ನಂದಿನೀಧೇನುವಿನ ಹಣೆಯಲ್ಲಿ ಬಿಳಿಯ ಕೂದಲಿನ ವಕ್ರರೇಖೆಯೊಂದಿದ್ದಿತು, ಅದರಿಂದ ಕೂಡಿದ ನಂದಿನೀಧೇನುವು ನವಶಶಿಯಿಂದ ಕೂಡಿದ ಸಂಧ್ಯೆಯಂತೆ ವಿರಾಜಿಸುತ್ತಿದ್ದಿತು ತನ್ನ ಕರುವನ್ನು ಕಂಡಕೂಡಲೇ ಕುಂಡದಂತಿದ್ದ ತನ್ನ ಕೆಚ್ಚಲಿನಿಂದ ಸುಖೋಷ್ಣವಾಗಿರುವ ಕ್ಷೀರವನ್ನು ಸುರಿಸುತ್ತ, ನಂದಿನೀಧೇನುವು ತನ್ನ ಕರುವನ್ನು ಪ್ರೀತಿಯಿಂದ ನೋಡಿತು. ಆ ಕ್ಷೀರವು, ಯಜ್ಞಾನಂತರದ ಅವಭೃತಕ್ಕಿಂತಲೂ ಪವಿತ್ರವಾದುದು ನಂದಿನೀಧೇನುವಿನ ಗೊರಸಿನಿಂದೆದ್ದ ಧೂಳಿನ ಕಣಗಳು ದಿಲೀಪನ ಮೈಗೆಸೋಂಕಿದುವು ಅವುಗಳಿಂದ ಅವನು ತೀರ್ಥ ಸ್ನಾನ ಮಾಡಿದುದಕ್ಕಿಂತಲೂ ಹೆಚ್ಚು ಪರಿಶುದ್ಧನಾದನು ನಂದಿನಿಯ ದರ್ಶನಮಾತ್ರದಿಂದಲೇ ಪುಣ್ಯಲಾಭ ತಾನು ನಂದಿನಿಯ ಸುದ್ದಿಯನ್ನೆತ್ತುವ ವೇಳೆಗೇ ಆ ಹೋಮಧೇನುವು ಅಲ್ಲಿಗೆ ಬಂದುದರಿಂದ, ತಪೋನಿಧಿಯೂ, ನಿಮಿತ್ತ ಜ್ಞನೂ ಆದ ವಸಿಷ್ಠಮಹರ್ಷಿಯು ದಿಲೀಪನ ಮನೋರಥ ಸಿದ್ಧಿಗೆ ಅದೇ ಶುಭ ಶಕುನವೆಂದು ಸೂಚಿಸಿ, ದಿಲೀಪನಿಗೆ ತಿಳಿಸಿದುದೇನೆಂದರೆ · ''ನೋಡು, ರಾಜೇಂದ್ರ ! ನಂದಿನಿಯ ಹೆಸರನ್ನು ಸೂಚಿಸಿದೊಡನೆಯೇ ನಂದಿನಿಯೇ ಇಲ್ಲಿಗೆ ಬಂದಿರುವುದು ! ನಿನ್ನ ಅಭೀಷ್ಟಸಿದ್ಧಿಯು ದೂರವಾಗಿಲ್ಲ, ಅದು ಶೀಘ್ರ

ದಲ್ಲೇ ಆಗುತ್ತದೆ ನೀನು ವನ್ಯವೃತ್ತಿಯನ್ನವಲಂಬಿಸಿ ಕಂದಮೂಲಾದಿ ಗಳನ್ನು ಭುಂಜಿಸುತ್ತ ಸದಾ ನಂದಿನಿಯ ಸೇವೆಮಾಡಬೇಕು, ಸತತವಾದ ಅಭ್ಯಾಸದಿಂದ ವಿದ್ಯೆಯನ್ನೊಲಿಸಿಕೊಳ್ಳುವಂತೆ ನಿರಂತರ ಸೇವೆಯಿಂದ ನಂದಿ ನಿಯ ಪ್ರಸನ್ನತೆಯನ್ನು ಪಡೆಯಬೇಕು. ನಂದಿನಿಯು ನಡೆದರೆ ನೀನೂ ಕೂಡ ನಡೆಯಬೇಕು, ನಂದಿನಿಯು ನಡೆಯದೆ ನಿಂತುಕೊಂಡರೆ ನೀನೂ ಕೂಡಲೆ ನಿಲ್ಲಬೇಕು, ನಂದಿನಿಯು ಮಲಗಿದರೆ ನೀನೂ ಕೂಡ ನಂದಿನಿಯ ಸಮೀಪದಲ್ಲೇ ಕುಳಿತುಕೊಳ್ಳಬೇಕು, ನಂದಿನಿಯು ನೀರು ಕುಡಿದ ಮೇಲೆ ನೀನು ನೀರು ಕುಡಿಯಬೇಕು ಪ್ರತಿದಿನ ಬೆಳಿಗ್ಗೆ ನೀನು ನಂದಿನಿಯೊಡನೆ ಹೊರಡುವಾಗ್ಗೆ ವಧು ಸುದಕ್ಷಿಣಾದೇವಿಯು ಭಕ್ತಿವತಿಯಾಗಿ ನಂದಿನಿಯನ್ನು ಗಂಧಾದಿಗಳಿಂದ ಅರ್ಚಿಸಿ ಆಶ್ರಮ ಪ್ರಾಂತದವರಗೂ ನಿಮ್ಮೊಡನೆ ಬರಬೇಕು, ಸಾಯಂಕಾಲ ನೀವಿಬ್ಬರೂ ಆಶ್ರಮಕ್ಕೆ ಹಿಂತಿರುಗುವಾಗ ಆಶ್ರಮದ್ವಾರದಲ್ಲಿ ಕಾದಿದ್ದು ಅವಳೂ ನಿಮ್ಮೊಡನೆ ಆಶ್ರಮಕ್ಕೆ ಬರಬೇಕು ನಂದಿನಿಯ ಪ್ರಸನ್ನ ತೆಯು ಲಭಿಸುವವರೆಗೂ ನೀನು ಈರೀತಿ ಪರಿಚರ್ಯೆಮಾಡಿ ಆರಾಧಿಸಬೇಕು ಅವಿಘ್ನವಾಗಿ ನಿನ್ನ ಕೆಲಸವು ನೆರವೇರಲಿ ! ಸತ್ಪುತ್ರರನ್ನು ಪಡೆದವರಲ್ಲಿ ಅಗ್ಗಳಿ ಯನಾಗಿ ನೀನು ಶೋಭಿಸುವಂತಾಗಲಿ ”

ದೇಶಕಾಲಜ್ಞನೂ, ಪ್ರಿಯ ಶಿಷ್ಯನೂ ಆದ ದಿಲೀಪನು ಗುರುವಿನ ಆಜ್ಞೆ ಯನ್ನು ಪತ್ನೀಸಮೇತನಾಗಿ ಶಿರಸಾವಹಿಸಿ ಅದರಂತೆ ನಡೆಯುವುದಾಗಿ ವಿಜ್ಞಾ ಪಿಸಿದನು. ಬ್ರಹ್ಮಪುತ್ರನಾದ ವಸಿಷ್ಠನು ಮಧುರ ವಚನಗಳನ್ನಾಡಿ ದಿಲೀ ಪನೂ, ಸುದಕ್ಷಿಣಾದೇವಿಯೂ ವಿಶ್ರಾಂತಿ ಹೊಂದಲು ಅವರನ್ನು ಬೀಳ್ಕೊಟ್ಟನು. ತಪಸ್ಸಿದ್ಧಿಯನ್ನು ಪಡೆದಿದ್ದ ವಸಿಷ್ಠಮಹರ್ಷಿಯು ಅವರಿಗೆ ರಾಜಯೋಗ್ಯ ವಾದ ಸತ್ಕಾರವನ್ನು ಮಾಡಲು ಸಮರ್ಥನಾಗಿದ್ದರೂ, ಆತನು ಹಾಗೆ ಮಾಡ ಲಿಲ್ಲ. ವ್ರತ ಪ್ರಯೋಗಾಭಿಜ್ಞನಾಗಿ ಕಲ್ಪವಿದನಾಗಿದ್ದ ವಸಿಷ್ಠಮಹರ್ಷಿಯು ನಿಯಮಾಪೇಕ್ಷೆಯಿಂದ ಅವರಿಗ ಋಷಿಜೀವನದ ವನ್ಯವೃತ್ತಿಯನ್ನೇ ವಿಧಿಸಿ ದನು. ಅದಕ್ಕನುಗುಣವಾಗಿ ಕುಶಾಸನ ಮುಂತಾದ ಸಾಮಗ್ರಿಗಳನ್ನೇ ಒದ ಗಿಸಿದನು. ಕುಲಪತಿಯಾದ ವಸಿಷ್ಠನು ತೋರಿಸಿದ ಪರ್ಣಶಾಲೆಯಲ್ಲಿ ಕುಶಶಯ್ಯೆ ಯಲ್ಲಿ ಅವರು ಮಲಗಿ ನಿದ್ರಿಸಿದರು ವಸಿಷ್ಠ ಶಿಷ್ಯರ ವೇದಾಧ್ಯಯನವನ್ನು ಕೇಳಿ ಎಚ್ಚೆತ್ತಾಗ, ಅವರು ಬೆಳಗಾದುದನ್ನರಿತು, ಸಂಭ್ರಮದಿಂದ ನಂದಿನೀಸೇವೆಗೆ ಸಿದ್ಧರಾದರು.

## ಎರಡನೆಯ ಪರಿಚ್ಛೇದ

## ನಂದಿನೀ ವರಪ್ರಸಾದ

ಮಾರನೆಯ ದಿನ ಪ್ರಭಾತ ಕಾಲದಲ್ಲಿ ನಂದಿನಿಯು ತನ್ನ ಕರುವಿಗೆ ಹಾಲು ಕೊಟ್ಟಬಳಿಕ ದಿಲೀಪನು ಕರುವನ್ನು ಕಟ್ಟಿಹಾಕಿದನು ಸುದಕ್ಷಿಣಾ ದೇವಿಯು ವಸಿಷ್ಠಮಹರ್ಷಿಯ ಹೋಮ ಧೇನುವಾದ ನಂದಿನಿಯನ್ನು ಗಂಧ ಮಾಲ್ಯಾದಿಗಳಿಂದ ಅರ್ಚಿಸಿದಳು ಯಶೋಧನನಾದ ದಿಲೀಪನು ಅನಂತರ ನಂದಿನಿಯನ್ನು ವನಾಭಿಮುಖವಾಗಿ ಬಿಟ್ಟುಕೊಂಡು ಆಶ್ರಮದಿಂದ ತೆರಳಿ ದನು ಪತಿವ್ರತೆಯರ ಗುಂಪಿನಲ್ಲಿ ಪ್ರೇಷ್ಠಳೂ, ಕೀರ್ತನೀಯಳೂ ಆದ ಸುದ ಕ್ಷಿಣಾದೇವಿಯು ನಂದಿನಿಯನ್ನು-ಶ್ರುತಿಯ ಅರ್ಥವನ್ನು ಸ್ಮೃತಿಯು ಅನು ಸರಿಸುವಂತೆ-ಹಿಂಬಾಲಿಸಿ ಹೋದಳು ನಂದಿನಿಯ ಗೊರಸಿನ ಧೂಳಿನಿಂದ ಮಾರ್ಗವೇ ಪವಿತ್ರವಾಗುತ್ತಿದ್ದಿತು ಯಶಸ್ವಿಯೂ ಮತ್ತು ದಯಾಳುವೂ ಆದ ದಿಲೀಪನು ತನ್ನ ಪತ್ನಿಯು ಆಶ್ರಮಕ್ಕೆ ಹಿಂದಿರುಗುವಂತೆ ಬೀಳ್ಕೊಟ್ಟು ಕಾಮಧೇನುವಿನ ಮಗಳಾದ ನಂದಿನೀಧೇನುವಿನ ರಕ್ಷಣೆಯ ಭಾರವನ್ನು ವಹಿಸಿ ಮುಂದಕ್ಕೆ ತೆರಳಿದನು ಚತುಸ್ಸಮುದ್ರಗಳೇ ನಾಲ್ಕು ಪಯೋಧರಗಳಾಗಿ, ಉರ್ವಿಯೇ ಗೋರೂಪವನ್ನು ಧರಿಸಿದ್ದಂತೆ ನಂದಿನೀಧೇನುವು ವಿರಾಜಿಸಿತು ದಿಲೀಪನ ಅನುಚರರು ತಾವೂ ಅವನೊಡನೆ ವನಾಂತರಕ್ಕೆ ಹೋಗು ವುದಾಗಿ ಬಿನ್ನೈಸಿದರು ಆದರೆ ತಾನು ವ್ರತಾಚರಣೆಯಲ್ಲಿದ್ದುದರಿಂದ ತನ್ನೊಡನೆ ರಾಜಧಾನಿಯಿಂದ ಕರೆದುಕೊಂಡು ಬಂದಿದ್ದ ಮಿತಪರಿವಾರದ ಅನುಚರರನ್ನು ಕೂಡ ದಿಲೀಪನು ಹಿಂದಕ್ಕೆ ಕಳುಹಿಸಿದನು ನಂದಿನಿಯನ್ನು ಅನುಸರಿಸುವುದು ತನ್ನ ಪವಿತ್ರ ಕರ್ತವ್ಯವೆಂದು ಭಾವಿಸಿ ಇತರ ಅಂಗರಕ್ಷಕ ರೊಬ್ಬರೂ ಇಲ್ಲದೆಯೇ ಅವನು ಮುಂದೆ ಹೊರಟನು ಮನುವಂಶದ ಅರಸರು ಸ್ವಶೌರ್ಯದಿಂದಲೇ ಆತ್ಮರಕ್ಷಣೆ ಮಾಡಿಕೊಳ್ಳತಕ್ಕವರಾಗಿದ್ದರು. ಆದಕಾರಣ, ಅವನಿಗೆ ಮತ್ತಾವ ಅಂಗರಕ್ಷಕರ ಸಹಾಯವೂ ಅಗತ್ಯವಾಗಿರ ಲಿಲ್ಲ. ಮಂಡಲೇಶ್ವರನಾಗಿದ್ದ ಸಮ್ರಾಟ್ ದಿಲೀಪನು (ತಾನು ರಾಜಮಂಡ

ಲಕ್ಕೇ ಒಡೆಯನಾದ ಚಕ್ರವರ್ತಿಯೆಂಬ ಅಭಿಮಾನವನ್ನೇ ತೊರೆದು ಸಾಮಾನ್ಯರಂತೆಯೇ ವಿನೀತಭಾವದಿಂದ ವ್ರತನಿಯಮವನ್ನು ಪಾಲಿಸುತ್ತ) ಸ್ವಾದುವಾದ 'ತೃಣ ಕಬಳಗಳನ್ನು ನಂದಿನಿಗೆ ಕೊಡುತ್ತ ಅದಕ್ಕೆ ನವೆ ಯಾದಾಗಲೆಲ್ಲಾ ಮೈಯನ್ನು ಕೆರೆಯುತ್ತ, ಕಾಡು ನೊಣಗಳು ಅದನ್ನು ಕಚ್ಚಿ ದರೆ ನಿವಾರಿಸುತ್ತ, ಭಕ್ತಿಯಿಂದ ನಂದಿನಿಗೆ ಶುಶ್ರೂಷೆ ಮಾಡುತ್ತ, ಸ್ವಚ್ಛಂದ ವಾಗಿ ನಂದಿನಿಯು ನಡೆದುಹೋಗಲು ಯಾವ ಪ್ರತಿಬಂಧಕವೂ ಇಲ್ಲದಂತೆ ಅವಕಾಶ ಕಲ್ಪಿಸುತ್ತ, ಭಕ್ತಿಯಿಂದ ಅದನ್ನು ಹಿಂಬಾಲಿಸಿದನು ಅದು ನಿಂತರೆ, ಅವನೂ ನಿಲ್ಲುತ್ತಿದ್ದನು, ಅದು ಮುಂದೆ ಹೊರಟರೆ, ಅವನೂ ಹೊರ ಡುತ್ತಿದ್ದನು; ಅದು ಮಲಗಿದರೆ ಧೀರನಾದ ಅವನೂ ಅದರ ಬಳಿಯಲ್ಲಿ ಕುಳಿತುಕೊಳ್ಳುತ್ತಿದ್ದನು, ಅದು ನೀರನ್ನು ಕುಡಿದರೆ, ಅವನೂ ನೀರನ್ನು ಕುಡಿ ಯುತ್ತಿದ್ದನು ಹೀಗೆ ದಿಲೀಪ ಭೂಪತಿಯು ನಂದಿನಿಯನ್ನು ಛಾಯೆಯಂತೆ ಹಿಂಬಾಲಿಸುತ್ತಿದ್ದನು ಅವನು ನಂದಿನಿಯ ಆರಾಧನೆಯ ವ್ರತನಿಯಮ ವನ್ನು ಅನುಸರಿಸುತ್ತಿದ್ದ ಕಾರಣ, ರಾಜಯೋಗ್ಯವಾದ ವೇಷಭೂಷಣಗಳನ್ನೂ ಛತ್ರಚಾಮರಾದಿ ರಾಜಚಿಹ್ನೆಗಳನ್ನೂ ತೊರೆದಿದ್ದರೂ ಕೂಡ, ತನ್ನ ತೇಜೋ ವಿಶೇಷದಿಂದ ಇತರರು ಅವನನ್ನು ಸಮ್ರಾಟನೆಂದೇ ಅನುಮೇಯಿಸುವ ಮಟ್ಟಿಗೆ ಅವನು ರಾಜಲಕ್ಷ್ಮಿಯ ಕಳೆಯಿಂದ ಕೂಡಿದ್ದನು ಮದರೇಖೆಯು ಅಪ್ರಕಟಿತವಾಗಿದ್ದರೂ ಅಂತರ್ಗತ ಮದಾವಸ್ಥೆಯಿಂದ ಕೂಡಿರುವ ಗಜೇಂದ್ರ ನಂತೆ, ರಾಜಚಿಹ್ನೆಗಳನ್ನು ಬಿಟ್ಟುಕೊಟ್ಟಿದ್ದೂ ಅವನು ತನ್ನ ಪ್ರಭಾವಾತಿಶಯ ದಿಂದಲೇ ತಾನು ಪ್ರಭುವೆಂಬುದನ್ನು ವ್ಯಕ್ತಗೊಳಿಸುತ್ತಿದ್ದನು ಅವನು ತನ್ನ ಕೇಶರಾಶಿಗೆ ಲತೆಗಳನ್ನು ಬಿಗಿದುಕೊಂಡು, ಧನುಸ್ಸಿಗೆ ಶಿಂಜಿನಿಯನ್ನೇರಿಸಿ ಬಾಣಪ್ರಯೋಗಕ್ಕೆ ಸಿದ್ಧವಾಗಿದ್ದುಕೊಂಡು, ನಂದಿನಿಯ ರಕ್ಷಣೆಗಾಗಿ ಕಾಡಿ ನಲ್ಲಿ ಸಂಚರಿಸುತ್ತಿದ್ದನು ಅವನನ್ನು ನೋಡಿದರೆ ವಸಿಷ್ಠನ ಹೋಮಧೇನು ವಾದ ನಂದಿನಿಯ ರಕ್ಷಣೆಗಿಂತ ಹೆಚ್ಚಾಗಿ, ಆ ಕಾಡಿನಲ್ಲಿದ್ದ ಹುಲಿ ಸಿಂಹ ಮುಂತಾದ ದುಷ್ಟ ಸತ್ತ್ವಗಳನ್ನು ದಮನ ಮಾಡಿ, ಶಿಕ್ಷಣಕೊಡುವುದಕ್ಕಾಗಿ ಅವನು ಹೊರಟಿದ್ದಂತೆ ತೋರುತ್ತಿದ್ದಿತು ಪಾರ್ಶ್ವವರ್ತಿಗಳಾಗಿ ಅಂಗರಕ್ಷಕ ರಾಗಿದ್ದ ಅನುಚರರನ್ನು ಕಳುಹಿಸಿಬಿಟ್ಟಿದ್ದ ದಿಲೀಪ ಚಕ್ರವರ್ತಿಯು ಅನು

ಭಾವ ಗಾಂಭೀರ್ಯಗಳಿಂದ ಕೂಡಿದ ಪಾಶಧರನಾದ ವರುಣ ದೇವನಂತೆ ಸಂಚರಿಸುತ್ತಿದ್ದನು ಪಾರ್ಶ್ವದ್ರುಮಗಳಲ್ಲಿ ಉತ್ಕಟ ಮದೋತ್ಸಾಹದಿಂದ ಪಕ್ಷಿಗಳು ಮಾಡುತ್ತಿದ್ದ ಕಲರವದ ಗಾನವು ಅವನಿಗೆ ಜಯವನ್ನು ಕೋರುವ ಜಯಗೀತದಂತಿದ್ದಿತು ವಾಯುಸಖನಾದ ಅಗ್ನಿಯಂತೆ ತೇಜಸ್ವಿಯಾಗಿದ್ದ ಆತನು ಸಮೀಪಕ್ಕೆ ಬಂದಾಗ ಬಾಲಲತೆಗಳು ಗಾಳಿಯಿಂದ ಅಲುಗಾಡಿದುವು ಬಾಲಲತೆಗಳಿಂದ ಉದುರಿದ ಪುಷ್ಪಗಳು-ಪೌರಕನ್ಯೆಯರ ಲಾಜಾಂಜಲಿಗಳಂತೆ-ಶೋಭಿಸುತ್ತಿದ್ದುವು, ಪೂಜ್ಯನಾದ ಆತನನ್ನು ಆ ರೀತಿಯಲ್ಲಿ ಬಾಲಲತೆಗಳು ಆರಾಧಿಸುವಂತೆ ತೋರುತ್ತಿದ್ದಿತು ದಿಲೀಪನು ಧನುರ್ಧಾರಿಯಾಗಿದ್ದರೂ, ಅವನ ದಯಾರ್ದ್ರಭಾವವು ಸುವ್ಯಕ್ತವಾಗುತ್ತಿದ್ದಿತು ಕಾಡಿನಲ್ಲಿದ್ದ ಜಿಂಕೆಗಳ ಅಂತಃಕರಣಕ್ಕೆ ಕೂಡ ಅವನನ್ನು ನೋಡಿದೊಡನೆಯೇ ಅದು ಗೋಚರವಾಯಿತು ಆದಕಾರಣ, ಅತ್ಯಂತ ಭೀರು ಸ್ವಭಾವವುಳ್ಳ ಹರಿಣಿಗಳು ಕೂಡ, ನಿರ್ಭಯವಾಗಿ ತಮ್ಮ ನೇತ್ರಗಳನ್ನು ವಿಸ್ತರಿಸಿ ಕಣ್ಣುತುಂಬ ಅವನನ್ನು ನೋಡಿದುವು ಅವುಗಳ ಕಣ್ಣುಗಳು ವಿಶಾಲವಾಗಿದ್ದುದಕ್ಕೆ ಅದರಿಂದ ಪೂರ್ಣಫಲವು ಲಭಿಸಿದಂತಾಯಿತು ಹಿತೈಷಿಗಳನ್ನು ನೋಡಿದಾಗ ಅಂತಃಕರಣ ಪ್ರಸನ್ನತೆಯೂ ಶತ್ರುಗಳನ್ನು ನೋಡಿದಾಗ ಅಂತಃಕರಣ ಕಲುಷಿತೆಯೂ ಉಂಟಾಗುವುದು ಸಹಜ ಈ ಬಗೆಯ ಅಂತಃಕರಣ ವೃತ್ತಿಯ ಫಲಿತಾಂಶವಾಗಿ ಉಂಟಾದ ಪ್ರಸನ್ನತೆಯಿಂದ ಕೂಡಿ ಹರಿಣಿಗಳು ನಿಶ್ಶಂಕೆಯಿಂದಲೂ, ಅವನು ಕರುಣಾಳುವೆಂಬ ಭರವಸೆಯಿಂದಲೂ ಅವನ ಕೈಯಲ್ಲಿ ಧನುರ್ಬಾಣಗಳಿದ್ದರೂ ಸಮೀಪದಲ್ಲೇ ನಿಂತು ಅವನನ್ನು ದೃಷ್ಟಿಸಿ ನೋಡಿದುವು ವ್ರತನಿಯಮವನ್ನು ಪಾಲಿಸುತ್ತಿದ್ದ ದಿಲೀಪನು ಛತ್ರಚಾಮರಗಳಿಲ್ಲದೆ ಬಿಸಿಲಿನಲ್ಲಿ ನಂದಿನಿಯ ಹಿಂದೆ ಕಾಡಿನಲ್ಲಿ ಸುತ್ತಾಡಬೇಕಾಯಿತು ಆಗ ಗಿರಿನಿರ್ಝರಗಳ ನೀರಿನ ತುಂತುರುಗಳಿಂದ ಕೂಡಿದ ತಂಗಾಳಿಯು ಬೀಸಿತು. ಪುಷ್ಪಗಂಧದಿಂದ ಕೂಡಿ ಹಿತವಾಗಿದ್ದ ತಂಗಾಳಿಯು ಅವನಿಗೆ ಬಿಸಿಲಿನ ಝಳದಿಂದ ಹಿಂಸೆಯಾಗದಂತೆ ರಕ್ಷಿಸಿ ತನ್ಮೂಲಕ ಅವನಿಗೆ ಸೇವೆಯನ್ನು ಸಲ್ಲಿಸಿತು ರಾಜ್ಯ ಪರಿಪಾಲಕನೂ, ಸಂಯಮಿ ಶ್ರೇಷ್ಠನೂ ಮತ್ತು ಮಹಾನುಭಾವನೂ ಆದ ದಿಲೀಪನು ಕಾನನ ಪ್ರವೇಶ ಮಾಡಿದೊಡನೆಯೇ ಮಳೆಯಿಲ್ಲದೆ ಕಾಡು

ಗಿಚ್ಚು ಆರಿಹೋಯಿತು, ವಿಶೇಷವಾಗಿ ಫಲಪುಷ್ಪ ವೃದ್ಧಿಯಾಗಲು ಕಾರಣ ವಾಯಿತು[1] ಕಾಡುಮೃಗಗಳಲ್ಲಿ ಹುಲಿಸಿಂಹಗಳೇ ಮುಂತಾದ ಪ್ರಬಲ ಮೃಗಗಳು ಜಿಂಕೆಗಳೇ ಮುಂತಾದ ದುರ್ಬಲ ಮೃಗಗಳನ್ನು ಬಾಧಿಸುವುದು ತಪ್ಪಿಹೋಯಿತು ತನ್ನ ಸಂಚಾರದಿಂದ ದಿಗಂತಗಳನ್ನೆಲ್ಲ ಪಾವನಗೊಳಿಸಿ ಸಾಯಂಕಾಲದ ವೇಳೆಗೆ ಸೂರ್ಯನೂ ತನ್ನ ವಿಶ್ರಾಂತಿ ಸ್ಥಾನಕ್ಕೆ ಹೊರಟನು ವಸಿಷ್ಠಮುನಿಯ ಹೋಮಧೇನುವಾದ ನಂದಿನಿಯೂ ತಾನು ಸಂಚರಿಸಿದೆಡೆಗಳನ್ನೆಲ್ಲ ಪವಿತ್ರಗೊಳಿಸಿ, ಸಂಧ್ಯಾಕಾಲದ ವೇಳೆಗೆ ಆಶ್ರಮಕ್ಕೆ ಹೊರಟಿತು ಹೊಂಡಗಳಿಂದ ಮೇಲಕ್ಕೆದ್ದು ಬರುತ್ತಿದ್ದ ವರಾಹ ಯೂಥಗಳನ್ನೂ, ತಮ್ಮ ಆವಾಸ ವೃಕ್ಷಗಳ ಕಡೆಗೆ ಹಾರಿಹೋಗುತ್ತಿದ್ದ ನವಿಲುಗಳನ್ನೂ, ಹುಲ್ಲು ಬೆಳದ ಬಯಲುಗಳಲ್ಲಿ ಮಲಗಿದ್ದ ಜಿಂಕೆಗಳನ್ನೂ, ರಾತ್ರಿಯು ಸಮೀಪಿಸಿ ಕತ್ತಲಾದಂತೆಲ್ಲ ಶ್ಯಾಮವರ್ಣದಿಂದ ತುಂಬುತ್ತಿದ್ದ ವನಪ್ರದೇಶಗಳನ್ನೂ ದಿಲೀಪನು ನೋಡುತ್ತ ನಂದಿನಿಯೊಡನೆ ಆಶ್ರಮದ ಕಡೆಗೆ ಬರುತ್ತಿದ್ದನು ನಂದಿನಿಯು ಚೊಚ್ಚಲು ಕರುವನ್ನು ಹಾಕಿದ್ದ ಕಾರಣ, ಕೆಳಕ್ಕೆ ಜಗ್ಗುವಂತೆ ತೋರುತ್ತಿದ್ದ ಕೆಚ್ಚಲಿನ ಭಾರವನ್ನು ವಹಿಸಲು ಪ್ರಯತ್ನಿಸುತ್ತಿದ್ದ ನಂದಿನಿಯ ನಡೆಯೂ, ದೇಹದ ಗುರುತ್ವವಿದ್ದೂ ಚಾರುಗಮನದಿಂದ ಮುಂದುವರಿಯುತ್ತಿದ್ದ ದಿಲೀಪನ ನಡೆಯೂ, ತಪೋವನ ಪ್ರಾಂತದಲ್ಲಿದ್ದ ಸಂಚಾರಮಾರ್ಗಕ್ಕೇ ಅಲಂಕಾರಪ್ರಾಯವಾಗಿದ್ದುವು ದಿಲೀಪನ ಪ್ರಿಯಪತ್ನಿಯಾದ ಸುದಕ್ಷಿಣಾದೇವಿಯು ತನ್ನ ಪ್ರಿಯನನ್ನು ಆಶ್ರಮದ ಹೊರವಲಯದ ಅಂಚಿನಲ್ಲೇ ಎದುರುಗೊಂಡಳು, ಅವನನ್ನು ನೋಡಿ ಬಹುಕಾಲವಾಗಿದ್ದಂತೆ ಭಾವಿಸಿ ಕಣ್ಣುರೆಪ್ಪೆಗಳನ್ನೇ ಮುಚ್ಚದೆ—ತನ್ನ ಕಣ್ಣುಗಳು ಉಪವಾಸ ಮಾಡಿದ್ದು

---

[1] ಕಾಡುಗಿಚ್ಚು ಆರಿದಮೇಲೆ ಉಳಿಯುವ ಬೂದಿಯು ಉತ್ತಮವಾದ ಗೊಬ್ಬರ ಕಾಳಿದಾಸನಿಗೆ ವ್ಯವಸಾಯದ ವಿಚಾರವೂ ತಿಳಿದಿದ್ದಿತೆಂಬುದು ಇದರಿಂದ ಗೊತ್ತಾಗುತ್ತದೆ

ಅವನ ರೂಪವನ್ನು ಆತುರದಿಂದ ಪಾನಮಾಡಲಿಚ್ಛಿಸಿದಂತೆ'--ಅವನನ್ನು ಪ್ರೀತಿಯಿಂದ ದೃಷ್ಟಿಸಿ ನೋಡುತ್ತಿದ್ದಳು ಆಶ್ರಮದ ಹೊರಗೆ ವನಾಂತರದಲ್ಲಿ ತನ್ನ ಪತಿಯನ್ನೂ ನಂದಿನಿಯನ್ನೂ ನಿರೀಕ್ಷಿಸುತ್ತಿದ್ದಳು. ಸುದಕ್ಷಿಣಾದೇವಿ ಅವಳು ನಂದಿನಿಯ ಮುಂದೆ ಆಶ್ರಮಕ್ಕೆ ಹೊರಟಳು, ನಂದಿನಿಯನ್ನು ಹಿಂಬಾಲಿಸಿ ದಿಲೀಪನು ನಡೆದನು ಅವರಿಬ್ಬರ ಮಧ್ಯದಲ್ಲಿ ಆ ಹೋಮಧೇನುವು ದಿನರಾತ್ರಿಗಳ ಮಧ್ಯದ ಸಂಧ್ಯೆಯಂತೆ ವಿರಾಜಿಸಿತು ಗಂಧ, ಅಕ್ಷತೆ ಮುಂತಾದುವುಗಳಿಂದ ತುಂಬಿದ ಪೂಜಾಪಾತ್ರೆಯನ್ನು ಹಿಡಿದಿದ್ದ ಸುದಕ್ಷಿಣಾದೇವಿಯು ಪಯಸ್ವಿನಿಯಾದ ಆ ಪವಿತ್ರಧೇನುವಿಗೆ ಪ್ರದಕ್ಷಿಣೆಮಾಡಿ, ತನ್ನ ಅಭೀಷ್ಟಸಿದ್ಧಿಯ ಹೆಬ್ಬಾಗಿಲಿನಂತಿದ್ದ (ಆ ಧೇನುವಿನ) ಹಣೆಯನ್ನು ಅರ್ಚಿಸಿದಳು ನಂದಿನೀಧೇನುವು ತನ್ನ ಕರುವನ್ನು ನೋಡುವ ಉತ್ಸುಕತೆಯಿಂದ ಕೂಡಿದ್ದೂ ಸಹ ಸ್ತಿಮಿತವಾಗಿ ನಿಂತು, ಪೂಜೆಯನ್ನು ಸ್ವೀಕರಿಸಿದುದನ್ನು ಕಂಡು ಚಕ್ರವರ್ತಿ ದಂಪತಿಗಳು ಸಂತೋಷದಿಂದ ನಲಿದರು ಭಕ್ತಿಯುತರಾದವರಲ್ಲಿ ಅವರ ಭಕ್ತಿಯನ್ನು ಸ್ವೀಕರಿಸಿದವರಿಂದ ಪ್ರಸನ್ನತೆಯು ಸೂಚಿತವಾಗುವುದೇ ಮುಂದಿನ ಫಲೋದ್ಗಮದ ಗುರುತೆನ್ನಲು ಸಂದೇಹವಿಲ್ಲ

ಆಶ್ರಮಕ್ಕೆ ಹಿಂದಿರುಗಿದ ಮೇಲೆ, ದಿಲೀಪನು ಅರುಂಧತೀ-ವಸಿಷ್ಠರ ಪಾದಗಳಿಗೆ ನಮಸ್ಕಾರ ಮಾಡಿ, ಸಂಧ್ಯಾವಿಧಿಗಳನ್ನಾಚರಿಸಿದನು ಆ ಬಳಿಕ ಅವನು ನಂದಿನಿಯ ಹಾಲನ್ನು ಕರೆದು, ಆ ತರುವಾಯ ಮತ್ತೆ ನಂದಿನಿಯ ಸೇವೆಗೆ ನಿಂತನು ಅವನೂ, ಸುದಕ್ಷಿಣಾದೇವಿಯೂ, ಆ ಹೋಮಧೇನುವನ್ನರ್ಚಿಸಿ, ತಮ್ಮ ಕೈಗಳಿಂದಲೇ ಅದಕ್ಕೆ ಸೇವೆಮಾಡಿ, ಅದರ ಬಳಿಯಲ್ಲಿ ಪೂಜಾಸಾಮಗ್ರಿಗಳೊಡನೆ ದೀಪವನ್ನೂ ಇಟ್ಟರು ದಿಲೀಪನೂ ಅವನ

---

*ಮಧುರವಾದ ಗಾನವನ್ನು ಕಿವಿಗಳಿಗೆ ಊಂಟಿಸುವುದೆಂಬ ಕಲ್ಪನೆಯಂತೆಯೇ ಇದೂ ಮನೋಹರವಾಗಿದೆ_ದಿಲೀಪನು ವನಾಂತರ ಪ್ರದೇಶಕ್ಕೆ ಹೋಗಿದ್ದಷ್ಟು ಕಾಲವೂ ಅವನನ್ನು ನೋಡುವುದಕ್ಕಿಲ್ಲದೆ, ಅವಳ ಕಣ್ಣುಗಳು ಉಪವಾಸದಿಂದಿದ್ದಂತೆ ಅವನ ರೂಪವನ್ನು ಪಾನಮಾಡತೊಡಗಿದುವೆಂಬ ವರ್ಣನೆಯು ರಮಣೀಯವಾಗಿದೆ

ಧರ್ಮಪತ್ನಿಯೂ ನಂದಿನಿಯು ಮಲಗಿ ನಿದ್ರಿಸಿದ ಮೇಲೆ ತಾವೂ ನಿದ್ರಿಸಿದರು ಬೆಳಗಾದ ಮೇಲೆ ನಂದಿನಿಯು ಎದ್ದೊಡನೆಯೇ ದಿಲೀಪನೂ ಎದ್ದು ಮತ್ತೆ ನಂದಿನಿಯ ಸೇವೆಗೆ ಸಿದ್ಧವಾದನು ದೀನೋದ್ಧಾರಕನೂ, ಗುರುತರವಾದ ಕೀರ್ತಿಯುಳ್ಳವನೂ ಆದ ದಿಲೀಪನು ಪುತ್ರಾರ್ಥವಾಗಿ ಈ ರೀತಿ ಇಪ್ಪತ್ತೊಂದು ದಿನಗಳ ಕಾಲ ಗೋಸೇವಾ ವ್ರತನಿಯಮಗಳನ್ನು ಸಾಂಗವಾಗಿ ಪಾಲಿಸಿ ನಂದಿನಿಯನ್ನು ಓಲೈಸಿದನು ಇಪ್ಪತ್ತೆರಡನೆಯ ದಿನ ನಂದಿನಿಯು ಆವನ ಶ್ರದ್ಧಾ ಭಕ್ತಿಗಳನ್ನು ಪರೀಕ್ಷಿಸಲಿಚ್ಛಿಸಿತು ಅಂದು ವಸಿಷ್ಠಮಹರ್ಷಿಯ ಆ ಹೋಮಧೇನುವು ಗಂಗಾನದಿಯ ಜಲಪಾತ ಪ್ರದೇಶದಲ್ಲಿ ಹಿಮಾಲಯ ಪರ್ವತದ ಒಂದು ಗುಹೆಯನ್ನು ಪ್ರವೇಶಿಸಿತು ಅಲ್ಲಿ ಹುಲುಸಾಗಿ ಹುಲ್ಲು ಬೆಳೆದಿದ್ದಿತು ಅಲ್ಲಿ ಹಿಂಸ್ರ ಮೃಗಗಳ ಬಾಧೆಯುಂಟಾದೀತೆಂಬ ಯೋಚನೆಗೇ ಅವಕಾಶವಿಲ್ಲದಿದ್ದ ಕಾರಣ, ದಿಲೀಪನು ನಿರಾತಂಕವಾಗಿ ಹಿಮವತ್ಪರ್ವತದ ಶೋಭೆಯನ್ನು ನೋಡಿ ಆನಂದಿಸುತ್ತ ಅನ್ಯಮನಸ್ಕನಾಗಿದ್ದನು ಅಷ್ಟರಲ್ಲಿ ಹಠಾತ್ತಾಗಿ ಒಂದು ಸಿಂಹವು ನಂದಿನಿಯ ಮೇಲೆ ಹಾರಿ ಅದನ್ನು ಎಳೆದುಕೊಂಡು ಹೋಗಲುಪಕ್ರಮಿಸಿತು ಆಗ ನಂದಿನಿಯು ಮಾಡಿದ ಆಕ್ರಂದನ ಸ್ವರವು ಗುಹೆಯಲ್ಲಿ ಪ್ರತಿಧ್ವನಿತವಾಗಿ, ಪರ್ವತ ಶೋಭೆಯನ್ನು ನೋಡಿ ಹರ್ಷಿಸುತ್ತಿದ್ದ ಆರ್ತಹಿತಕಾರಿಯಾದ ದಿಲೀಪನ ದೃಷ್ಟಿಯನ್ನು ನಂದಿನಿಯ ಕಡೆಗೆ ಸೆಳೆಯಿತು ಆಗ ಧನುರ್ಧರನಾದ ದಿಲೀಪನು ಪಾಟಲವರ್ಣದ ನಂದಿನಿಯ ಬೆನ್ನಿನ ಮೇಲೆ ಸಿಂಹವು ಹೇರಿಕೊಂಡಿದ್ದುದನ್ನು ಕಂಡನು ಗೈರಿಕಾಧಾತುಮಯವಾದ ಬೆಟ್ಟದ ಊರ್ಧ್ವ ಪ್ರದೇಶದಲ್ಲಿ ಕುಸುಮಿತವಾದ ಲೋಧ್ರದ್ರುಮವಿದ್ದಂತೆ ಆಗಿನ ದೃಶ್ಯವು ತೋರುತ್ತಿದ್ದಿತು ಆರ್ತಶರಣ್ಯನೂ ಮತ್ತು ತನ್ನ ಪರಾಕ್ರಮದಿಂದ ಶತ್ರುಗಳನ್ನೆಲ್ಲ ಪರಾಭವಗೊಳಿಸಿದ್ದವನೂ ಆಗಿದ್ದ ದಿಲೀಪನು ಒಡನೆಯೇ ಆ ಸಿಂಹವನ್ನು ಕೊಲ್ಲುವುದಕ್ಕಾಗಿ ತನ್ನ ಬತ್ತಳಿಕೆಯಿಂದ ಒಂದು ಬಾಣವನ್ನು ಹಿರಿಯಲಿಚ್ಛಿಸಿ ಬತ್ತಳಿಕೆಗೆ ಕೈಹಾಕಿದನು ಬಾಣಪುಂಖಕ್ಕೆ ಸೋಕಿದ ಅವನ ಕೈಬೆರಳುಗಳ ಉಗುರುಗಳು ತಮ್ಮ ಕಾಂತಿಯಿಂದ ಅದಕ್ಕೆ ಸೌಂದರ್ಯವನ್ನು ಬೀರುವಂತಿದ್ದುವು ಆದರೆ, ಕೈಬೆರಳುಗಳು ಬಾಣಪುಂಖಕ್ಕೆ ಸಿಕ್ಕಿಕೊಂಡು ಅವನು

ಬಾಣವನ್ನು ಹಿರಿದುಕೊಳ್ಳುವುದೇ ಶಕ್ಯವಿಲ್ಲದಂತೆ ಅವನ ಬಲಗೈಯೇ ಸ್ವಾಧೀನದಲ್ಲಿಲ್ಲದಂತಾಯಿತು ಬಲತೋಳಿನ ಸ್ವಾಧೀನ ತಪ್ಪಿಹೋದ ಕಾರಣ ದಿಂದ ಪ್ರವೃದ್ಧ ರೋಷನಾದ ದಿಲೀಪನು ತಲ್ಲಣಿಸಿದನು ಮಂತ್ರೌಷಧ ಪ್ರಯೋಗದಿಂದ ಪ್ರತಿಬದ್ಧ ಸಾಮರ್ಥ್ಯವುಳ್ಳ ಸರ್ಪದ ಸ್ಥಿತಿಯಂತೆಯೇ ದಿಲೀಪನ ಸ್ಥಿತಿಯೂ ಆಯಿತು ತನ್ನ ತೇಜಸ್ಸೂ ತನ್ನ ಶೌರ್ಯವೂ ವ್ಯರ್ಥವಾದುದಕ್ಕಾಗಿ ಸಂಕಟಪಟ್ಟನು ಅಪರಾಧಿಯಾದ ಆ ಸಿಂಹವು ತನ್ನ ಸಮೀಪದಲ್ಲೇ ಇದ್ದರೂ ಅದನ್ನು ಘಾತಿಸಲು ಸಾಮರ್ಥ್ಯವಿಲ್ಲದಂತಾಗಿದ್ದ ದಿಲೀಪನನ್ನು ಅವನ ತೇಜೋಗ್ನಿಯೇ ದಹಿಸಲಾರಂಭಿಸಿತು ವಸಿಷ್ಠನ ಹೋಮಧೇನುವಾದ ನಂದಿನಿಯನ್ನು ಹಿಡಿದು ಪೀಡಿಸುತ್ತಿದ್ದ ಸಿಂಹವು ಮನುಷ್ಯರಂತೆ ಮಾತನಾಡತೊಡಗಿತು ಸಿಂಹಬಲನೂ ಮನುವಂಶ ಭೂಷಣನೂ ಮತ್ತು ಸಜ್ಜನ ಪಕ್ಷಪಾತಿಯೂ ಆಗಿದ್ದ ದಿಲೀಪನು ತನ್ನ ಸಾಮರ್ಥ್ಯವು ವ್ಯರ್ಥವಾದುದಕ್ಕಾಗಿ ಮೊದಲೇ ವಿಸ್ಮಿತನಾಗಿದ್ದನು , ಸಿಂಹವು ಮನುಷ್ಯರಂತೆ ಮಾತನಾಡ ತೊಡಗಿದುದನ್ನು ಕಂಡು ಅವನು ಮತ್ತಷ್ಟು ವಿಸ್ಮಿತನಾದನು

ಆ ಸಿಂಹವು ಹೇಳಿತು "ಎಲೈ ಮಹೀಪಾಲನೇ ! ನಿನ್ನ ಶ್ರಮವನ್ನು ಇನ್ನು ಸಾಕುಮಾಡು ನೀನು ಅಸ್ತ್ರ ಪ್ರಯೋಗ ಮಾಡುವುದು ಒಂದುವೇಳೆ ಸಾಧ್ಯವಾಗಿದ್ದರೂ ವ್ಯರ್ಥವಾಗುತ್ತಿದ್ದಿತೇ ಹೊರತು ನನ್ನನ್ನೇನೂ ಬಾಧಿಸುತ್ತಿರಲಿಲ್ಲ ಮಾರುತನಿಗೆ ವೃಕ್ಷಗಳನ್ನುರುಳಿಸುವ ಶಕ್ತಿಯಿದ್ದರೂ. ಪರ್ವತದ ಮೇಲೆ ಆ ಶಕ್ತಿಯಿಂದೇನೂ ಸಾಗದು ನನ್ನ ಹೆಸರು ಕುಂಭೋದರ ನಾನು ಶಿವಗಣಗಳಲ್ಲೊಬ್ಬನಾದ ನಿಕುಂಭನ ಮಿತ್ರ ನಾನು ಅಷ್ಟಮೂರ್ತಿಯಾದ ಶಂಕರನ ಕಿಂಕರ ಕೈಲಾಸ ಗೌರವರ್ಣದಿಂದ ಶೋಭಿಸುವ ವೃಷಭವನ್ನೇರುವಾಗ ಪರಮೇಶ್ವರನು ನನ್ನ ಬೆನ್ನಿನ ಮೇಲೆ ಪಾದಗಳನ್ನಿಟ್ಟು ಪವಿತ್ರಗೊಳಿಸುತ್ತಿದ್ದನು ಇಲ್ಲಿ ಶೋಭಿಸುತ್ತಿರುವ ದೇವದಾರು ವೃಕ್ಷವು ವೃಷಭಧ್ವಜನಿಂದ ಪುತ್ರನಂತೆ ಸ್ವೀಕೃತವಾದ ವೃಕ್ಷ ಈ ವೃಕ್ಷವಾದರೋ ಸ್ಕಂದ ಮಾತೆಯು ಹೇಮಕುಂಭಗಳಿಂದ-ತಾಯಿಯು ಹಾಲನ್ನು ಊಡಿಸುವಂತೆ-ನೀರೆರೆದಾಗ ರಸಾಸ್ವಾದಮಾಡಿ ರಸಜ್ಞವಾದ ವೃಕ್ಷ ಒಮ್ಮೆ ಒಂದು ಕಾಡಾನೆಯು ತನ್ನ

ಕಪೋಲದ ನವೆಯನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಅದನ್ನು ಈ ದೇವ ದಾರು ವೃಕ್ಷದ ಕಾಂಡಕ್ಕೆ ತಿಕ್ಕಿದಾಗ ಇದರ ಚಕ್ಕೆಯು ಉದುರಿಹೋಯಿತು ಆಗ ಸ್ಕಂದಮಾತೆಯು ತನ್ನ ಮಗ ಸ್ಕಂದನಿಗೆ ಅಸುರರ ಅಸ್ತ್ರಗಳಿಂದ ಗಾಯ ವಾಗಿದ್ದರೆ ಹೇಗೋ ಹಾಗೆ ಅದಕ್ಕಾಗಿ ಶೋಕಿಸಿದಳು ಆಗಿನಿಂದಲೂ ಈ ದೇವದಾರು ವೃಕ್ಷಕ್ಕೆ ಕಾಡಾನೆಗಳ ಬಾಧಯಿಲ್ಲದಂತೆ ತಪ್ಪಿಸಿ, ಅವುಗಳನ್ನು ಭಯಪಡಿಸಿ ಓಡಿಸುವುದಕ್ಕಾಗಿ ನಾನು ಈ ಗುಹೆಯಲ್ಲಿ ಸಿಂಹರೂಪದಿಂದ ಕಾವಲಿರಬೇಕೆಂದೂ, ನನ್ನ ಸಮೀಪಕ್ಕೆ ಬರುವ ಪ್ರಾಣಿಗಳನ್ನು ಆಹಾರವಾಗಿ ಸ್ವೀಕರಿಸಬೇಕೆಂದೂ ಶೂಲಧರನಾದ ಪರಮೇಶ್ವರನು ವಿಧಾಯಕ ಮಾಡಿ ದ್ದಾನೆ ಪರಮೇಶ್ವರನು ಆರೀತಿ ಆಜ್ಞಾಪಿಸಿದಾಗಿನಿಂದ ಇದುವರೆಗೂ ನನಗೆ ಆಹಾರವೇ ಲಭಿಸದೆಹೋಗಿದೆ ಹೀಗ ಉಪವಾಸವಿರುವ ನನಗೆ ಇದರ ರಕ್ತವು ಲಭಿಸಿದೆ ಇದರಿಂದ ನನಗೆ ತೃಪ್ತಿಯಾಗುತ್ತದೆ ಈ ಪರಿಸ್ಥಿತಿ ಯಲ್ಲಿ ನೀನು ಲಜ್ಜೆಯನ್ನು ತೊರೆದು ಹಿಂದಿರುಗು ಗುರುವಾದ ವಸಿಷ್ಠನಲ್ಲಿ ನೀನು ಶಿಷ್ಯಭಕ್ತಿಯನ್ನು ಚನ್ನಾಗಿ ಪ್ರದರ್ಶಿಸಿದ್ದೀಯ ಯಾವುದನ್ನು ರಕ್ಷಿಸುವುದು ಅಶಕ್ಯವೋ ಅದನ್ನು ಶಸ್ತ್ರಗಳ ಸಹಾಯದಿಂದ ರಕ್ಷಿಸುವುದಕ್ಕಾ ಗದೆ ಹೋದರೂ ಶಸ್ತ್ರಧಾರಿಗಳ ಯಶಸ್ಸಿಗೆ ಅದೇನೂ ಹಾನಿಯನ್ನುಂಟು ಮಾಡುವುದಿಲ್ಲ ಆದಕಾರಣ ಗುರುವಿನ ಹೋಮಧೇನುವನ್ನು ರಕ್ಷಿಸಲಿಲ್ಲ ವೆಂಬ ಕಾರಣಕ್ಕಾಗಿ ನೀನು ಲಜ್ಜೆಯನ್ನೇ ಹೊಂದದೆ ನೀನು ಆತನ ಬಳಿಗ ಹೋಗಬಹುದು ”

ಹೀಗೆ ಮಾತನಾಡಿದ ಮೃಗಾಧಿರಾಜನ ಪ್ರಗಲ್ಭವಚನಗಳನ್ನು ಕೇಳಿ, ಪುರುಷಾಧಿರಾಜನಾದ ದಿಲೀಪನು ಗಿರೀಶನಾದ ಪರಮೇಶ್ವರನ ಪ್ರಭಾವದ ದೆಸೆಯಿಂದ ತಾನು ಕುಂಠಿತಾಸ್ತ್ರನಾದುದನ್ನರಿತನು ದಿಲೀಪನು ನಂದಿನಿ ಯನ್ನು ರಕ್ಷಿಸಲಾರದ ಕಾರಣಕ್ಕಾಗಿ ತನ್ನ ವಿಚಾರವಾಗಿ ತನ್ನ ಮನಸ್ಸಿನಲ್ಲಿ ಉಂಟಾಗಿದ್ದ ತುಚ್ಛಭಾವನೆಯನ್ನು ಅದರ ಪರಿಣಾಮವಾಗಿ ಸ್ವಲ್ಪಮಟ್ಟಿಗೆ

---

ಪಾರ್ವತೀ ಪರಮೇಶ್ವರರಿಗೆ ಆ ದೇವದಾರು ವೃಕ್ಷದಲ್ಲಿ ಪುತ್ರನಿರ್ವಿಶೇಷವಾದ ಪ್ರೇಮವಿದ್ದಿತೆಂದು ವರ್ಣಿಸಿ ಕವಿಗುರುವು ತನ್ನ ಪ್ರಕೃತಿಪ್ರೇಮವನ್ನು ಮೆರೆದಿದ್ದಾನೆ.

ಕಡಿಮೆಮಾಡಿಕೊಂಡನು ಬಾಣ ಪ್ರಯೋಗದಲ್ಲಿ ಎಂದೂ ಭಂಗಪಡದಿದ್ದ ದಿಲೀಪನು ಅಂದು ವಿಫಲಪ್ರಯತ್ನನಾದನು ತ್ರ್ಯಂಬಕನ ನೋಟದಿಂದ ತೋಳು ಸ್ತಬ್ಧವಾಗಿ ಸ್ವಾತಂತ್ರ್ಯ ತಪ್ಪಿದಾಗ ಅವನು ವಜ್ರಾಯುಧವು ಕೈಯಿಂದ ಬಿದ್ದ ಇಂದ್ರನಂತಿದ್ದನು ಆಗ ಅವನು ಆ ಸಿಂಹವನ್ನು ಕುರಿತು ಹೀಗೆಂದನು ಎಲೈ ಮೃಗೇಂದ್ರನೆ! ಬಾಹು ಚಲನವು ನಿಂತುಹೋಗಿ ಅಸಮರ್ಥನಾಗಿರುವ ನನ್ನ ಮಾತುಗಳು ಹಾಸ್ಯಾಸ್ಪದವಾಗಿದೆ ಆದಾಗ್ಯೂ ಪ್ರಾಣಿಗಳ ಅಂತರ್ಗತವಾದ ಭಾವನೆಗಳನ್ನೆಲ್ಲ ನೀನು ಅರಿಯುಬಲ್ಲವನಾಗಿರುವೆ ಆದುದರಿಂದ, ನನ್ನ ಮನಸ್ಸಿನಲ್ಲಿರುವುದನ್ನು ಮುಚ್ಚುಮರೆಯಿಲ್ಲದೆ ನಾನು ತಿಳಿಸಲಿಚ್ಛಿಸುತ್ತೇನೆ ಸ್ಥಾವರ ಜಂಗಮಗಳ ಸೃಷ್ಟಿ ಸ್ಥಿತಿ ಲಯ ಕರ್ತನಾದ ಪರಮೇಶ್ವರನು ನನಗೆ ಪೂಜ್ಯನೇನೋ ಹೌದು, ಆದರೂ ಗುರುಗಳಾದ ವಸಿಷ್ಠರ ಹೋಮಧೇನುವಾದ ನಂದಿನಿಯು ನನ್ನೆದುರಿಗೆ ಕೊಲೆಯಾಗುವುದನ್ನು ಕಂಡು ನಾನು ಉಪೇಕ್ಷೆಯಿಂದಿರುವುದು ಉಚಿತವಲ್ಲ ಎಲೈ ಮೃಗೇಂದ್ರನೆ! ನೀನು ನನ್ನನ್ನು ಭಕ್ಷಿಸಿ, ನಿನ್ನ ಕ್ಷುದ್ಬಾಧೆಯನ್ನು ಪರಿಹರಿಸಿಕೋ ವಸಿಷ್ಠಮಹರ್ಷಿಗಳಿಗೆ ಸೇರಿದ ಈ ನಂದಿನೀಧೇನುವನ್ನು ಬಿಟ್ಟುಬಿಡು ಇದರ ಕರುವು ಬಹಳ ಎಳೆಯದು ಸಂಜೆಯ ವೇಳೆಗೆ ಅದು ಉತ್ಸುಕತೆಯಿಂದ ತನ್ನ ತಾಯಿಯ ಆಗಮನವನ್ನೇ ನಿರೀಕ್ಷಿಸುತ್ತಿರುತ್ತದೆ ಅದರ ಮೇಲಿನಕರುಣೆಯಿಂದಲಾದರೂ ನಂದಿನಿಯನ್ನು ಬಿಡು"

ದಿಲೀಪನ ಮಾತುಗಳನ್ನು ಕೇಳಿ ಭೂತೇಶ್ವರನಾದ ಪರಶಿವನ ಪಾರ್ಶ್ವವರ್ತಿಯಾದ ಆ ಸಿಂಹವು ಕೊಂಚ ನಕ್ಕು, ಆತನೊಡನೆ ಹೀಗೆ ಹೇಳಿತು: "ಎಲೈ ದಿಲೀಪನೆ! ನೀನು ಅಲ್ಪಕಾರಣಕ್ಕಾಗಿ ಮಹತ್ತರವಾದುದನ್ನು ತ್ಯಜಿಸಲು ಇಚ್ಛಿಸುತ್ತೀಯೆ ನೀನು ಏಕಚ್ಛತ್ರಾಧಿಪತಿಯಾದ ಚಕ್ರವರ್ತಿಯಾಗಿ ಜಗತ್ತಿಗೇ ಪ್ರಭುವಾಗಿರುವೆ ವಯಸ್ಸೂ ಹೆಚ್ಚಾಗಿಲ್ಲ ಯುವಕನಾದ ನಿನ್ನ ದೇಹವೂ ರಮ್ಯವಾಗಿದೆ ಅಲ್ಪ ಕಾರಣಕ್ಕಾಗಿ ಇಷ್ಟೆಲ್ಲವನ್ನೂ ತ್ಯಜಿಸುವ ಯೋಚನೆ ಮಾಡುತ್ತಿದ್ದೀಯೆ ಕಾರ್ಯಾಕಾರ್ಯ ವಿಮರ್ಶೆಯೇ ನಿನಗಿಲ್ಲ ನನ್ನ ಮನಸ್ಸಿಗೇನೋ ನೀನು ವಿಚಾರ ಮೂಢನೆಂದೇ ತೋರುತ್ತಿದೆ

ಸಮಸ್ತ ಜೀವಲೋಕವನ್ನೂ ರಕ್ಷಿಸುವ ಸಾಮರ್ಥ್ಯವಂತನಾದ ನೀನು ಜೀವಿಸಿದ್ದರೆ, ಪ್ರಜಾನಾಥನೆನಿಸಿ ನಿನ್ನ ಪ್ರಜಾಕೋಟಿಯನ್ನು ಉಪಪ್ಲವಗಳಿಂದ ರಕ್ಷಿಸಬಹುದು ಸಂತತವೂ ತಂದೆಯಂತೆ ಅವರಲ್ಲಿ ವಾತ್ಸಲ್ಯವನ್ನು ತೋರಿಸಿ ಸುಖವಾಗಿ ಅವರನ್ನು ಕಾಪಾಡಬಹುದು ಪ್ರಜಾಪಾಲನವೆಂಬ ಇಷ್ಟು ಮಹತ್ತರ ಕರ್ತವ್ಯವು ನಿನ್ನದು ಹೀಗಿದ್ದೂ, ಕೇವಲ ಭೂತಾನುಕಂಪದಿಂದ ಕೂಡಿ ಈ ಒಂದು ಗೋವನ್ನು ರಕ್ಷಿಸುವ ಅಲ್ಪಕ್ಕಾಗಿ (ಸಾಮ್ರಾಜ್ಯವನ್ನೂ, ಯೌವನದ ಸೌಂದರ್ಯವನ್ನೂ, ಪ್ರಜಾಪಾಲನದ ಮಹತ್ತರ ಕರ್ತವ್ಯವನ್ನೂ) ಇಷ್ಟೆಲ್ಲ ದೊಡ್ಡದನ್ನೂ ತ್ಯಾಗಮಾಡಲು ಸಿದ್ಧನಾಗಿರುವ ನೀನು ಮಂದಬುದ್ಧಿಯವನೇ ಸರಿ ಒಂದೇ ಹಸುವನ್ನಿಟ್ಟುಕೊಂಡಿರುವ ವಸಿಷ್ಠ ಮಹರ್ಷಿಯು ಅದರ ಮರಣವಾರ್ತೆಯನ್ನು ಕೇಳಿ ಚಂಡಕೋಪವನ್ನು ತಾಳಬಹುದೆಂದು ಅಗ್ನಿ ಸದೃಶನಾದ ಆತನ ವಿಚಾರವಾಗಿ ಭಾವಿಸಿ ನೀನು ಭಯಗ್ರಸ್ತನಾಗಿರಬಹುದು ಆತನ ಒಂದು ಧೇನುವಿಗೆ ಪ್ರತಿಯಾಗಿ ತುಂಬು ಕೆಚ್ಚಲಿನ ಕೋಟಿ ಕೋಟಿ ಹಸುಗಳನ್ನು ದಾನಮಾಡಿ ಆತನ ಕೋಪವನ್ನು ಶಾಂತಗೊಳಿಸುವುದು ನಿನಗೆ ಸಾಧ್ಯವಿದೆ ಆದಕಾರಣ, ಕಲ್ಯಾಣ ಪರಂಪರಗಳನ್ನು ಅನುಭವಿಸಿ ಸೌಖ್ಯಪಡುವ ಸಂಭವವುಳ್ಳುದಾಗಿ ಬಲಿಷ್ಠವಾಗಿರುವ ನಿನ್ನ ದೇಹವನ್ನು ರಕ್ಷಿಸಿಕೊಂಡು, ಜೀವಂತನಾಗಿಬಾಳು, ಪ್ರಜಾಪಾಲನ ಮಾಡು ಪ್ರಜೆಗಳು ಸುಖ ಸಂತೋಷಗಳಿಂದ ಬಾಳುವಂತೆ ರಾಜ್ಯವನ್ನು ಸಮೃದ್ಧವಾಗಿಟ್ಟುಕೊಳ್ಳುವ ರಾಜನ ಪರಮ ಪದವು, ಸ್ವರ್ಗವಾಸವಿಲ್ಲದಿರುವ ಭೇದವೊಂದನ್ನು ಬಿಟ್ಟರೆ ಉಳಿದ ವಿಚಾರಗಳಲ್ಲಿ, ಇಂದ್ರಪದವಿಗೆ ಸಮವೆಂದೇ ಪ್ರಾಜ್ಞರು ಹೇಳುತ್ತಾರೆ"

ಸಿಂಹವು ಹೀಗೆ ಹೇಳಿ ಸುಮ್ಮನಾಯಿತು ದೇವದಾರು ವೃಕ್ಷದ ಬಳಿಗೆ ಬಂದವರನ್ನು ಭಕ್ಷಿಸಿ ಸಿಂಹವು ಕ್ಷುದ್ಬಾಧೆಯನ್ನು ಪರಿಹರಿಸಿಕೊಳ್ಳುವಂತೆ ಪರಮೇಶ್ವರನ ಆಜ್ಞೆಯಾಗಿದ್ದುದರಿಂದಲೂ, ತಾನೂ ನಂದಿನಿಯೂ ಇಬ್ಬರೂ ಅಲ್ಲಿಗೆ ಬಂದುದರಿಂದಲೂ ಅದು ನಂದಿನಿಯನ್ನು ಜೀವದಿಂದುಳಿಸಿ ತನ್ನನ್ನು ಭಕ್ಷಿಸಬೇಕೆಂಬುದು ದಿಲೀಪನ ವ್ಯಂಗ್ಯವಾದ ಸೂಚನೆ, ತ್ಯಾಗ ಶೀಲನಾದ ಆ ಮಹಾತ್ಮನ ಭವ್ಯವಾದ ಸಲಹೆ ಆತನು ದಯಾನುಕಂಪ ಬುದ್ಧಿ

ಯುಳ್ಳವನಾಗಿ ಒಂದು ಹಸುವನ್ನು ಜೀವದಿಂದುಳಿಸುವುದಕ್ಕಾಗಿ ಧರ್ಮ ಸಾಧನವಾಗಿರುವ ತನ್ನ ದೇಹವನ್ನು ತ್ಯಾಗಮಾಡಿ ಪ್ರಜಾಕೋಟಿಯ ರಕ್ಷಣೆಯನ್ನು ತ್ಯಜಿಸುವುದು ಮೂಢತನವೆಂಬುದು ಸಿಂಹದ ವ್ಯಂಗ್ಯವಾದ ಉತ್ತರ, ಪ್ರಜಾಪಾಲನ ಕರ್ತವ್ಯವನ್ನು ನಿರ್ವಹಿಸಿ ರಾಜ್ಯವನ್ನು ಸಮೃದ್ಧ ವಾಗಿಟ್ಟುಕೊಂಡಿದ್ದರೆ ರಾಜಪದವಿಯು ಇಂದ್ರಪದವಿಗೆ ಸಮವಾದುದೆಂಬುದ ಅದರ ಬುದ್ಧಿವಾದ ಅಷ್ಟನ್ನೂ ಹೇಳಿ ಮೃಗೇಂದ್ರನು ಸುಮ್ಮನಾದಾಗ ಅದರ ಮಾತುಗಳು ಗುಹೆಯಲ್ಲಿ ಪ್ರತಿಧ್ವನಿತವಾದುವು ಹಿಮವತ್ಪರ್ವತವೇ ಪ್ರೀತಿ ಯಿಂದ (ದಿಲೀಪ ಕ್ಷಿತೀಶನಿಗ ಸಿಂಹವು ಹೇಳಿದ) ಆ ಮಾತುಗಳನ್ನೇ ತಾನೂ ಉಪದೇಶಿಸಿ ಸಲಹೆ ಹೇಳುತ್ತಿದ್ದಂತೆ ಅದರಿಂದ ತೋರಿತು ಸಿಂಹದ ಹಿಡಿತಕ್ಕೆ ಸಿಕ್ಕಿದ್ದ ನಂದಿನೀಧೇನುವು ದಿಲೀಪನು ಏನೆಂದು ಉತ್ತರ ಹೇಳಬಹುದೆಂಬು ದನ್ನೇ ಕುತೂಹಲದಿಂದ ನಿರೀಕ್ಷಿಸಿ ನೋಡುತ್ತಿದ್ದಿತು ದೇವಾನುಚರ ಸಿಂಹ ರಾಜನ ಮಾತುಗಳನ್ನು ಕೇಳಿದ ಮೇಲೆ, ದಯಾಳುವಾದ ಮನುಷ್ಯದೇವ ದಿಲೀಪನು ಮತ್ತೆ ಮಾತನಾಡತೊಡಗಿದನು ಅವನು ಸಿಂಹ ರಾಜನನ್ನು ಕುರಿತು, "ಕ್ಷತಿಯಿಂದ ಇತರರನ್ನು ರಕ್ಷಿಸುವವನಾವನೋ ಅವನೇ ಕ್ಷತ್ರಿಯ ನೆಂದು ಪ್ರಪಂಚದಲ್ಲಿ ಸುಪ್ರಸಿದ್ಧವಾಗಿದೆ ಹೀಗಿರುವಲ್ಲಿ ಹಿಂಸೆಗೆ ಗುರಿ ಯಾಗಿರುವವರನ್ನು ರಕ್ಷಿಸದೆ ತದ್ವಿಪರೀತ ವೃತ್ತಿಯಿಂದ ನಡೆಯತಕ್ಕ ಅಪ ಕೀರ್ತಿ ಭಾಜನನಿಗೆ ರಾಜ್ಯದಿಂದೇನು ಪ್ರಯೋಜನ? ಅಸಹ್ಯವಾದ ಅವನ ಪ್ರಾಣಗಳಿದ್ದೇನು ಪ್ರಯೋಜನ? ಇತರ ಪಸುಗಳನ್ನು ಕೊಟ್ಟು ವಸಿಷ್ಠ ಮಹರ್ಷಿಯನ್ನು ಸಮಾಧಾನಗೊಳಿಸುವ ಬಗೆಯಾದರೂ ಹೇಗೆ? ಕಾಮ ಧೇನುವಿನಂತೆಯೇ ಇರುವ ಈ ನಂದಿನೀ ಧೇನುವಿಗೆ ಪ್ರತಿಯಾಗಿ ಇತರ ಗೋವುಗಳನ್ನು ಕೊಟ್ಟು ಅವರನ್ನು ಸಂತೈಸಲಾದೀತೆ? ಕಾಮಧೇನುವಿಗೆ ಸಮವಾಗಿರುವ ಈ ನಂದಿನಿಯನ್ನು ನೀನು ಘಾತಿಸುವುದು ಸಾಧ್ಯವಾಗಿರು ವುದು, ನೀನು ಪಡೆದಿರುವ ರುದ್ರ ಶಕ್ತಿಯಿಂದ ಮಾತ್ರವೇ ನಾನು ಈ ನಂದಿನೀ ಧೇನುವಿಗೆ ಪ್ರತಿಯಾಗಿ ನನ್ನ ದೇಹವನ್ನೇ ನಿನಗೆ ಅರ್ಪಿಸಿ ಈ ಧೇನುವನ್ನು ಬಿಡುಗಡೆ ಮಾಡುವುದೇ ನ್ಯಾಯ ನೀನು ಅದಕ್ಕೆ ಸಮ್ಮತಿಸಿದರೆ ನಿನ್ನ

ಪಾರಣೆಗೂ ಲೋಪಬರುವುದಿಲ್ಲ ವಸಿಷ್ಠರ ಕರ್ಮಾಚರಣೆಗೂ ಲೋಪ ವುಂಟಾಗುವುದಿಲ್ಲ ನಿನ್ನ ಸ್ವಾಮಿಗೆ ಪ್ರಿಯವಾದ ದೇವದಾರು ವೃಕ್ಷವನ್ನು ರಕ್ಷಿಸುವುದಕ್ಕಾಗಿ ಮಹತ್ತರ ಪ್ರಯತ್ನವನ್ನು ನೀನು ಮಾಡುತ್ತಿದ್ದೀಯೆ ರಕ್ಷಣಯೋಗ್ಯವಾಗಿರುವ ಸ್ವಾಮಿಯ ವಸ್ತುವು ವಿನಾಶ ಹೊಂದಲು ಅವಕಾಶಕೊಟ್ಟು ಅದು ನಾಶವಾದ ಬಳಿಕ ತಾನು ಮಾತ್ರ ಗಾಯಹೊಂದದೆ ಸುರಕ್ಷಿತ ವಾಗಿದ್ದು ಸ್ವಾಮಿಯ ಎದುರಿಗೆ ನಿಲ್ಲುವುದು ಶಕ್ಯವಿಲ್ಲವೆಂಬುದು ಒಡೆಯನ ಸೇವೆ ಯಲ್ಲಿ ನಿರತನಾಗಿ ಪರತಂತ್ರನಾಗಿರುವ ನಿನಗೆ ತಿಳಿದಿಲ್ಲದ ವಿಷಯವಲ್ಲ ನನ್ನನ್ನು ಕೊಂದು ತಿನ್ನಲು ನೀನು ಮನಸ್ಸು ಮಾಡಲಾಗದಂತೆ ನಾನು ಅಹಿಂಸ್ಯನೆಂಬುದು ನಿನ್ನ ಭಾವನೆಯಾಗಿದ್ದಲ್ಲಿ ನನ್ನ ಯಶಶ್ಶರೀರದ ವಿಷಯ ದಲ್ಲಿ ದಯೆಯನ್ನು ತೋರಿಸು ಇಂದು ನಂದಿನಿಯನ್ನು ನೀನು ತಿಂದು ನನ್ನ ಈ ದೇಹವು ಉಳಿಯುವ ಪಕ್ಷದಲ್ಲಿ ನನ್ನ ಯಶಶ್ಶರೀರವು ನಾಶವಾಗುತ್ತದ ಆದಕಾರಣ ಅದರ ವಿಷಯದಲ್ಲಿ ದಯಾಳುವಾಗಿ ವರ್ತಿಸಿ, ನಂದಿನಿಯನ್ನು ಬಿಟ್ಟು ಕೊಟ್ಟು ನನ್ನ ದೇಹವನ್ನು ಆಹಾರವಾಗಿ ಸ್ವೀಕರಿಸಿ ನಿನ್ನ ಪಾರಣಯನ್ನು ಪೂರೈಸು ನನ್ನಂತಹವರಿಗ ನಶ್ವರವಾದ (ಒಂದಿಲ್ಲ ಒಂದು ದಿನ ನಾಶವಾಗುವ) ಭೌತ ಶರೀರದಲ್ಲಿ ಆಸ್ಥೆಯೇ ಇಲ್ಲ ಮೈತ್ರಿಯು ಸಂಭಾಷಣ ಮೂಲವೆಂದು ಪ್ರಾಜ್ಞರು ಹೇಳುತ್ತಾರ ನಾವಿಬ್ಬರೂ ಈ ವನಾಂತ ಪ್ರದೇಶದಲ್ಲಿ ಸಂಭಾಷಿಸಿರುವ ಕಾರಣ, ನಾನು ನಿನ್ನಲ್ಲಿ ಮೈತ್ರಿಯನ್ನು ಪ್ರಾರ್ಥಿಸುತ್ತೇನೆ ಭೂತನಾಥನಾದ ಪರಶಿವನ ಅನುಚರನಾದ ನೀನು ನಿನ್ನ ಮಿತ್ರನಾದ ನನ್ನಕೋರಿಕೆಯನ್ನು ಸಲ್ಲಿಸದೆ, ತನ್ಮೂಲಕ ನಮ್ಮಿಬ್ಬರ ಪ್ರಣ ಯಕ್ಕೆ ಭಂಗವನ್ನುಂಟು ಮಾಡುವುದು ಉಚಿತವಲ್ಲ" ಎಂದು ಹೇಳಿದನು

ಭೌತದೇಹ ರಕ್ಷಣೆಗಿಂತಲೂ ಯಶಶ್ಶರೀರಕ್ಕ ಕಳಂಕತಟ್ಟದಂತೆ ಕಾಪಾಡಿ ಕೊಳ್ಳುವುದು ಶ್ರೇಷ್ಠವೆಂದು ಭಾವಿಸಿದ್ದ ಮಹಾನುಭಾವನಾದ ದಿಲೀಪನ ವಚನ ಗಳನ್ನು ಕೇಳಿ ಸಿಂಹ ರೂಪಿಯಾದ ಆ ಶಿವಕಿಂಕರನು ಅವನ ಕೋರಿಕೆಯನ್ನು ಸಲ್ಲಿಸಲುಸಮ್ಮತಿಸಿ ಒಡನೆಯೇ ನಂದಿನಿಯನ್ನುಬಿಟ್ಟುಬಿಟ್ಟನು ಅಲ್ಲದೆ ಸ್ತಂಭಿತ ದಿಲೀಪನ ಬಾಹುವೂ ಪ್ರತಿಬಂಧ ವಿಮುಕ್ತವಾಯಿತು ದಿಲೀಪನು ಶಸ್ತ್ರತ್ಯಾಗ ಮಾಡಿ, ದೇಹಾಭಿಮಾನವನ್ನು ತೊರೆದು, ತನ್ನ ದೇಹವು ಸಿಂಹಕ್ಕೆ ಆಹಾರವಾಗ

ಬೇಕಾಗಿದ್ದ ಮಾಂಸದ ಉಂಡೆಯೆಂಬ ಭಾವನೆಯಿಂದ ತನ್ನ ದೇಹವನ್ನು ಸಮರ್ಪಿಸಿದನು ಸಿಂಹವು ಉಗ್ರವಾಗಿ ತನ್ನ ಮೇಲೆರಗಬಹುದೆಂದು ನಿರೀಕ್ಷಿಸಿ ಅಧೋಮುಖನಾಗಿ ಬಗ್ಗಿದ್ದ ಪ್ರಜಾಪಾಲಕನಾದ ದಿಲೀಪನ ಮೇಲೆ ವಿದ್ಯಾಧರರು ಪುಷ್ಪವೃಷ್ಟಿಯನ್ನು ಕರೆದರು ದಿಲೀಪನು, "ವತ್ಸ! ಮೇಲಕ್ಕೇಳು" ಎಂಬ ಅಮೃತವಾಣಿಗಳನ್ನು ಕೇಳಿ ಮೇಲಕ್ಕೆದ್ದನು ಆಗ ಅತ್ಯಧಿಕವಾದ ಕ್ಷೀರಸ್ರವದಿಂದ ಶೋಭಿಸುತ್ತ ಜನನಿಯಂತೆ ನಿಂತಿದ್ದ ನಂದಿನೀ ಧೇನುವನ್ನು ದಿಲೀಪ ರಾಜನು ಕಂಡನು ಸಿಂಹವು ಅಲ್ಲಿರಲೇ ಇಲ್ಲ ವಿಸ್ಮಿತನಾದ ದಿಲೀಪನನ್ನು ಕುರಿತು ನಂದಿನೀಧೇನುವು, "ಎಲೈ ಸಾಧುವೆ! ಮಾಯಾಮಯವಾದ ದೃಶ್ಯವನ್ನು ಕಲ್ಪಿಸಿ ನಾನು ನಿನ್ನನ್ನು ಪರೀಕ್ಷಿಸಿ ನೋಡಿದೆ ವಸಿಷ್ಠ ಮಹರ್ಷಿಪ್ರಭಾವದಿಂದ ಯಮನ ಅಧಿಕಾರವೂ ಕೂಡ ನನ್ನಮೇಲೆ ನಡೆಯದು ಹೀಗಿರುವಲ್ಲಿ ಹಿಂಸ್ರ ಮೃಗಗಳು ನನ್ನನ್ನು ಕೊಲ್ಲಬಲ್ಲುವೆ? ವತ್ಸ! ವಸಿಷ್ಠಮಹರ್ಷಿಯಲ್ಲಿ ನಿನಗಿರುವ ಗುರುಭಕ್ತಿಯಿಂದಲೂ, ನನ್ನಲ್ಲಿ ನೀನು ಪ್ರದರ್ಶಿಸಿದ ಅನುಕಂಪ ಬುದ್ಧಿಯಿಂದಲೂ ನಾನು ಸುಪ್ರೀತಳಾಗಿದ್ದೇನೆ ವತ್ಸ! ವರನನ್ನು ಕೇಳು ನಾನು ಹಾಲನ್ನು ಮಾತ್ರವೇ ಕೊಡಬಲ್ಲವಳೆಂದು ಭಾವಿಸಬೇಡ ನಾನು ಪ್ರಸನ್ನಳಾದರೆ ಇಷ್ಟಾರ್ಥಗಳನ್ನೆಲ್ಲ ನೆರವೇರಿಸಬಲ್ಲೆ" ಎಂದು ಹೇಳಿತು ಅರ್ಥಿಗಳ ಇಷ್ಟಾರ್ಥವನ್ನು ಪೂರ್ಣಗೊಳಿಸಿ ಸನ್ಮಾನಿಸುತ್ತಿದ್ದವನೂ, ಸ್ವಂತ ಪರಾಕ್ರಮದಿಂದ ವೀರನೆಂಬ ಖ್ಯಾತಿಯನ್ನು ಗಳಿಸಿದ್ದವನೂ ಆದ ದಿಲೀಪ ಚಕ್ರವರ್ತಿಯು ತನ್ನ ಹಸ್ತಗಳನ್ನು ಭಕ್ತಿಯಿಂದ ಜೋಡಿಸಿ ವಂಶಕರ್ತಾರನೂ ಅನಂತ ಕೀರ್ತಿಶಾಲಿಯೂ ಆದ ಸುಪುತ್ರನನ್ನು ತನಗೆ ಸುದಕ್ಷಿಣಾದೇವಿಯಲ್ಲಿ ಅನುಗ್ರಹಿಸುವಂತೆ ನಂದಿನೀ ಧೇನುವನ್ನು ಪ್ರಾರ್ಥಿಸಿದನು ಸಂತಾನಕಾಮಿಯಾದ ಆತನನ್ನು ಕುರಿತು ನಂದಿನೀಧೇನುವು "ಹಾಗೆಯೇ ಆಗಲಿ" ಎಂದು ವರವನ್ನು ಕರುಣಿಸಿ, "ವತ್ಸ! ಎಲೆಗಳಿಂದ (ದೊನ್ನೆಯನ್ನು ಕಟ್ಟಿ) ನನ್ನ ಹಾಲನ್ನು ಕರೆದು ಪಾನಮಾಡು ನಿನ್ನ ಅಭೀಷ್ಟವು ನೆರವೇರುವುದು" ಎಂದು ಅಪ್ಪಣೆ ಮಾಡಿತು ದಿಲೀಪನು ಆ ರೀತಿ ಮಾಡದೆ, "ತಾಯೇ! ನಿನ್ನ ಕರುವು ಹಾಲನ್ನು ಕುಡಿದ ತರುವಾಯ ವಸಿಷ್ಠರು ಹೋಮಾರ್ಥವಾಗಿ ನಿನ್ನ ಹಾಲನ್ನು

ಉಪಯೋಗಿಸಿದ ಬಳಿಕ ವಸಿಷ್ಠರ ಅನುಜ್ಞೆಯನ್ನು ಪಡೆದು—ನಾನು ರಕ್ಷಿಸುವ ಭೂಮಿಯ ಉತ್ಪತ್ತಿಯಲ್ಲಿ ಷಷ್ಠಾಂಶವನ್ನು ಸ್ವೀಕರಿಸುವಂತೆ ಕ್ಷೀರಶೇಷವನ್ನು ಪಾನಮಾಡುವೆನು" ಎಂದು ಹೇಳಿದನು ಅವನು ಭಕ್ತಿಯಿಂದ ಆಡಿದ ಆ ಮಾತುಗಳನ್ನು ಕೇಳಿ ನಂದಿನೀ ಧೇನುವಿಗೆ ಮತ್ತಷ್ಟು ಪ್ರೀತಿಯುಂಟಾಯಿತು ಅನಂತರ ವಸಿಷ್ಠಮಹರ್ಷಿಯ ಹೋಮಧೇನುವು ಹಿಮಾಲಯದ ಗುಹೆ ಯಿಂದ ಹೊರಟು ದಿಲೀಪನನ್ನು ಹಿಂಬಾಲಿಸುತ್ತ ಲೇಶವೂ ಶ್ರಮವಿಲ್ಲದೆ ವಸಿಷ್ಠಾಶ್ರಮಕ್ಕೆ ಹಿಂತಿರುಗಿತು ರಾಜರುಗಳಿಗೆಲ್ಲ ಗುರುವಿನಂತಿದ್ದ ದಿಲೀಪ ಚಕ್ರವರ್ತಿಯು ತನ್ನಲ್ಲಿ ನಂದಿನಿಯು ಅನುಗ್ರಹಿಸಿದ ಸಂಗತಿಯನ್ನು ವಸಿಷ್ಠ ಗುರುವಿನಲ್ಲಿ ವಿಜ್ಞಾಪಿಸಿದನು ಪ್ರಸನ್ನ ಚಂದ್ರನಂತಿದ್ದ ಆತನ ಸಗು ಮುಖವನ್ನು ನೋಡಿಯೇ ಅದನ್ನು ಊಹಿಸಿದ್ದ ವಸಿಷ್ಠನಿಗೆ ದಿಲೀಪನ ಬಿನ್ನ ಪವು ಪುನರುಕ್ತಿಯೇ ಆಯಿತು ಗುರುವಿಗೆ ಅದನ್ನು ಬಿನ್ನೈಸಿದ ಮೇಲ ಅವನು ತನ್ನ ಪ್ರಿಯೆಯಾದ ಸುದಕ್ಷಿಣಾದೇವಿಯ ಬಳಿಸಾರಿ ಅವಳಿಗೂ ಅದನ್ನು ತಿಳಿಸಿದನು ಅವನ ಮುಖಭಾವದಿಂದಲೇ ಅದನ್ನು ಊಹಿಸಿದ್ದ ಸುದಕ್ಷಿಣಾ ದೇವಿಗೂ ಅದು ಪುನರುಕ್ತಿಯೇ ಆಯಿತು ಸಾತ್ವಿಕನೂ, ಸಜ್ಜನರಲ್ಲಿ ಪ್ರೇಮ ಪ್ರಿಳ್ಳವನಾದ ಸದ್ವತ್ಸಲನೂ ಆದ ದಿಲೀಪನು ನಂದಿನೀ ಧೇನುವಿನ ಕ್ಷೀರದಲ್ಲಿ ಕರುವೂ ಕುಡಿದು, ಹೋಮ ಕಾರ್ಯಗಳಿಗೂ ವಿನಿಯೋಗವಾಗಿ ಉಳಿದ ಅವ ಶೇಷವನ್ನು ತನ್ನ ಶುಭ್ರಯಶಸ್ಸನ್ನೇ ತಾನು ಪಾನಮಾಡುತ್ತಿದ್ದಂತೆ ಆಶೆಯಿಂದ ಪಾನಮಾಡಿದನು

ಮಾರನೆಯ ದಿನ ಪ್ರಾತಃಕಾಲ ವ್ರತಪಾರಣೆಯನ್ನು ಪೂರೈಸಿದ ಮೇಲೆ ದಿಲೀಪನೂ, ಸುದಕ್ಷಿಣಾದೇವಿಯೂ ರಾಜಧಾನಿಗೆ ಹಿಂತಿರುಗಲು ಪ್ರಯಾಣ ಹೊರಟರು ಸಂಯಮಿಯಾದ ವಸಿಷ್ಠನು ಆದಂಪತಿಗಳಿಗೆಪ್ರಸ್ಥಾನಕಾಲೋಚಿತ ವಾದ ಆಶೀರ್ವಾದ ಮಾಡಿ ಅವರನ್ನು ರಾಜಧಾನಿಗೆ ಪ್ರಯಾಣಮಾಡಿಸಲು ಸಿದ್ಧವಾದನು ಯಶಸ್ವಿಯಾದ ದಿಲೀಪನು ತನ್ನ ಸಹಧರ್ಮಿಣಿಯೊಡನೆ ಮೊದಲು ಅಗ್ನಿಗೂ, ಅನಂತರ ಅರುಂಧತೀ ದೇವಿಗೂ, ವಸಿಷ್ಠನಿಗೂ, ಕರು ವಿನೊಡಗೂಡಿದ್ದ ನಂದಿನೀಧೇನುವಿಗೂ ಪ್ರದಕ್ಷಿಣ ನಮಸ್ಕಾರ ಮಾಡಿ ಶುಭ

ಶಕುನಗಳಾಗುತ್ತಿರುವಲ್ಲಿ ಆಶ್ರಮದಿಂದ ಹೊರಟನು ದಿಲೀಪನು ತನ್ನ ಧರ್ಮ ಪತ್ನೀ ಸಮೇತನಾಗಿ 'ಶ್ರೋತ್ರಾಭಿರಾಮಧ್ವನಿ' ಯಿಂದ ಕೂಡಿದ ತನ್ನ ರಥ ದಲ್ಲಿ ರಾಜಧಾನಿಗೆ ಪ್ರಯಾಣಮಾಡಿದನು ಆ ರಥವು ಕಿವಿಗಿಂಪಾದ ಧ್ವನಿ ಯಿಂದ ಮುಂದೆ ಸಾಗುತ್ತಿದ್ದಿತಲ್ಲದೆ ಲೇಶಮಾತ್ರವೂ ಕುಲುಕುತ್ತಿರಲಿಲ್ಲ ದಿಲೀಪನು ಪೂರ್ಣಮನೋರಥನಾಗಿ ಆ ರಥದಲ್ಲಿ ಪ್ರಯಾಣ ಮಾಡುತ್ತಿದ್ದನು ಸಂತಾನಾರ್ಥವಾಗಿ ಕೈಕೊಂಡ ವ್ರತನಿಯಮಾದಿಗಳಿಂದ ಕೃಶನಾಗಿದ್ದರೂ ದಿಲೀಪನು ತೇಜೋನ್ವಿತನಾಗಿದ್ದನು ಬಹುಕಾಲ ಅವನ ದರ್ಶನವಿಲ್ಲದೆ ಮರುಗುತ್ತಿದ್ದ ಪ್ರಜೆಗಳು ಉದಯಿಸುತ್ತಿರುವ ಚಂದ್ರನನ್ನು ನೋಡುವಂತೆ ಔತ್ಸುಕ್ಯದಿಂದ ಅವನನ್ನು ನೋಡುತ್ತಿದ್ದರು. ಅವನನ್ನು ಎಷ್ಟು ನೋಡಿದರೂ ತೃಪ್ತಿಯಿಲ್ಲದೆ ಮತ್ತೆ ಮತ್ತೆ ಅವನನ್ನು ನೋಡಿ ನೋಡಿ ಹರ್ಷಿಸುತ್ತಿದ್ದರು ಇಂದ್ರಕಾಂತಿಯಿಂದ ಸಂಶೋಭಿಸುತ್ತಿದ್ದ ದಿಲೀಪನು ಪತಾಕೆಗಳಿಂದ ಶೋಭಿಸು ತ್ತಿದ್ದ ತನ್ನ ರಾಜಧಾನಿಯಾದ ಅಯೋಧ್ಯಾನಗರವನ್ನು ಪ್ರವೇಶಿಸಿದನು ಪುರ ಜನರು ಅವನನ್ನು ಸಂತೋಷದಿಂದ ಸ್ವಾಗತಿಸಿ ಅಭಿನಂದಿಸಿದರು ಆದಿಶೇಷ ನಂತೆ ಬಲಯುತನಾಗಿದ್ದ ದಿಲೀಪನು ಮತ್ತೆ ರಾಜ್ಯಭಾರವನ್ನು ವಹಿಸಿದನು ಯಥಾಕಾಲದಲ್ಲಿ ಸುದಕ್ಷಿಣಾದೇವಿಯು ಗರ್ಭಿಣಿಯಾದಳು ಆದರ್ಶರಾಜನು ಎಂಟು ಮಂದಿ ಲೋಕಪಾಲರ ಅನುಗ್ರಹಕ್ಕೂ ಪಾತ್ರನಾಗಿರುವನೆಂಬ ಮತ್ತು ಎಂಟು ಮಂದಿ ಲೋಕಪಾಲರ ಅಂಶಗಳೇ ಆದರ್ಶರಾಜನಲ್ಲಿ ಅವತರಿಸಿರುವುವೆಂ ಬ ಆರ್ಯೋಕ್ತಿಗನುಸಾರವಾಗಿ ರಾಣಿ ಸುದಕ್ಷಿಣಾದೇವಿಯ ಗರ್ಭವು ಬಳೆ ಯುತ್ತಿದ್ದಿತು

## ಮೂರನೆಯ ಪರಿಚ್ಛೇದ

### ರಘು ರಾಜ್ಯಾಭಿಷೇಕ

ಸುದಕ್ಷಿಣಾದೇವಿಯು ಗರ್ಭಿಣಿಯಾದುದರಿಂದ ಪುತ್ರಾರ್ಥಿಯಾಗಿದ್ದ ದಿಲೀಪನಿಗೆ ಬಹಳ ಸಂತೋಷವಾಯಿತು. ಸುದಕ್ಷಿಣಾದೇವಿಯು ಸರ್ವ ಜನರಿಗೆ "ಚಂದ್ರಿಕಾ ಪ್ರಾದುರ್ಭವ"ವನ್ನು ಕಂಡಂತೆ ಆಹ್ಲಾದವಾಯಿತು ಇಕ್ಷ್ವಾಕು ಕುಲಸಂತತಿಗೆ ನಿದಾನವು ಒದಗಿ ಪ್ರಜೆಗಳೆಲ್ಲರಿಗೂ ಹರ್ಷವುಂಟಾಯಿತು ಗರ್ಭಿಣಿಯಾದ ಸುದಕ್ಷಿಣಾದೇವಿಯು ಆಯಾಸ ನಿಮಿತ್ತವಾಗಿ ಅಲ್ಪಾಭರಣ ಭೂಷಿತೆಯಾಗಿದ್ದಳು ಅವಳ ಮುಖವು ಲೋಧ್ರ ಪುಷ್ಪದಂತೆ ಪೇಲವವಾಗಿದ್ದಿತು ಕತ್ತಲೆಯು ಕಳೆದು ಪ್ರಭಾತಕಲ್ಪವಾಗುತ್ತಿರುವ ರಾತ್ರಿಯಂತೆ ಅವಳು ಶೋಭಿಸುತ್ತಿದ್ದಳು ಬೆಳಕು ಹರಿಯುತ್ತಿರುವಾಗ (ರಾತ್ರಿಯಲ್ಲಿದ್ದಂತೆ ಎಲ್ಲ ನಕ್ಷತ್ರಗಳೂ ಕಾಣುವಂತಿಲ್ಲದೆ) ಕೆಲವೇ ನಕ್ಷತ್ರಗಳೂ ಮತ್ತು (ರಾತ್ರಿಯಲ್ಲಿದ್ದಂತೆ ಚಂದ್ರನ ಪ್ರಕಾಶವಿಲ್ಲದೆ) ಪೇಲವನಾದ ಚಂದ್ರನೂ ಕಾಣುವಂತೆ (ಅಲ್ಪಾಭರಣ ಭೂಷಿತೆಯಾಗಿ ಮುಖವೂ ಪೇಲವವಾಗಿದ್ದ) ಅವಳ ಸ್ಥಿತಿಯಿದ್ದಿತು ಬಯಕೆಗಾಗಿ ಅವಳು ಭಕ್ಷಿಸುತ್ತಿದ್ದ ಮಣ್ಣಿನ ದೆಸೆಯಿಂದ ಉಂಟಾದ ವಾಸನೆಯನ್ನು (ಅವಳೊಡನೆ ಏಕಾಂತದಲ್ಲಿ ಕುಳಿತು) ಎಷ್ಟು ಆಘ್ರಾಣಿಸಿದರೂ ದಿಲೀಪನಿಗೆ ತೃಪ್ತಿಯೇ ಇರಲಿಲ್ಲ ಕಾಡಿನ ಮಧ್ಯದಲ್ಲಿ ನೀರೆಲ್ಲ ಶೋಷಿಸಿ ಹೋಗಿದ್ದ ಒಣ ಹೊಂಡಕ್ಕೆ ಗ್ರೀಷ್ಮಾಂತ್ಯದಲ್ಲಿ ಮಳೆಯಹನಿಗಳು ಬಿದ್ದಾಗ ಹೊರಹೊಮ್ಮುವ ಮಣ್ಣಿನವಾಸನೆಯನ್ನುಆಘ್ರಾಣಿಸಿ ತೃಪ್ತಿ ಹೊಂದದಿರುವ ಕಾಡಾನೆಯಂತೆ ಅವನೂ ವರ್ತಿಸುತ್ತಿದ್ದನು ಸುದಕ್ಷಿಣಾದೇವಿಯು ತನ್ನ ಗರ್ಭದಲ್ಲಿದ್ದ ಶಿಶುವು (ಎಂದರೆ ರಘುವು) ಮುಂದೆ ದಿಗಂತ ವಿಶ್ರಾಂತರಥನಾಗಿ ಭೂಮಂಡಲವನ್ನೇಜಯಿಸುವವನಾಗಿದ್ದುದರಿಂದಭೂವಿಕಾರವಸ್ತುವಾದಮಣ್ಣನ್ನುಭಕ್ಷಿಸುವ ಬಯಕೆಯು ಅವಳಿಗುಂಟಾಯಿತು ಮತ್ತಾವ ವಸ್ತುಗಳನ್ನು ಭಕ್ಷಿಸುವ ಅಭಿಲಾಷೆಗಿಂತಲೂ ಮಣ್ಣನ್ನುಭಕ್ಷಿಸುವ ಅಭಿಲಾಷೆಯು ಅವಳಿಗೆಹೆಚ್ಚಾಗಿದ್ದುದಕ್ಕೆ ಅದೇ ಕಾರಣ * ಮುಂದೆ ತ್ರಿಕರಣ ಶುದ್ಧವಾಗಿ ತನ್ನ ಸರ್ವವನ್ನೂ

* ಇದೊಂದು ಮನೋಜ್ಞವಾದ ಅರ್ಥಾಂತರ ಕಲ್ಪನೆ

ಪ್ರಜೆಗಳಸುಖ ಸಂತೋಷ ಸಾಧನೆಗಾಗಿ ಸಮರ್ಪಿಸಿ ತ್ಯಾಗ ಮೂರ್ತಿಯಾಗ ತಕ್ಕ ರಘುಚಕ್ರವರ್ತಿಯನ್ನು ಗರ್ಭದಲ್ಲಿ ಧರಿಸಿದ್ದ ಸುದಕ್ಷಿಣಾದೇವಿಗೆ ಈ ಬಗೆಯ ಅಭಿಲಾಷೆಯುಂಟಾಯಿತೆಂದು ವರ್ಣಿಸಿರುವುದು ಕಾಳಿದಾಸನ ಕಲಾಭಿಜ್ಞತೆಗೊಂದು ಉತ್ತಮ ನಿದರ್ಶನವೇ ಸರಿ ಅಖಂಡವಾದ ಆಧಿಪತ್ಯಮಾಡಿಕೊಂಡು ಸ್ವರ್ಗಾನುಭವಮಾಡುವ ಇಂದ್ರನಂತೆ ದಿಗಂತ ವಿಶ್ರಾಂತರಥನೆನಿಸಿ ಸಮಸ್ತ ಭೂಮಂಡಲವನ್ನೂ ಪರಿಪಾಲಿಸುವವನಾಗಿದ್ದ ರಘುವನ್ನು ಗರ್ಭದಲ್ಲಿ ಧರಿಸಿದ್ದ ಸುದಕ್ಷಿಣಾದೇವಿಗೆ ಇತರ ಯಾವ ಖಾದ್ಯವಸ್ತುವಿನ ಮೇಲೂ ಆಪೇಕ್ಷೆಯಿಲ್ಲದೆ, ಪ್ರಥಮತಃ ಈ ವಿಧದ ಅಭಿಲಾಷೆಯುಂಟಾಯಿತು ಮಗಧ ರಾಜಪುತ್ರಿಯಾದ ಸುದಕ್ಷಿಣಾದೇವಿಯು ತನ್ನೊಡನೆ ಬಯಕೆಗಳನ್ನು ತಿಳಿಸಲು ಲಜ್ಜಿಸಿ ಸುಮ್ಮನಾಗಬಹುದೆಂಬ ಶಂಕೆಯಿಂದ ದಿಲೀಪನು ಕಾಲದಿಂದ ಕಾಲಕ್ಕೆ ಅವಳ ಬಯಕೆಗಳನ್ನು ತನಗೆ ತಿಳಿಸಬೇಕೆಂದು ಪದೇ ಪದೇ ಅವಳ ಪ್ರಿಯ ಸಖಿಯರನ್ನು ಕೇಳುತ್ತಿದ್ದನು ಧನುರ್ಧಾರಿಯಾದ ದಿಲೀಪನಿಗೆ ಸ್ವರ್ಗದಲ್ಲಿರುವ ವಸ್ತುಗಳು ಕೂಡ ಅಲಭ್ಯವೆನಿಸಿರಲಿಲ್ಲ ಆದಕಾರಣ ವೀರಪತ್ನಿಯಾದ ಸುದಕ್ಷಿಣಾದೇವಿಯ ಸಮಸ್ತ ಬಯಕೆಗಳೂ ಆ ಆ ಕೂಡಲೇ ನೆರವೇರುತ್ತಿದ್ದುವು

ಅವಳ ಬಯಕೆಗಳ ಅವಸ್ಥೆಯು ಮುಗಿದು ಕ್ರಮ ಕ್ರಮವಾಗಿ ಅವಳ ಅವಯವಗಳು ಪುಷ್ಟಿಹೊಂದಿ ಅವಳು ರಾರಾಜಿಸಿದಳು ಹಾಗೆ ನವ್ಯತೆ ಹೊಂದಿದ ಸುದಕ್ಷಿಣಾದೇವಿಯು ಹಣ್ಣೆಲೆಗಳೆಲ್ಲ ಉದುರಿಹೋದ ತರುವಾಯು ಪಲ್ಲವಮಯವಾಗಿ ಪರಿಶೋಭಿಸುವ ಲತೆಯಂತೆ ಕಂಗೊಳಿಸಿದಳು ಗರ್ಭಿಣಿಯಾದ ಸುದಕ್ಷಿಣಾದೇವಿಯನ್ನು ರತ್ನಗರ್ಭವಾದ ವಸುಂಧರೆಯಂತೆಯೂ, ಅಗ್ನಿ ಗರ್ಭವಾದ ಶಮಿಯಂತೆಯೂ ಮತ್ತು ಅಂತಸ್ಸಲಿಲವುಳ್ಳ ಸರಸ್ವತೀ ನದಿಯಂತೆಯೂ ದಿಲೀಪನು ಭಾವಿಸಿದನು ದಿಲೀಪ ಮಹಿಷಿಯ ಗರ್ಭದಲ್ಲಿ ಅಭಿವರ್ಧಿಸುತ್ತಿದ್ದ ರಘುವು ಅಮೌಲ್ಯಶೀಲನೂ, ತೇಜಸ್ವಿಯೂ, ಪಾವನ ಸ್ವರೂಪನೂ ಆಗಿದ್ದನೆಂಬುದನ್ನು ಈ ಉಪಮಾನಗಳು ಮನೋ

ಹೆರವಾಗಿ ಸೂಚಿಸುತ್ತವೆ ದಿಲೀಪನು ತನ್ನ ಪ್ರಿಯಳಾದ ಸುದಕ್ಷಿಣಾದೇವಿಯಲ್ಲಿ ತನಗಿದ್ದ ಅನುರಾಗಕ್ಕೂ, ತನ್ನ ಮನಸ್ಸಿನ ಸಮುನ್ನತಿಗೂ, ತನ್ನ ಭುಜಾರ್ಜಿತವಾದ ದಿಗಂತ ಸಂಪತ್ತಿಗೂ ಪುತ್ರೋತ್ಪತ್ತಿ ವವನ್ನು ಕಾಣುವೆನೆಂಬ ಉತ್ಸುಕತೆಯಿಂದುಂಟಾಗಿದ್ದ ತನ್ನ ಅಮಿತ ಸಂತೋಷಕ್ಕೂ ಅನುರೂಪವಾಗಿದ್ದ ವೈಭವ ವಿಜೃಂಭಣೆಗಳಿಂದ ಯಥಾಕ್ರಮವಾಗಿ ಪುಂಸವನಾದಿ ಸಂಸ್ಕಾರಗಳನ್ನು ನೆರವೇರಿಸಿದನು ಅಷ್ಟದಿಕ್ಪಾಲಕರ ಅಂಶದಿಂದೊಡಗೂಡಿ ಗರ್ಭವು ಅಭಿವರ್ಧಿಸುತ್ತಿರುವಲ್ಲಿ ಗರ್ಭಭಾರದಿಂದ ಸುದಕ್ಷಿಣಾದೇವಿಯು ಪ್ರಯತ್ನ ಪೂರ್ವಕವಾಗಿ ಮೇಲಕ್ಕೆದ್ದು (ತನ್ನ ಅಂತಃಪುರಕ್ಕೆ ಪ್ರವೇಶಮಾಡಿದ) ಪತಿಗೆ ಗೌರವವನ್ನು ತೋರಿಸುತ್ತಿದ್ದಳು ಅದನ್ನು ಕಂಡು ದಿಲೀಪನು ಹರ್ಷಿಸುತ್ತಿದ್ದನು ಉಪಚಾರಕ್ಕಾಗಿಯೂ, ಗೌರವಕ್ಕಾಗಿಯೂ ತನ್ನ ಅಂಜಲಿಯಲ್ಲಿ ಹಿನ್ನ ಹಸ್ತಳಾಗಿ ಅಂಜಲಿಯನ್ನು ಸಮರ್ಪಿಸುತ್ತಿದ್ದ ಆ ತರಳಾಕ್ಷಿಯನ್ನು ಕಂಡು ಅವನು ಹಿಗ್ಗುತ್ತಿದ್ದನು ಗರ್ಭಪೋಷಣ ಚಿಕಿತ್ಸಾಕಾರ್ಯಗಳಲ್ಲಿ ಕುಶಲರಾಗಿದ್ದ ಆಪ್ತವೈದ್ಯರು ಸುದಕ್ಷಿಣಾದೇವಿಯನ್ನು ಎಚ್ಚರಿಕೆಯಿಂದಲೂ, ಶ್ರದ್ಧೆಯಿಂದಲೂ ನೋಡಿಕೊಂಡರು ಅವರು ಪ್ರಸವಕಾಲದಲ್ಲಿಯೂ ಮತ್ತು ಅದಕ್ಕೆ ಹಿಂದೆಯೂ ಗರ್ಭಿಣಿಯರನ್ನು ಚಿಕಿತ್ಸೆಯಿಂದಲೂ, ಉಪಚಾರದಿಂದಲೂ ನೋಡಿಕೊಳ್ಳುವ ಕುಮಾರ ಭೃತ್ಯಾ † ಎಂಬ ವೈದ್ಯಶಾಸ್ತ್ರ ಶಾಖೆಯಲ್ಲಿ ಪರಿಣತರಾಗಿದ್ದರು

* ಸ್ತ್ರೀಯರಲ್ಲಿ ಗೌರವ ಕೊಡುವುದು ಭಾರತೀಯ ಸಂಸ್ಕೃತಿಯ ಮುಖ್ಯ ಲಕ್ಷಣ ಸುಸಂಸ್ಕೃತನಾದ ಕಾಳಿದಾಸನಿಗೆ ಸ್ತ್ರೀತ್ವದಲ್ಲಿ ಎಷ್ಟು ಪೂಜ್ಯ ಭಾವನೆ ಇದ್ದಿತೆಂಬುದಕ್ಕೆ ಇದು ಒಂದು ನಿದರ್ಶನ

† ಕವಿಕುಲ ಗುರುವಿನ ಕಾಲದಲ್ಲಿ ಆಯುರ್ವೇದವು ಎಷ್ಟು ಉಚ್ಚ ಸ್ಥಿತಿಯಲ್ಲಿದ್ದಿತೆಂಬುದು ಇದರಿಂದ ವ್ಯಕ್ತವಾಗುತ್ತದೆ ಹೆರಿಗೆಗೆ ಮುಂಚಿನ ತಿಂಗಳುಗಳಲ್ಲಿ ಗರ್ಭಿಣಿಯರ ಸ್ಥಿತಿಯನ್ನು ಎಚ್ಚರಿಕೆಯಿಂದ ನೋಡಿಕೊಳ್ಳುವ ವ್ಯವಸ್ಥೆಯು ("ಪ್ರೀ-ನೇಟಲ್ ಕೇರ್" ವ್ಯವಸ್ಥೆಯು) ಪಾಶ್ಚಾತ್ಯ ದೇಶಗಳಲ್ಲಿ ಈಚೆಗೆ ಏರ್ಪಟ್ಟಿದೆ ಇದೇ ಒಂದು ವೈದ್ಯಶಾಸ್ತ್ರ ಶಾಖೆಯಾಗುವ ಮಟ್ಟಿಗೆ ಕಾಳಿದಾಸನ ಕಾಲದಲ್ಲಿ ನಾಗರಿಕತೆಯು ವೃದ್ಧಿಯಾಗಿದುದು ಸಾಮಾನ್ಯವಲ್ಲ ಭಾರತೀಯ ಸಂಸ್ಕೃತಿಯ ಮಹತ್ವಕ್ಕೆ ಇದೂ ಒಂದು ನಿದರ್ಶನ

ಅವರ ಆದರೋಪಚಾರಗಳಿಗೆ ಪಾತ್ರಳಾಗಿ ಸುದಕ್ಷಿಣಾದೇವಿಯು ಪ್ರಸವೋನ್ಮುಖಿಯಾಗಿದ್ದಳು ಹಾಗೆ ಪ್ರಸವಕಾಲವು ಸಮೀಪಿಸುತ್ತಿದ್ದ ಪೂರ್ಣಗರ್ಭಿಣಿಯಾದ ತನ್ನ ಪ್ರಿಯಳನ್ನು-ಮೇಘಾವೃತವಾಗಿ ಮಳೆಗರೆಯುವುದರಲ್ಲಿರ ತಕ್ಕಆಕಾಶದಂತಿದ್ದ ಸುದಕ್ಷಿಣಾದೇವಿಯನ್ನು-ಕಂಡು ದಿಲೀಪನು ಹರ್ಷಿಸಿದನು ಸುದಕ್ಷಿಣಾದೇವಿಯು ಯಥಾಸಮಯದಲ್ಲಿ (ಎಂದರೆ ಹತ್ತನೆಯ ತಿಂಗಳಿನಲ್ಲಿ) ತ್ರಿಸಾಧನವಾದ ಶಕ್ತಿಯು *ಅಕ್ಷಯನೆನಿಸುವ ಅರ್ಥಸಂಪತ್ತಿಯನ್ನು ಪಡೆಯುವಂತೆ ಪುತ್ರನನ್ನು ಪಡೆದಳು ಆ ಮಗುವಿನ ಜನನಕಾಲದಲ್ಲಿ ಪಂಚಗ್ರಹಗಳು ಉಚ್ಚವಾಗಿ ಮುಂದಿನ ಭಾಗ್ಯಸಂಪದವನ್ನು ಸೂಚಿಸುತ್ತಿದ್ದುವು † ಶಿಶುಜನನ ಸಮಯದಲ್ಲಿ ದಿಕ್ಕುಗಳು ಪ್ರಸನ್ನವಾಗಿದ್ದುವು ಮನೋಹರವಾದ ಮಂದಮಾರುತವು ಆಹ್ಲಾದವನ್ನುಂಟುಮಾಡಿತು ಹೋಮಾಗ್ನಿ ಜ್ವಾಲೆಯು ಬಲಕ್ಕೆ ಬಾಗಿ ಹವಿಸ್ಸನ್ನು ಸ್ವೀಕರಿಸಿತು ಸರ್ವವೂ ಶುಭಸೂಚಕವೇ ಆಗಿ ಶೋಭಿಸಿತು ರಘುವಿನಂತಹ ದಿವ್ಯ ಪುರುಷರು ಅವತರಿಸುವುದು ಲೋಕಾಭ್ಯುದಯಕ್ಕಾಗಿ ಆದಕಾರಣ, ಆ ಶಿಶುವಿನ ಜನನದಿಂದ (ದೇವತೆಗಳು ಕೂಡ ಸಂತುಷ್ಟರಾದುದರ ಸಂಕೇತವಾಗಿ) ಆ ಬಗೆಯ ಶುಭ ಲಕ್ಷಣಗಳು ಕಂಡುಬಂದುವು ಸುಜನ್ಮವುಳ್ಳ ಆ ಶಿಶುವು ಸೂತಿಕಾಗೃಹದ ಮೃದುಶಯ್ಯೆಯಲ್ಲಿ ಮಲಗಿದ್ದಿತು ಅದರ ನೈಸರ್ಗಿಕವಾದ ತೇಜಸ್ಸಿಗೆ, ಅಲ್ಲಿದ್ದ ಅರ್ಧರಾತ್ರಿಯ ದೀಪಗಳು ಕೂಡ ಕ್ಷೀಣಕಾಂತಿಯುಳ್ಳವಾಗಿ ಚಿತ್ರದಲ್ಲಿ ಬರೆದ ದೀಪಗಳೋ ಎಂಬಂತೆ ತೋರುತ್ತಿದ್ದುವು

---

* ತ್ರಿಸಾಧನವಾದ ಶಕ್ತಿಯೆಂದರೆ ಪ್ರಭುಶಕ್ತಿ, ಉತ್ಸಾಹಶಕ್ತಿ ಮತ್ತು ಮಂತ್ರಾಲೋಚನಾಶಕ್ತಿಗಳ ಸಮುಚ್ಚಯವೆಂದರ್ಥ ಕೋಶ ದುರ್ಗದಂಡ ಸಂಪತ್ತು ಪ್ರಭುಶಕ್ತಿಯೆಂದೂ, ಪರಾಕ್ರಮ ಸಂಪತ್ತು ಉತ್ಸಾಹ ಶಕ್ತಿಯೆಂದೂ ಮತ್ತು ವಿಜ್ಞಾನ ಸಂಪತ್ತು ಮಂತ್ರ ಶಕ್ತಿಯೆಂದೂ ಶಾಸ್ತ್ರಕಾರರ ಮತ

† ಜನನ ಕಾಲದಲ್ಲಿ ಒಂದು ಗ್ರಹವು ಉಚ್ಚವಾಗಿದ್ದರೆ ಸೌಖ್ಯವೆಂದೂ, ಎರಡು ಗ್ರಹಗಳು ಉಚ್ಚವಾಗಿದ್ದರೆ ಗೌರವ ಲಾಭವೆಂದೂ, ಮೂರು ಗ್ರಹಗಳು ಉಚ್ಚವಾಗಿದ್ದರೆ ರಾಜ ಪ್ರತಿರೂಪ ಸ್ಥಾನವೆಂದೂ, ನಾಲ್ಕು ಗ್ರಹಗಳು ಉಚ್ಚವಾಗಿದ್ದರೆ ರಾಜ್ಯ ಸಿದ್ಧಿಯೆಂದೂ, ಐದು ಗ್ರಹಗಳು ಉಚ್ಚವಾಗಿದ್ದರೆ ದೇವತಾ ಪುರುಷನಾಗುವನೆಂದೂ ಜ್ಯೋತಿಷ್ಕರ ಫಲನಿರೂಪಣೆ.

ಪುತ್ರಜನನವಾಯಿತೆಂಬ ವಾರ್ತೆಯು ಅಮೃತಾಕ್ಷರಗಳಿಂದ ಕೂಡಿದ್ದಂತೆ ದಿಲೀಪನು ಭಾವಿಸಿದನು ಆ ಸಂತೋಷವಾರ್ತೆಯನ್ನು ತಂದ ಅಂತಃ ಪುರ ಜನರಿಗೆ–ರಾಜ ಚಿಹ್ನೆಗಳಾದ ಎರಡು ಚಾಮರಗಳನ್ನೂ ಶಶಿಪ್ರಭೆಯಂತೆ ಬೆಳಗುತ್ತಿದ್ದ ಶ್ವೇತಚ್ಛತ್ರವನ್ನೂ ಬಿಟ್ಟು– ದಿಲೀಪನಿಂದ ಲಭಿಸದಂತಹ ವಸ್ತುಗಳೇ ಇರಲಿಲ್ಲ ಆ ಸಂತೋಷ ವಾರ್ತೆಯನ್ನು ತನಗೆ ತಿಳಿಸಿದವರೆಲ್ಲರಿಗೂ ಅವನು ಅನರ್ಘ್ಯವಾದ ವಸ್ತ್ರಾಭರಣ ಮುಂತಾದ ಮೆಚ್ಚುಗಳನ್ನಿತ್ತು ಅನುಗ್ರಹಿಸಿದನು ಗಾಳಿಯಿಲ್ಲದ ಪ್ರದೇಶದ ಪದ್ಮಪತ್ರದಂತೆ ಸ್ತಿಮಿತವಾದ ದೃಷ್ಟಿಯಿಂದ ಅವನು ಸುಂದರವಾದ ತನ್ನ ಪುತ್ರಮುಖವನ್ನು ನೋಡಿ ಆನಂದಿಸಿದನು ಚಂದ್ರನನ್ನು ಕಂಡ ಸಮುದ್ರದಂತೆ ಪ್ರಿಯಪುತ್ರನನ್ನು ಕಂಡ ಅವನ ಸ್ಥಿತಿಯೂ ಆಯಿತು ಅವನಿಗುಂಟಾದ ಅಪಾರ ಸಂತೋಷವು ಅವನ ಮನಸ್ಸಿನಲ್ಲಿ ಅಡಕವಾಗಲು ಸಾಧ್ಯವಿಲ್ಲದೆ ಹೊರಹೊಮ್ಮಿತು ದಿಲೀಪನು ಸಂಯಮಿಶ್ರೇಷ್ಠನಾಗಿದ್ದೂ ಅವನಿಂದಲೂ ತಡೆಯಲು ಸಾಧ್ಯವಿಲ್ಲದಷ್ಟು ಸಂತೋಷವುಂಟಾಗಿ ಅದು ಹೊರಸೂಸಿತು ಪುರೋಹಿತನಾದ ವಸಿಷ್ಠನು ಮುನಿನಿಕರದಿಂದೊಡಗೂಡಿ ತನ್ನ ತಪೋವನದಿಂದ ರಾಜಧಾನಿಗೆ ಬಂದು ಶಿಶುವಿಗೆ ಜಾತಕರ್ಮಗಳನ್ನೆಲ್ಲ ಸಾಂಗವಾಗಿ ನೆರವೇರಿಸಿದನು ಪಾವನ ಸ್ವರೂಪನಾದ ವಸಿಷ್ಠಮುನಿಯಿಂದ ಜಾತಕರ್ಮ ಸಂಸ್ಕಾರಗಳು ನಡೆದ ಪರಿಣಾಮವಾಗಿ ತೇಜಸ್ವಿಯಾದ ಆ ಶಿಶುವು ಸಾಣೆಯಾಡಿದ ವಜ್ರಮಣಿಯಂತೆ ಶೋಭಿಸಿತು ಶ್ರುತಿ ಸುಖವಾದ ಮಂಗಳವಾದ್ಯ ನಿಸ್ವನವೂ, ವಾರಸ್ತ್ರೀಯರ ಪ್ರಮೋದ ನೃತ್ಯಗಳ ಮಂಜುಳಧ್ವನಿಯೂ, ಮಗಧರಾಜ ಪುತ್ರಿಯಾದ ಸುದಕ್ಷಿಣಾದೇವಿಯ ಪತಿಯಾದ ದಿಲೀಪನ ಅರಮನೆಯನ್ನು ಮಾತ್ರವೇ ಅಲ್ಲದೆ ದೇವತೆಗಳ ಸಂಚಾರಮಾರ್ಗವಾದ ಆಕಾಶವನ್ನೂ ಆಣೆದು ವಿಜೃಂಭಿಸಿದುವು ಪುತ್ರಜನನವಾದಾಗಲೂ, ಶತ್ರುನಿಗ್ರಹವಾದಾಗಲೂ ಮತ್ತು ಯುವರಾಜಾಭಿಷೇಕವು ನಡೆದಾಗಲೂ ಆಗಿನ ಸಂತೋಷಸಮಯ ನಿಮಿತ್ತವಾಗಿ ಕಾರಾಗೃಹದಲ್ಲಿದ್ದ ಅಪರಾಧಿಗಳಲ್ಲಿ ಕೆಲಕೆಲವರನ್ನು ರಾಜನು ಬಿಡುಗಡೆ ಮಾಡುತ್ತಿದ್ದುದು ವಾಡಿಕೆ ಆದರೆ ಪುತ್ರಜನನದಿಂದ ಹರ್ಷಿತನಾದ ದಿಲೀಪನು

ಆ ರೀತಿ ಬಿಡುಗಡೆಮಾಡಲು ಕಾರಾಗೃಹಗಳಲ್ಲಿ ಅಪರಾಧಿಗಳೇ ಇರಲಿಲ್ಲ. ವಿಚಕ್ಷಣೆಯಿಂದಲೂ, ದಕ್ಷತೆಯಿಂದಲೂ ನಡೆಯುತ್ತಿದ್ದ ಅವನ ರಾಜ್ಯಭಾರದಲ್ಲಿ ಕಳ್ಳತನವೇ ಮುಂತಾದ ಅಪರಾಧಗಳಿಗೇ * ಅವಕಾಶವಿರಲಿಲ್ಲ ಈ ಕಾರಣದಿಂದ ಅಪರಾಧಿಗಳನ್ನು ಕಾರಾಗೃಹದ ಬಂಧನದಿಂದ ಬಿಡುಗಡೆಮಾಡುವುದು ದಿಲೀಪನಿಗೆ ಶಕ್ಯವಿರಲಿಲ್ಲ ಆದುದರಿಂದ, ಪುತ್ರಜನನವಾದಕಾರಣ, ಪಿತೃಋಣದ ಬಂಧನದಿಂದ ತನ್ನನ್ನು ತಾನೇ ಬಿಡುಗಡೆಮಾಡಿಕೊಂಡು ದಿಲೀಪನು ಹರ್ಷಿಸಿದನು ಪೃಥ್ವೀಶ್ವರನಾದ ದಿಲೀಪನು ತನ್ನ ಪುತ್ರನು [illegible] ಮಾಡಿ ಶಾಸ್ತ್ರಪಾರಂಗತನಾಗುವನೆಂದೂ ರಣೋತ್ಸಾಹವನ್ನು ತೋರಿ ಶತ್ರುನಿಗ್ರಹ ಪಾರಂಗತನಾಗುವನೆಂದೂ ಭಾವಿಸಿದನು ಆದಕಾರಣ ಅದಕ್ಕೆ ಅನುರೂಪವಾದ ಹೆಸರಿರಲೆಂಬಭಾವನೆಯಿಂದ ಅವನು ತನ್ನ ಮಗನಿಗೆ ರಘುವೆಂದು ನಾಮಕರಣ ಮಾಡಿದನು ಸಮಗ್ರ ಸಂಪತ್ತಿ ಸೌಕರ್ಯಗಳುಳ್ಳ ದಿಲೀಪನ ಪ್ರಯತ್ನದಿಂದ ಆ ಬಾಲಕನು ಸೂರ್ಯಕಿರಣಗಳಿಂದ ಪುಷ್ಟಿಗೊಂಡು ವೃದ್ಧಿಹೊಂದುವ ಬಾಲಚಂದ್ರನಂತೆ ದಿನೇ ದಿನೇ ವೃದ್ಧಿಹೊಂದಿದನು † ಶಿಶುವಿನ ಅಂಗಾಂಗಗಳೂ ಕ್ರಮ ಕ್ರಮವಾಗಿ ಪುಷ್ಟಿ ಹೊಂದಿದುವು ಆಗ ಷಡಾನನನನ್ನು ಕಂಡುಉಮಾ ಮಹೇಶ್ವರರೂ ಜಯಂತನನ್ನು ಕಂಡುಶಚೀಪುರಂದರರೂ ಹರ್ಷಿಸಿದಂತೆ, ರಘುವನ್ನು ಕಂಡು ಮಗಧರಾಜ ಪುತ್ರಿ ಸುದಕ್ಷಿಣಾದೇವಿಯೂ ದಿಲೀಪನೂ ಹರ್ಷಿಸಿದರು ಚಕ್ರವಾಕ ಪಕ್ಷಿಗಳಂತೆ ಪರಸ್ಪರವಾಗಿದ್ದ ಅವರ ಪ್ರೀತಿಯಲ್ಲಿ ಅವರ ಪ್ರಿಯ ಪುತ್ರನಿಗೆ [illegible] ಭಾಗ ಸಲ್ಲುವುದಾಯಿತು ಹಾಗಿದ್ದರೂ ಕೂಡ, ಅವರಲ್ಲಿ ಪರಸ್ಪರವಾಗಿ ಪ್ರೇಮವು ಏಕಪ್ರಕಾರವಾಗಿ ವೃದ್ಧಿಹೊಂದಿತು

---

* ಚಂದ್ರಗುಪ್ತನ ಕಾಲದಲ್ಲಿ ಕಳ್ಳತನಗಳು ನಡೆಯುತ್ತಿರಲಿಲ್ಲವೆಂಬುದೂ, ಭಾರತೀಯರು ಮನೆಯ ಬಾಗಿಲುಗಳಿಗೆ ಬೀಗಗಳನ್ನು ಹಾಕುತ್ತಿರಲಿಲ್ಲವೆಂಬುದೂ ಇಲ್ಲಿಗೆ ಬಂದಿದ್ದ ಮೆಗಾಸ್ತನೀಸನು ಬರೆದಿರುವ ಐತಿಹಾಸಿಕ ಸಂಗತಿಗಳು

† ಚಂದ್ರನ ಕಾಂತಿಗೆ ಸೂರ್ಯನೇ ಕಾರಣನೆಂಬ ತತ್ತ್ವವನ್ನು ಭಾರತೀಯರು ಬಹಳ ಪ್ರಾಚೀನಕಾಲದಿಂದಲೂ ಅರಿತಿದ್ದರು ಅದಕ್ಕಿರುವ ಹಲವು ನಿದರ್ಶನಗಳಲ್ಲಿ ಇದೂ ಒಂದು

ರಘುವು ವರ್ಧಿಸು್ತ್ವಾಗಿ ಮಾತು ಕಲಿಯುವಂತಾದನು ಆ ಅರ್ಭಕನು ಧಾತ್ರಿಯು ಮೊಟ್ಟಮೊದಲು ಕಲಿಸಿದ ಮಾತುಗಳನ್ನು ಆಡುತ್ತಿದ್ದನು, ಅವಳ ಕೈ ಬೆರಳನ್ನು ಹಿಡಿದುಕೊಂಡು ಅದರ ಅವಲಂಬನದಿಂದ ನಡೆಯುತ್ತಿದ್ದನು, ಅವಳು ಕಲಿಸಿದಂತೆ ಮಾತಾಪಿತೃಗಳದುರಿಗೆ ಬಾಗಿ ನಮಸ್ಕರಿಸುತ್ತಿದ್ದನು ಅದನ್ನು ಕಂಡು ದಿಲೀಪನಿಗೆ ಅಮಿತವಾದ ಸಂತೋಷವುಂಟಾಯಿತು ದಿಲೀಪನು ಮಗನನ್ನು ಎತ್ತಿಕೊಂಡು ತೊಡೆಯಮೇಲೆ ಕುಳ್ಳಿರಿಸಿಕೊಂಡಾಗ ತನ್ನ ಮೈಗೆ ಅಮೃತ ಸೇಚನದಂತೆ ಸ್ಪರ್ಶ ಸುಖವನ್ನನುಭವಿಸುತ್ತಿದ್ದನು ಆಗ ಅವನು ಆನಂದ ಪರವಶನಾಗಿ ಅರೆಮಾಸಿ ಕಣ್ಣು ಮುಚ್ಚಿ ಚಿರಕಾಲದ ಮೇಲೆ ತನಗೆ ಲಭಿಸಿದ ಸುತಸ್ಪರ್ಶ ರಸಜ್ಞತೆಯನ್ನು ಪಡೆದು ಸುಖಿಯಾದನು ಯಥಾಕಾಲಗಳಲ್ಲಿ ರಘುವಿನ ಚೂಡಾಕರ್ಮವೂ, ಅಕ್ಷರಾಭ್ಯಾಸವೂ ನಡೆದುವು ಅನಂತರ ಅವನು ಕಾಕಪಕ್ಷಧರರಾದ ಮತ್ತು ಸಮಾನ ವಯಸ್ಕರಾದ ಅಮಾತ್ಯ ಪುತ್ರರೊಡನೆ ವಿದ್ಯಾಭ್ಯಾಸವನ್ನು ಆರಂಭಿಸಿದನು ನದೀ ಮುಖದಿಂದ ಹೊರಟು ಸಮುದ್ರವನ್ನು ಸೇರುವಂತೆ ಲಿಪಿ ಜ್ಞಾನದಿಂದ ಆರಂಭಿಸಿ ಅವನು ವಾಙ್ಮಯ ಪರಿಚಯ ಹೊಂದಿ ಜ್ಞಾನಾರ್ಜನೆ ಮಾಡಿದನು ಗುರುಪ್ರಿಯನಾದ ರಘುವಿನ ಉಪನಯನವು ವಿಧಿಪೂರ್ವವಾಗಿ ನೆರವೇರಿತು ಮೇಧಾವಿಯಾದ ರಘುವಿಗೆ ಕಾರ್ಯದಕ್ಷರಾದ ಗುರುಗಳು ವಿದ್ಯಾಭ್ಯಾಸಮಾಡಿಸಿದರು ಅವರ ಪ್ರಯತ್ನಗಳಿಗೆ ಪೂರ್ಣಫಲವಾಯಿತು ಎಂತಹ ವಸ್ತುವೋ ಅಂತಹ ಕ್ರಿಯಾ ಸಿದ್ಧಿಯೆಂಬಂತೆ ಶಿಷ್ಯನ ಯೋಗ್ಯತೆಗೆ ತಕ್ಕಂತೆ ವಿದ್ಯಾಭ್ಯಾಸವು ಸಾರ್ಥಕವಾಯಿತು ಮಹಾ ಮೇಧಾವಿಯಾಗಿದ್ದ ರಘುವು ಏಳು ಬುದ್ಧಿ ಗುಣಗಳಿಂದ [1] ಕೂಡಿದವನಾಗಿದ್ದನು

[1] ಏಳು ಬುದ್ಧಿ ಗುಣಗಳು ಅಥವಾ ಧೀಗುರ್ಣಗಳು ಇವು - ೧ ಶುಶ್ರೂಷಾ: ಕೇಳುವ ಅಭಿಲಾಷೆ (೨) ಶ್ರವಣ ಆಲಿಸಿ ಕೇಳುವುದು (೩) ಗ್ರಹಣ ಕೇಳಿದದನ್ನು ಗ್ರಹಿಸುವುದು (೪) ಧಾರಣ ಗುರೂಪದೇಶವನ್ನು ಮನಸ್ಸಿನಲ್ಲಿ ಧರಿಸಿ ಆಲೋಚಿಸುವುದು (೫) ಊಹಾಪೋಹ, ಚರ್ಚಿಸುವುದು (೬) ಅರ್ಥವಿಜ್ಞಾನ ಸರಿಯಾದ ಅರ್ಥವನ್ನು ನಿರ್ಧರಿಸಿಕೊಳ್ಳುವುದು ಮತ್ತು (೭) ತತ್ತ್ವಜ್ಞಾನ: ಇದಮಿತ್ಥಂ ಎಂದು ತತ್ತ್ವ ನಿಶ್ಚಯ ಮಾಡುವುದು

ವಾಯುವೇಗವನ್ನು ಮೀರಿಸುವ ಏಳು ಕುದುರೆಗಳನ್ನು ಹೂಡಿದ ರಥದಿಂದ ಚತುರ್ದಿಕ್ಕುಗಳನ್ನೂ ಬೆಳಗುವ ಸೂರ್ಯನಂತೆ ಅವನು ನಾಲ್ಕು ಸಮುದ್ರ ಗಳಂತಿರುವ ಚತುರ್ವಿದ್ಯೆಗಳಲ್ಲಿಯೂ ಪಾರಂಗತನಾದನು ಬ್ರಹ್ಮಚಾರಿ ಯಾದ ರಘುವು "ರುರು" ಎಂಬ ಜಿಂಕೆಯ ಚರ್ಮವನ್ನು ಧರಿಸಿ (ಎಂದರೆ ಶುದ್ಧವಾದ ತಳಿಯ ಮಹಾಕೃಷ್ಣಸಾರ ಮೃಗದ ಚರ್ಮವನ್ನು ಧರಿಸಿ) ಮಂತ್ರವತ್ತಾಗಿ ಅಸ್ತ್ರಶಾಸ್ತ್ರವನ್ನು ಅಭ್ಯಾಸ ಮಾಡಿದನು ಅವನ ತಂದೆ ಯಾದ ದಿಲೀಪನೇ ಅವನಿಗೆ ಅಸ್ತ್ರವಿದ್ಯಾಗುರುವಾಗಿಶಿಕ್ಷಣವನ್ನು ಕೊಟ್ಟನು ದಿಲೀಪನು ವಾತ್ಸಲ್ಯಯುತನಾಗಿ ಅಕ್ಕರೆಯಿಂದ ಅಸ್ತ್ರವಿದ್ಯೆಯನ್ನು ಕಲಿ ಸುವ ತಂದೆಯು ಮಾತ್ರವೇ ಆಗಿರಲಿಲ್ಲ ಅವನು ಜಗತ್ತಿನಲ್ಲೇ ಅಸ್ತ್ರ ವಿದ್ಯೆಯಲ್ಲಿ ಅತ್ಯಂತ ನಿಸ್ಸೀಮನಾಗಿದ್ದ ಏಕೈಕ ಧನುರ್ಧರನಾಗಿಯೂ ಇದ್ದನು ಸಣ್ಣ ಕರುವು ಮಹಾವೃಷಭವಾಗುವಂತೆಯೂ ಮತ್ತು ಆನೆಯ ಮರಿಯು ಗಜರಾಜನಾಗುವಂತೆಯೂ, ಬಾಲಕನಾಗಿದ್ದ ರಘುವು ಕ್ರಮಕ್ರಮ ವಾಗಿ ಯೌವನ ಸಂಪನ್ನನಾದನು, ಅವನು ಗಂಭೀರ ಮನೋಹರ ವಾದ ದೇಹದಿಂದ ಕಂಗೊಳಿಸಿದನು ರಘುವಿಗೆ ಇಪ್ಪತ್ತೆರಡು ವರ್ಷ ವಯ ಸ್ಸಾಗುವ ವರೆಗೂ ವಿದ್ಯಾಭ್ಯಾಸವು ನಡೆಯಿತು ಅನಂತರ ಕೇಶಖಂಡನದ ಮೂಲಕ ಬ್ರಹ್ಮಚರ್ಯ ದೀಕ್ಷಾವಿಸರ್ಜನೆಯು ನೆರವೇರಿತು ದಿಲೀಪನು ಆ ಬಳಿಕ ತನ್ನ ಕುಮಾರನಿಗೆ ಕೆಲವರು ರಾಜಕುಮಾರಿಯರನ್ನು ತಂದುಕೊಂಡು ವಿ ವಾಹ ಮಹೋತ್ಸವವನ್ನು ನೆರವೇರಿಸಿದನು ರಘುಪತ್ನಿಯರಾದ ರಾಜಕುಮಾರಿ ಯರು ಸತ್ಪತಿಯನ್ನು ಪಡೆದು,ಚಂದ್ರನನ್ನು ವರಿಸಿದ ರೋಹಿಣಿಯೇ ಮುಂತಾದ ದಕ್ಷಸುತೆಯರಂತೆ ಶೋಭಿಸಿದರು ಯುವಕನಾದ ರಘುವು ನೊಗದಂತೆ ದೀರ್ಘ ನಾಗಿ ಬಲವಾಗಿ ಮಾಂಸಖಂಡಗಳಿಂದ ತುಂಬಿಕೊಂಡಿದ್ದ ಬಾಹುಗಳಿಂದಲೂ, ವಿಶಾಲವಾದ ಎದೆಯಿಂದಲೂ, ದಪ್ಪವಾದ ಕೊರಳಿನಿಂದಲೂ ಕೂಡಿದ್ದನು ಅವನು ತನ್ನ ದೇಹದಾರ್ಢ್ಯ ಸಂಪತ್ತಿನಲ್ಲಿ ದಿಲೀಪನನ್ನು ಮೀರಿಸಿದ್ದನು. ಆದರೆ ಅವನು ತನ್ನ ವಿನಯ ವರ್ತನೆಯಿಂದ ಅಲ್ಪಕನಾಗಿ ತೋರ್ಪಡಿಸಿಕೊಳ್ಳುತ್ತಿ ದ್ದನು ನಿಸರ್ಗಸಂಸ್ಕಾರದಿಂದಲೂ, ಶಾಸ್ತ್ರಾಭ್ಯಾಸದಿಂದಲೂ ಪರಿಣತನಾಗಿ

ವಿನಯುನಮ್ರನಾಗಿದ್ದ ರಘುವಿಗೆ ದಿಲೀಪನು ಯುವರಾಜ ಪದವಿಯನ್ನು ಅನುಗ್ರಹಿಸಿದನು. ಚಿರಕಾಲ ತಾನು ವಹಿಸಿದ್ದ ಗುರುತರವಾದ ರಾಜ್ಯಭಾರದ ಹೊರೆಯು ಸ್ವಲ್ಪಮಟ್ಟಿಗೆ ಕಡಿಮೆಯಾಗಲೆಂಬ ಉದ್ದೇಶದಿಂದ ದಿಲೀಪನು ಹಾಗೆ ಮಾಡಿದನು. ಕ್ರಮಕ್ರಮವಾಗಿ ರಾಜಕಾರ್ಯಗಳಲ್ಲಿ ಅನುಭವ ಹೊಂದಿ ರಘುವು ಅವುಗಳನ್ನು ದಕ್ಷತೆಯಿಂದ ನಿರ್ವಹಿಸಲಾರಂಭಿಸಿದನು. ಗುಣಾಭಿಲಾಷಿಣಿಯಾದ ರಾಜ್ಯಲಕ್ಷ್ಮಿಯು[1] ಮೂಲಾಯತನವಾಗಿದ್ದ ದಿಲೀಪನ ರಾಜತ್ವದ ಪ್ರಧಾನ ಸ್ಥಾನದಿಂದ ಅದಕ್ಕೆ ಸಮೀಪದಲ್ಲಿದ್ದ ಯುವರಾಜಾಭಿಧಾನ ಸ್ಥಾನಕ್ಕೆ–ಕಮಲ ಪುಷ್ಪದಿಂದ ಕಮಲದ ಮೊಗ್ಗಿಗೆ ಬಂದಂತೆ–ನಿಧಾನವಾಗಿಯೂ, ಕ್ರಮಕ್ರಮವಾಗಿಯೂ ಬಿಜಯಮಾಡಿದಳು. ವಾಯು ಸಹಾಯ ಹೊಂದಿದ ಅಗ್ನಿಯಂತೆ,–ಮೋಡಗಳು ಚದರಿಹೋದ ಶರತ್ಸಮಯ ಸಹಾಯ ಹೊಂದಿದ ಸೂರ್ಯನಂತೆ–ಮದೋದಯ ಸಹಾಯ ಹೊಂದಿದ ಗಜರಾಜನಂತೆ–ರಘುಸಹಾಯ ಹೊಂದಿದ ದಿಲೀಪನು ದುರ್ಜನರಿಗೂ, ಶತ್ರುಗಳಿಗೂ ಅತ್ಯಂತ ದುಸ್ಸಹನಾಗಿ ಪರಿಣಮಿಸಿದನು.

ಇಂದ್ರ ಸದೃಶನಾಗಿದ್ದ ದಿಲೀಪನು ನೂರು ಅಶ್ವಮೇಧ ಯಜ್ಞಗಳನ್ನಾಚರಿಸುವ ಪ್ರಯತ್ನ ಮಾಡಿ, ಯುವರಾಜನಾದ ರಘುವನ್ನೂ, ಇತರ ರಾಜಕುಮಾರನನ್ನೂ ಯಜ್ಞಾಶ್ವ ರಕ್ಷಣೆಗೆ ನಿಯೋಜಿಸಿದನು. ಅವನು ತೊಂಬತ್ತೊಂಬತ್ತು ಯಜ್ಞಗಳನ್ನು ಅವಿಘ್ನವಾಗಿ ನೆರವೇರಿಸಿ, ನೂರನೆಯ ಯಜ್ಞವನ್ನಾಚರಿಸುವ ಯೋಚನೆ ಮಾಡಿದನು. ದಿಲೀಪನು ನೂರನೆಯ ಅಶ್ವಮೇಧ ಯಜ್ಞಗಳನ್ನು ನೆರವೇರಿಸಿದರೆ ಶತಕ್ರತುವೆಂದು ಪ್ರಸಿದ್ಧನಾಗಿರುವ ತನಗೆ ಸಮನಾಗುವನೆಂಬ ಶಂಕೆಯಿಂದ ಮಹೇಂದ್ರನು ಅಗೋಚರನಾಗಿ ಬಂದು ಆ ಯಜ್ಞದ ಕುದುರೆಯನ್ನು ಅದರ ರಕ್ಷಕರಾದ ಧನುರ್ಧಾರಿಗಳ ವಶದಿಂದ

[1] ರಾಜ್ಯಲಕ್ಷ್ಮಿಯು ಸಂಪತ್ತಿ ಹೇತುಗಳಾದ ಗುಣಗಳನ್ನು ಇತರರಲ್ಲಿ ಅರಸಿ ಅನುಗ್ರಹಿಸುವವಳು. ಆದುದರಿಂದ ಅವಳನ್ನು ಗುಣಾಭಿಲಾಷಿಣಿಯೆಂದು ಕವಿಗುರುವು ವರ್ಣಿಸಿದ್ದಾನೆ. ಗುಣಾಭಿಲಾಷಿಣಿಯಾದ ರಾಜ್ಯಲಕ್ಷ್ಮಿಯು ಅಭಿನಂದಿಸುವ ದಶಗುಣಗಳಿವು. ಪ್ರಭಾವ, ಶುಚಿತ್ವ, ಮೈತ್ರಿ, ತ್ಯಾಗ, ಸತ್ಯ, ಕ್ಷಮೆ, ಆರ್ಜವ, ಕುಲಶೀಲ, ಮತ್ತು ದಮ

ಅಪಹರಿಸಿ ಕೊಂಡೊಯ್ದನು ಯುವರಾಜ ಕುಮಾರನ ಸೈನಿಕರು ಅದನ್ನು ಕಂಡು ಯಜ್ಞಾಶ್ವವನ್ನಾರುಅಪಹರಿಸಿದರೆಂಬುದನ್ನರಿಯದೆ ವಿಷಾದದಿಂದಲೂ, ವಿಸ್ಮಯದಿಂದಲೂ ಅಪ್ರತಿಭರಾಗಿ ನಿಂತರು ಆಗ ವಸಿಷ್ಠನ ನಂದಿನೀಧೇನುವು ಅಕಸ್ಮಾತ್ತಾಗಿ ಅಲ್ಲಿಗೆ ಬಂದಿತು ಅದರ ಪ್ರಭಾವವಂತೂ ಸುಪ್ರಸಿದ್ಧವಾದುದು ದಿಲೀಪನಂದನನಾದ ರಘುವು ಅದರ ಗಂಜಳದಿಂದ ಕಣ್ಣುಗಳನ್ನು ತೊಳದುಕೊಂಡನು ನಂದಿನಿಯ ಪುಣ್ಯ ಪ್ರಭಾವದಿಂದ ಅವನಿಗ ಅತೀಂದ್ರಿಯ ವಸ್ತುಗಳನ್ನು ಕೂಡ ಕಾಣಬಹುದಾದ ಸಾಮರ್ಥ್ಯವುಂಟಾಯಿತು ನರದೇವ ಸಂಭವನಾದ ರಘುವು ಪರ್ವತ ಪಕ್ಷಛೇದಕನಾದ ಇಂದ್ರದೇವನನ್ನು ಪೂರ್ವ ದಿಕ್ಕಿನಲ್ಲಿ ಕಂಡನು ಇಂದ್ರನು ಯಜ್ಞಾಶ್ವವನ್ನು ತನ್ನ ರಥದ ಸ್ತಂಭಕ್ಕೆ ಕಟ್ಟಿಹಾಕಿ ನಾಗಿಸಿಕೊಂಡು ಹೋಗುತ್ತಿದ್ದನು ಅದು ಬಂಧನದಿಂದ ಬಿಡಿಸಿ ಕೊಳ್ಳಲು ಔದ್ಧತ್ಯದಿಂದ ಪ್ರಯತ್ನ ಮಾಡುತ್ತಿದ್ದಿತು ಇಂದ್ರನ ಸಾರಥಿಯು ಅದರ ಚಾಪಲ್ಯವನ್ನು ಪರಿಹಾರ ಮಾಡುವುದಕ್ಕಾಗಿ ಅದನ್ನು ಮತ್ತ ಮತ್ತೆ ಹೊಡೆಯುತ್ತಿದ್ದನು ಮಹೇಂದ್ರನ ಮೈಯಲ್ಲಿದ್ದ ನೂರು ಬಿಡುಗಣ್ಣುಗಳನ್ನೂ, ರಥಕ್ಕೆ ಹೂಡಿದ್ದ ಹಸಿರು ಕುದುರಗಳನ್ನೂ ಕಂಡು ರಘುವು ಆತನು ಮಹೇಂದ್ರನೆಂದು ನಿರ್ಧರಿಸಿದನು ರಘುವು ಗಗನ ಸ್ಪರ್ಶಿಯಾದ ತನ್ನ ಧೀರ ಸ್ವರದಿಂದಲೇ ಇಂದ್ರನನ್ನು ಹಿಂದಕ್ಕೆ ತಿರುಗಿಸುವನೋ ಎಂಬಂತೆ ಅವನನ್ನು ಕುರಿತು ಹೇಳಿದುದೇನೆಂದರೆ-"ಎಲೈ ದೇವೇಂದ್ರನೇ! ಯಜ್ಞಗಳಲ್ಲಿ ಹವಿರ್ಭಾಗವು ಸಲ್ಲಬೇಕಾದವರಲ್ಲಿ ನೀನೇ ಪ್ರಥಮನೆಂದು ಮನೀಷಿಗಳು ಸದಾ ಪ್ರಶಂಸಿಸುತ್ತಾರೆ ಹೀಗಿರುವಲ್ಲಿ ಯಜ್ಞಾರ್ಥವಾಗಿ ನಿತ್ಯದೀಕ್ಷೆಯನ್ನು ವಹಿಸಿರುವ ನನ್ನ ತಂದೆಯ ಕ್ರಿಯಾ ವಿಘಾತಕ್ಕಾಗಿ ನೀನೇಕೆ ಪ್ರವರ್ತಿಸುವ? ತ್ರಿಲೋಕನಾಥನಾದ ನೀನೇ ದಿವ್ಯದೃಷ್ಟಿಯಿಂದ ನೋಡಿ ಯಜ್ಞವಿಘಾತಕರನ್ನು ಶಿಕ್ಷಿಸಬೇಕಾದುದು ನ್ಯಾಯ ಹೀಗಿರುವಲ್ಲಿ ಧರ್ಮಚಾರಿಗಳ ಯಜ್ಞಾದಿ ಕರ್ಮಗಳಿಗೆ ನೀನೇ ವಿಘ್ನರೂಪನಾಗಿ ನಿಂತರ ಕರ್ಮವಿಧಿಗಳೆಲ್ಲ ಚ್ಯುತವಾಗುತ್ತವೆ ಎಲೈ ಮಹೇಂದ್ರನೆ! ಈ ಮಹಾ ಕ್ರತುವಿನ ಶ್ರೇಷ್ಠವಾದ ಅಂಗವಾಗಿರುವ ಈ ಅಶ್ವವನ್ನು ಬಿಟ್ಟುಕೊಡು.

ದೇವತೆಗಳು ಶ್ರುತಿಪಥವನ್ನು *ತೋರಿಸತಕ್ಕವರಾಗಿರಬೇಕೇ ಹೊರತು ಅದನ್ನು ಮಲಿನಗೊಳಿಸತಕ್ಕವರಾಗಿರತಕ್ಕುದಲ್ಲ" ಹೀಗೆ ಹೇಳಿದ ರಘುವಿನ ಪ್ರಗಲ್ಭ ವಚನಗಳನ್ನು ಕೇಳಿ ವಿಸ್ಮಯಹೊಂದಿ ದಿವೌಕಸರ ಅಧಿಪತಿಯಾದ ಮಹೇಂದ್ರನು ತನ್ನ ರಥವನ್ನು ಹಿಂತಿರುಗಿಸಿ, "ಎಲೈ ಕ್ಷತ್ರಿಯಕುಮಾರನೆ ! ನೀನು ಹೇಳಿದುದೆಲ್ಲ ನಿಜವೇ ಆದಾಗ್ಯೂ, ಯಶೋಧನರಾದ ನಮ್ಮಂತಹವರು ಶತ್ರುಗಳು ನಮ್ಮನ್ನು ಮೀರಿಸದಂತೆ ನಮ್ಮ ಯಶಸ್ಸನ್ನು ರಕ್ಷಿಸಿಕೊಳ್ಳ ಬೇಕಾದುದು ನಮ್ಮ ಕರ್ತವ್ಯ ಈ ನೂರನೆಯ ಮಹಾ ಕ್ರತುವನ್ನೂ ಪೂರೈಸಿ ನಿಮ್ಮ ತಂದೆಯು, ಶತಕ್ರತುವೆಂದು ಲೋಕ ಪ್ರಸಿದ್ಧನಾಗಿರುವ ನನ್ನನ್ನೂ ಮೀರಿಸಲುದ್ಯುಕ್ತನಾಗಿದ್ದಾನೆ ಪುರುಷೋತ್ತಮನೆಂಬ ಹೆಸರು ವಿಷ್ಣುವಿಗೆ ಮಾತ್ರವೇ ಮೀಸಲು, ಅದೇರೀತಿಯಲ್ಲಿ ಮಹೇಶ್ವರನೆಂಬ ಹೆಸರು ತ್ರ್ಯಂಬಕನಿಗೆ ಮಾತ್ರವೇ ಮೀಸಲು ಅವೆರಡು ಹೆಸರುಗಳೂ ಮತ್ತಾವನಿಗೂ ಇಲ್ಲ ಅದೇ ರೀತಿಯಲ್ಲಿ ಶತಕ್ರತುವೆಂಬುದು ನನಗೆ ಮಾತ್ರವೇ ಮೀಸಲಾಗಿ ಮುನಿಗಳಿಗೆಲ್ಲ ಗೊತ್ತಿರುವ ಹೆಸರು ಈ ಮೂರು ಹೆಸರುಗಳೂ ನಮ್ಮ ಮೂವರಿಗೇ ಹೊರತು ಮತ್ತಾರಿಗೂ ಇಲ್ಲ ಹೀಗಿರುವಲ್ಲಿ ನಿಮ್ಮ ತಂದೆಯು ತಾನೂ ಶತಕ್ರತುವೆನಿಸಿಕೊಳ್ಳಲುದ್ಯುಕ್ತನಾಗಿ ಈ ನೂರನೆಯ ಕ್ರತುವನ್ನು ಆಚರಿಸಲಿಚ್ಛಿಸುವ ಕಾರಣ, ಸಗರನ ಯಜ್ಞಾಶ್ವವನ್ನು ಅಪಹರಿಸಿದ ಕಪಿಲ ಮಹರ್ಷಿಯನ್ನೇ † ನಾನೂ ಅನುಕರಿಸಿ ನಿಮ್ಮ ತಂದೆಯ ಯಜ್ಞಾಶ್ವವನ್ನು ಅಪಹರಿಸಿ ತಂದಿದ್ದೇನೆ ಯಜ್ಞಾಶ್ವವನ್ನು ಹಿಂತಿರುಗಿ ಪಡೆಯುವ ನಿನ್ನ ಪ್ರಯತ್ನವು ಇನ್ನು ಸಾಕು ನೀನು ಸಗರ ಪುತ್ರರ ಮಾರ್ಗವನ್ನನುಸರಿಸಿ ಮುಂದುವರಿಯಬೇಡ ಅವರಂತೆ ವಿನಾಶಮೂಲ

---

* ಶ್ರುತಿಪಥವೆಂದರೆ ವೇದ ವಿಹಿತವಾದ ಸದಾಚಾರ ಮಾರ್ಗ ವೆಂದರ್ಥ

† ಸಗರನ ಯಜ್ಞಾಶ್ವವನ್ನು ಅಪಹರಿಸಿ ಕಪಿಲ ಮಹರ್ಷಿಯ ಆಶ್ರಮಕ್ಕೆ ಬಿಟ್ಟವನು ಇಂದ್ರನೇ ಕಪಿಲ ಮಹರ್ಷಿಯು ಯಜ್ಞಾಶ್ವವನ್ನು ಅಪಹರಿಸಲೇ ಇಲ್ಲ ದೊಡ್ಡ ಪದವಿಗಳಲ್ಲಿರುವ ಕೇವಲ ಭೋಗರತರು ಕಾಯಾವಾಚಾಮನಸಾ ಹೇಗೆ ಕುಟಿಲ ಪ್ರವೃತ್ತಿಯುಳ್ಳವರಾಗಿರುವರೆಂಬುದನ್ನು ಸೂಚಿಸಿ ಕವಿಗುರುವು ವಿಡಂಬನ ಮಾಡುತ್ತಿದ್ದಾನೆ ತ್ಯಾಗ ಶೀಲರಾದ ಸೂರ್ಯವಂಶದವರು ಭೋಗಶೀಲನಾದ ಮಹೇಂದ್ರನಿಗಿಂತಲೂ ಶ್ರೇಷ್ಠರೆಂಬುದನ್ನು ತೋರಿಸಲುದ್ಯುಕ್ತನಾಗಿದ್ದಾನೆ.

ವಾದ ಪ್ರಯತ್ನಕ್ಕೆ ಕೈಹಾಕಿ ವೃಥಾ ಮರಣಕ್ಕೆ ಗುರಿಯಾಗಬೇಡ" ಎಂದು ರಘುವಿಗೆ ತಿಳಿಸಿದನು

ಯಜ್ಞಾಶ್ವ ರಕ್ಷಕನಾದ ಯುವರಾಜ ರಘುವು ಮಹೇಂದ್ರನ ಮಾತು ಗಳನ್ನು ಕೇಳಿ ನಕ್ಕನು, ಅಲ್ಲದೆ ನಿರ್ಭೀತನಾಗಿ ದೇವೇಂದ್ರನನ್ನು ಕುರಿತು 'ಇದೇ ನಿನ್ನ ನಿರ್ಧರವಾಗಿರುವ ಪಕ್ಷಕ್ಕೆ ಶಸ್ತ್ರಗಳನ್ನು ತೆಗೆದುಕೋ ಈ ರಘುವನ್ನು ಜಯಿಸಿದಲ್ಲದೆ ನಿನ್ನ ನಿರ್ಧರವು ನೆರವೇರಲಾರದು" ಎಂದು ಉತ್ತರ ಹೇಳಿದನು. ಅಲ್ಲದೆ ಒಡನೆಯೇ ರಘುವು ಇಂದ್ರನ ಕಡೆಗೆ ತಲೆಯೆತ್ತಿ ನೋಡುತ್ತ ಧನಸ್ಸಿಗೆ ಬಾಣವನ್ನು ಹೂಡುವ ಉದ್ದೇಶದಿಂದ ಪಿನಾಕಿಯನ್ನ ನುಕರಿಸಿ 'ಆಲೀಢ' ಭಂಗಿಯಲ್ಲಿ ಸೆಡೆತು ನಿಂತನು * ರಘುವಿನ ಧಾಷ್ಟ್ರ್ಯಮಯವಾದ ತಿರಸ್ಕಾರದಿಂದ ಬಾಣಾಹತನಾದಂತೆಲ್ಲ ಮಹೇಂದ್ರನು ಕ್ರುದ್ಧನಾಗಿ, ಎಂದೂ ನಿರರ್ಥಕವಾಗದ ಅಮೋಘ ಸಾಯಕವೊಂದನ್ನು ತನ್ನ ದಿವ್ಯ ಧನುಸ್ಸಿಗೆ ಹೂಡಿದನು ಭಯಂಕರರಾದ ರಾಕ್ಷಸರ ರುಧಿರೋಚಿತವಾದ ಆ ಬಾಣವನ್ನು ಮಹೇಂದ್ರನು ರಘುವಿನ ಮೇಲೆ ಪ್ರಯೋಗಿಸಿದನು ಆ ಬಾಣವು ವೇಗವಾಗಿ ಬಂದು ರಘುವಿನ ಭುಜಗಳ ಮಧ್ಯದಲ್ಲಿ ಅವನ ವಿಶಾಲವಾದ ಎದೆಯ ಮೇಲ್ಭಾಗವನ್ನು ಪ್ರವೇಶಿಸಿ ನಾಟಿಕೊಂಡು ಅದಕ್ಕೆ ಹಿಂದೆ ಅನಾಸ್ವಾದಿತವಾಗಿದ್ದ ಮನುಷ್ಯ ರಕ್ತವನ್ನು ರುಚಿನೋಡುವ ಕುತೂಹಲದಿಂದ ವರ್ತಿಸುತ್ತಿದೆಯೋ-ಎಂಬಂತೆ ರಘುವಿನ ರಕ್ತವನ್ನು ಹೀರಿತು ಕುಮಾರ ವಿಕ್ರಮನಾದ ಕುಮಾರನೂ ಸಹ (ರಘುವೂ ಸಹ), ಐರಾವತಾಸ್ಫಾಲನ ಕರ್ಕಶವಾದ ಬೆರಳುಗಳಿಂದ ಕೂಡಿ ಶಚೀದೇವಿಯ ಕನ್ನೆಗಳ ಮೇಲಿನ ಮಕರ ಪತ್ರದಿಂದ ಅಂಕಿತವಾಗಿದ್ದ ಮಹೇಂದ್ರನ ತೋಳಿನೊಳಕ್ಕೆ ಸ್ವನಾಮಾಂಕಿತವಾಗಿದ್ದ ಬಾಣವನ್ನು ನಾಟಿಸಿದನು ರಘುವು ನವಿಲುಗರಿಯಿಂದ ಶೋಭಿತವಾಗಿದ್ದ "ಅಶನಿ" ಎಂಬ ಶರದಿಂದ ಇಂದ್ರನ ಧ್ವಜವನ್ನು ಕೆಳಕ್ಕೆ ಉರುಳಿಸಿದನು ರಘುವು ಸುರಲೋಕ ಲಕ್ಷ್ಮಿಯ ಕೂದಲನ್ನು ಕತ್ತರಿಸಿ

* ಬಲಹೆಜ್ಜೆಯನ್ನು ಸ್ವಲ್ಪ ಬಾಗಿಸಿ ಮುಂದಕ್ಕಿಟ್ಟು ಎಡ ಹೆಜ್ಜೆಯನ್ನು ಹಿಂದಕ್ಕೆ ಚಾಚಿ ಸೆಡೆತುನಿಲ್ಲುವ ಭಂಗಿಗೆ 'ಆಲೀಢ' ಭಂಗಿಯೆಂದು ಹೆಸರು

ದ್ದರೆ ಹೇಗೋ ಹಾಗೆ * ಮಹೇಂದ್ರನು ಕೆರಳಿ, ಅವನನ್ನು ಕೊಲ್ಲಲಪೇಕ್ಷಿಸಿದನು ಅನ್ಯೋನ್ಯ ಜಯಾಕಾಂಕ್ಷಿಗಳಾದ ಅವರಿಬ್ಬರಿಗೂ ಅನಂತರ ಘೋರವಾದ ತುಮುಲ ಯುದ್ಧವು ನಡೆಯಲಾರಂಭವಾಯಿತು ರೆಕ್ಕೆಗಳಿಂದ ಕೂಡಿದ ಸರ್ಪಗಳಂತೆ ಭಯಂಕರವಾಗಿದ್ದ ಅಸ್ತ್ರಗಳು ರಘುವಿನ ಕಡೆಗೆ ಕೆಳಕ್ಕೂ ಮತ್ತು ಮಹೇಂದ್ರನ ಕಡೆಗೆ ಮೇಲಕ್ಕೂ ಹಾರಾಡುತ್ತ ಘಾತಿಸುತ್ತಿದ್ದುವು ಇಂದ್ರನ ಕಡೆಯವರಾದ ಸಿದ್ಧರೂ ರಘುವಿನ ಕಡೆಯವರಾದ ಸೈನಿಕರೂ ತಟಸ್ಥರಾಗಿ ಆ ತುಮುಲ ಯುದ್ಧವನ್ನು ನೋಡುತ್ತಿದ್ದರು ಸಂತತವಾಗಿ ಮಹೇಂದ್ರನು ಅಸ್ತ್ರವೃಷ್ಟಿಮಾಡಿದರೂ ತೇಜಸ್ವಿಯೂ ಪ್ರತಾಪಶಾಲಿಯೂ ಆದ ರಘುವನ್ನು ಸೋಲಿಸುವುದು ಸಾಧ್ಯವಾಗಲಿಲ್ಲ ಏಕಪ್ರಕಾರವಾಗಿ ಇಂದ್ರನು ಬಾಣಪ್ರಯೋಗ ಮಾಡುತ್ತಿದ್ದಾಗ, ಅವನ ಕೈಯಿನ ದಿವ್ಯ ಧನಸ್ಸು ಮಥಿತವಾದ ಸಮುದ್ರಗಂತೆ ಧೀರನಾದದಿಂದ ಕೂಡಿ ಹರಿಚಂದನಾಂಕಿತವಾದ ಅವನ ಮೊಳಕೈ ಬಳಿಯಲ್ಲಿ ಧ್ವನಿ ಗೈಯ್ಯುತ್ತಿದ್ದಿತು ರಘುವು ಅರ್ಧ ಚಂದ್ರಾಕಾರದ ಹರಿತವಾದ ತಲೆಯುಳ್ಳ ಬಾಣವೊಂದನ್ನು ಪ್ರಯೋಗಿಸಿ ಮಹೇಂದ್ರನ ದಿವ್ಯ ಧನಸ್ಸಿನ ಶಿಂಜಿನಿಯನ್ನು ಕತ್ತರಿಸಿದನು ಆಗ ಮಹೇಂದ್ರನು ವಿವೃದ್ಧ ಮತ್ಸರನಾಗಿ ತನ್ನ ಚಾಪವನ್ನು ಬಿಸುಟು ತನ್ನ ಪ್ರಬಲ ಶತ್ರುವನ್ನು ನಾಶಗೊಳಿಸುವುದಕ್ಕಾಗಿ, ಪರ್ವತ ಪಕ್ಷಗಳನ್ನು ಛೇದಿಸುವ ಕಾರ್ಯದಲ್ಲಿ ತನಗೆ ಸಹಾಯಕವಾಗಿದ್ದು ಥಳಥಳಿಸುವ ಪ್ರಭಾಮಂಡಲದಿಂದ ಕೂಡಿದ್ದ ವಜ್ರಾಯುಧವನ್ನು ಧರಿಸಿದನು. ಮಹೇಂದ್ರನು ಪ್ರಯೋಗಿಸಿದ ವಜ್ರಾಯುಧವು ರಘುವಿನ ವಕ್ಷಸ್ಥಲವನ್ನು ಘಾತಿಸಿತು ವಜ್ರಾಘಾತದಿಂದ ರಘುವು ಕೆಳಕ್ಕುರುಳಿದನು ಅದನ್ನು ಕಂಡು ಅವನ ಸೈನಿಕರೆಲ್ಲರೂ ಕಂಬನಿ ಸುರಿಸಿದರು ಕ್ಷಣಕಾಲದಲ್ಲಿ ರಘುವು ನೋವನ್ನು ಒತ್ತರಿಸಿ ಚೇತರಿಸಿಕೊಂಡು ಮತ್ತೆ ಕಾಳಗಕೊಡಲು ಅನುವಾಗಿ ಎದ್ದು ನಿಂತನು ಸೈನಿಕರೆಲ್ಲರೂ ಆನಂದಘೋಷ ಮಾಡಿದರು.

---

*ಧ್ವಜವು ಎಷ್ಟು ಪವಿತ್ರವೆಂಬುದು ಇದರಿಂದ ವ್ಯಕ್ತವಾಗುತ್ತದೆ ಇಂದ್ರನ ವಿಷಯವಾಗಿ ಹೇಳಿದ್ದರೂ ಕಾಲಿದಾಸನು ತನ್ನ ಕಾಲದ ಭಾವನೆಯನ್ನೇ ಚಿತ್ರಿಸಿದ್ದಾನೆ.

ರಘುವು ಹಾಗೆ ವಜ್ರಾಹತನಾಗಿ ಘಾಸಿಹೊಂದಿದ್ದೂ ಕೂಡ, ಶಸ್ತ್ರ ವ್ಯವಹಾರ ನಿಷ್ಠುರನಾಗಿ ಅತ್ಯಂತ ಪರಾಕ್ರಮಶಾಲಿಯಾಗಿದ್ದ ಶತ್ರು ಮಹೇಂದ್ರನೊಡನೆ ಏಕಪ್ರಕಾರವಾಗಿ ಚಿರಕಾಲ ಯುದ್ಧಮಾಡುತ್ತ ನಿಂತನು ತನ್ನ ವಜ್ರಘಾತದಿಂದ ವೃತ್ರಾಸುರ ನಂತಹ ವೀರಾಗ್ರಣಿಯನ್ನು ಕೂಡ ಸಂಹರಿಸಿದ್ದ ಮಹೇಂದ್ರನು ರಘುವಿನ ವೀರ್ಯಾತಿಶಯವನ್ನು ಕಂಡು ಹರ್ಷಿಸಿದನು ಗುಣಗಳಿದ್ದಲ್ಲಿ ಸರ್ವರೂ ಮಣಿಯುವರು, ಗುಣಗಳೇ ಪದವಿಯನ್ನು ಗಳಿಸಿಕೊಡುವುವು ಸ್ವಯಂ ವೀರನಾಗಿರುವವನೇ ವೀರನ ಪರಾಕ್ರಮವನ್ನು ಮನಗಂಡು ಹರ್ಷಿಸಬಲ್ಲನು ಆದಕಾರಣ, ರಘುವಿನ ಪರಾಕ್ರಮದಿಂದ ಸುಪ್ರೀತನಾದ ಮಹೇಂದ್ರನು ಅವನನ್ನು ಕುರಿತು, ''ನನ್ನ ವಜ್ರಾಯುಧವು ಪರ್ವತಗಳ ಪ್ರತಿಬಂಧವನ್ನು ಕೂಡ ಅರಿಯದ ಷ್ಟುಸಾರವತ್ತಾದುದು ವಜ್ರಾಯುಧ ಪ್ರಯೋಗವಾದ ಮೇಲೆ ಅದನ್ನು ಸಹಿಸಿ ಬದುಕಿದವರು ಇದುವರೆಗೆ ನಿನ್ನೊಬ್ಬನ ಹೊರತು ಮತ್ತಾರೂ ಇಲ್ಲ ಇದನ್ನು ಕಂಡು ನಾನು ಸಂತುಷ್ಟನಾಗಿದ್ದೇನೆ ಯಜ್ಞಾಶ್ವವೊಂದನ್ನು ಬಿಟ್ಟು ಮತ್ತೇನನ್ನು ಬೇಕಾದರೂ ಕೇಳು ನಾನು ಅಗತ್ಯವಾಗಿ ಅದನ್ನು ಕೊಡುತ್ತೇನೆ" ಎಂದನು ಆ ವೇಳೆಗೆ ರಘುವು ಸುವರ್ಣ ನಿರ್ಮಿತವಾದ ಪತ್ರಭಾಗವುಳ್ಳ ಕೂರಂಬನ್ನು ಅರೆವಾಸಿಯಾಗಿ ಬತ್ತಳಿಕೆಯಿಂದ ಸೆಳೆದಿದ್ದನು ಅವನ ಬೆರಳುಗಳು ಆ ಕೂರಂಬಿನ ಸುವರ್ಣ ಪುಂಖದ್ಯುತಿ ರಂಜಿತವಾಗಿದ್ದುವು ಶೂರನೂ, ಸಾತ್ವಿಕನೂ, ಪ್ರಿಯವಚನಗಳನ್ನಾಡುವ ಮಧುರ ಸ್ವಭಾವದವನೂ ಆಗಿದ್ದ ರಘುವು ಆ ಬಾಣವನ್ನು ಪೂರ್ತಿಯಾಗಿ ಹಿರಿಯದೆ ಬತ್ತಳಿಕೆಯೊಳಕ್ಕೆ ತಳ್ಳಿ, "ಪ್ರಭೋ ಸುರೇಶ್ವರ! ಯಜ್ಞಾಶ್ವವು ಬಿಡಲ್ಪಡತಕ್ಕುದಲ್ಲವೆಂದೇ ನೀನು ಭಾವಿಸಿರುವ ಪಕ್ಷಕ್ಕೆ, ನಿರಂತರ ದೀಕ್ಷೆಯನ್ನು ತಳೆದಿರುವ ನನ್ನ ತಂದೆಯು ಯಜ್ಞವಿಧಿಯು ಸಾಂಗವಾಗಿ ಪೂರೈಸಿದ್ದರೆ ಹೇಗೋ ಹಾಗೆ ಯಜ್ಞದ ಪೂರ್ಣ ಫಲವೂ ಲಭಿಸುವಂತೆ ನಿಯೋಜಿಸು ಎಲೈ ಲೋಕೇಶನಾದ ಇಂದ್ರನೆ ! ಯಜ್ಞದೀಕ್ಷೆಯನ್ನು ವಹಿಸಿ ಕರ್ಮ ನಿರತನಾಗಿರುವ ನನ್ನ ತಂದೆಯು ಈಗ ಯಜ್ಞಶಾಲೆಯಿಂದ ಹೊರಗೆ ಬರುವಂತಿಲ್ಲ, ಆದಕಾರಣ, ನಮ್ಮಂತಹವರಿಗೆ ಆತನು ಅಪ್ರಾಪ್ಯನಾಗಿರುವ ಕಾರಣ,

ನಾನು ಆತನಿಗೆ ಈ ಫಲಪ್ರಾಪ್ತಿಯ ವಿಷಯವನ್ನು ವಿಜ್ಞಾಪಿಸುವಂತಿಲ್ಲ. ಆದ್ದುದರಿಂದ, ಈ ವಾರ್ತೆಯನ್ನು ಯಜ್ಞದೀಕ್ಷಾಂತದಲ್ಲಿರುವ ಆತನಿಗೆ ನಿನ್ನ ಕಡೆಯವರೇ ತಿಳಿಸುವಂತೆ ವಿಧಾಯಕ ಮಾಡು" ಎಂದನು ಮಹೇಂದ್ರನು ಅವಕ್ಕೆ ಸಮ್ಮತಿಸಿ ತಾನು ಬಂದ ಮಾರ್ಗವಾಗಿ ಹೊರಟುಹೋದನು ಸುದಕ್ಷಿಣಾ ಸೂನುವಾದ ರಘುವೂ ಕೂಡ, ತನಗೆ ವಿಜಯಲಾಭವಾಗಿದ್ದರೂ ಯಜ್ಞಾಶ್ವವು ದೊರೆಯದೆ ಹೋಗಿದ್ದ ಕಾರಣ ಅಷ್ಟೇನೂ ಹೆಚ್ಚಾಗಿ ಸಂತುಷ್ಟನಾಗದೆ ತನ್ನ ತಂದೆಯಾದ ದಿಲೀಪನ ಯಜ್ಞಶಾಲಗೆ ತೆರಳಿದನು ಆ ವೇಳೆಗೆ ಇಂದ್ರನ ಕಡೆಯಿಂದ ಬಂದ ಶಾಸನಹಾರಿ ಪುರುಷನಿಂದ ಇಂದ್ರ ಸಂದೇಶವನ್ನು ಕೇಳಿದ್ದ ದಿಲೀಪನು ವಜ್ರಾಯುಧದ ಆಘಾತದಿಂದ ಪ್ರಣಾಂತಿಕವಾಗಿದ್ದ ರಘುವಿನ ಮೈಯ್ಯನ್ನು ಹರ್ಷಜಡವಾದ ಕೈಯಿಂದ ಸವರಿ, ಅವನನ್ನು ಸ್ವಾಗತಿಸಿ ಅಭಿನಂದಿಸಿದನು ದಿಲೀಪ ಕ್ಷಿತೀಶ್ವರನು ತಾನು ದೇಹತ್ಯಾಗ ಮಾಡಿದ ಮೇಲೆ ಸ್ವರ್ಗಾರೋಹಣ ಮಾಡುವುದಕ್ಕಾಗಿ ಹೀಗೆ ಮಹಾ ಶತ್ರುಗಳ ಸೋಪಾನಪಂಗ್ತಿಯನ್ನು ಕಲ್ಪಿಸಿಕೊಂಡು ಹರ್ಷಿಸಿದನು

ಅನಂತರ ದಿಲೀಪನು ವಿಷಯ ಸುಖಗಳಿಂದ ನಿವೃತ್ತ ಚಿತ್ತನಾಗಿ ಯುವಕನಾದ ರಘುವಿಗೆ ಶ್ವೇತಚ್ಛತ್ರ ಮುಂತಾದ ರಾಜ ಚಿಹ್ನೆಗಳನ್ನು ಶಾಸ್ತ್ರೋಕ್ತರೀತಿಯಲ್ಲಿ ವಿಧಿವತ್ತಾಗಿ ವಹಿಸಿಕೊಟ್ಟು, ತಾನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಮುನಿವನ ತರುಚ್ಛಾಯೆಯನ್ನು ಆಶ್ರಯಿಸಲು ಸುದಕ್ಷಿಣಾದೇವೀ ಸಮೇತನಾಗಿ ಪ್ರಯಾಣಮಾಡಿದನು ಗಳಿತ ವಯಸ್ಕರಾದ ಇಕ್ಷ್ವಾಕು ವಂಶೀಯರಿಗೆ ವನಗಮನವು ಕುಲವ್ರತ

## ನಾಲ್ಕನೆಯ ಪರಿಚ್ಛೇದ

## ರಘುದಿಗ್ವಿಜಯ

ಯುವರಾಜನಾಗಿದ್ದ ರಘುವು ತನ್ನ ತಂದೆಯು ತನಗೆ ವಹಿಸಿಕೊಟ್ಟ ರಾಜ್ಯಭಾರವನ್ನು ದಿನಾಂತದಲ್ಲಿ ಅಗ್ನಿಯು ಸೂರ್ಯದತ್ತವಾದ ತೇಜಸ್ಸಿನಿಂದ ಮತ್ತಷ್ಟು ಉಜ್ಜ್ವಲವಾಗಿ ಬೆಳಗುವಂತೆ ಮತ್ತಷ್ಟು ವಿಚಕ್ಷಣೆಯಿಂದ ನಿರ್ವಹಿಸಿದನು ದಿಲೀಪನ ತರುವಾಯ ರಾಜ್ಯದಲ್ಲಿ ರಘುವು ಪ್ರತಿಷ್ಠಿತನಾದನೆಂಬುದನ್ನು ಕೇಳಿದ ರಾಜರುಗಳಲ್ಲಿ ದ್ವೇಷಾಸೂಯೆಗಳು ಮೂಡಿದುವು ದಿಲೀಪನು ಜೀವಿಸಿದ್ದಾಗಲೇ ಆ ಚಕ್ರವರ್ತಿಯ ಯಶಸ್ಸನ್ನು ಕಂಡು ಅವರ ಮನಸ್ಸಿನಲ್ಲಿ ಹೊಗೆಯಾಡುತ್ತಿದ್ದ ಅಸೂಯಾಗ್ನಿಯು ರಘುವಿಗೆ ರಾಜ್ಯವು ದೊಡನೆಯೇ ಪ್ರಜ್ವಲಿಸಿ ಉರಿದೆದ್ದಿತು ರಘುವಿನ ರಾಜ್ಯಭಾರ ವಿಚಕ್ಷಣೆಯಿಂದುಂಟಾದ ನವಾಭ್ಯುದಯವನ್ನು ಕಂಡು ಪ್ರಜೆಗಳೆಲ್ಲರೂ ರಾಜದ್ವಾರದಲ್ಲಿ ಹಾರಾಡುವ ಇಂದ್ರಧ್ವಜವನ್ನು ನೋಡಿ ಹರ್ಷಿಸುವಂತೆ ತಮ್ಮ ಮಕ್ಕಳೊಡನೆ ಸುಖ ಸಂತೋಷಗಳಿಂದ ನಲಿದಾಡಿದರು ಗಜಗಮನನಾದ ರಘು ಮಹಾರಾಜನು ಪಿತೃದತ್ತವಾದ ಸಿಂಹಾಸನಕ್ಕೂ ಮತ್ತು ಅರಿಮಂಡಲಕ್ಕೂ ಅಧಿಷ್ಠಾತೃವಾಗಿ ಎರಡನ್ನೂ ಸ್ವಾಧೀನದಲ್ಲಿಟ್ಟುಕೊಂಡನು ರಘುಸಮ್ರಾಟನು ಪ್ರಜಾರಂಜನ ಪರಾಯಣನಾಗಿ ಉತ್ತಮ ರೀತಿಯಲ್ಲಿ ಧರ್ಮದಿಂದ್ರ ಪ್ರಭುತ್ವಮಾಡಲುದ್ಯುಕ್ತನಾಗಿ ಸಾಮ್ರಾಜ್ಯ ದೀಕ್ಷಿತನಾದನು ರಾಜ್ಯಲಕ್ಷ್ಮಿಯೇ ಅವನಿಗೆ ಅಗೋಚರಳಾಗಿ ಕಮಲದ ಬೆಳುಗೊಡೆಯನ್ನು ಅವನ ತಲೆಯ ಮೇಲೆ ಹಿಡಿದು ಕೃಪೆಮಾಡುತ್ತಿರುವಳೋ ಎಂಬಂತೆ ತೋರಿತು ಕವಿಗಳ ಮತ್ತು ವಂದಿಮಾಗಧರ ರೂಪದಲ್ಲಿ ಸರಸ್ವತಿಯು ಅವನನ್ನು ಬಳಿಸಾರಿ ಯೋಗ್ಯ ಕಾಲಗಳಲ್ಲಿ ಸ್ತುತಿಪಾಠದ ಮೂಲಕವೇ ಅವನಿಗೆ ಕರ್ತವ್ಯ ಬೋಧೆಮಾಡುತ್ತಿರುವಳೋ ಎಂಬಂತೆ ತೋರಿತು * ಹಿಂದೆ ಮನುಚಕ್ರವರ್ತಿ ಮುಂತಾದ ಮಾನ್ಯರಿಂದ ಪಾಲಿತಳಾಗಿದ್ದ ವಸುಂಧರೆಯು ರಘುವಿನ

* ಕವಿಯು ಉತ್ಪ್ರೇಕ್ಷೆ ಮಾಡಿದ್ದಾನೆ ಆದರೆ ಉತ್ಪ್ರೇಕ್ಷೆಯು ಮನೋಹರವಾಗಿದೆ. ಕರ್ತವ್ಯ ನಿಷ್ಠರಾದ ಧರ್ಮಶೀಲರಿಗೆ ದೈವಕೃಪೆಯಾಗುವುದೆಂಬುದನ್ನು ಬಹಳ ಚೆನ್ನಾಗಿ ಅವನು ಸೂಚಿಸಿದ್ದಾನೆ

ರಾಜ್ಯಭಾರದಲ್ಲಿ ಮತ್ತಾವ ಸಮ್ರಾಟನ ಕಾಲದಲ್ಲಿಯೂ ಇಲ್ಲದಷ್ಟು ಮಟ್ಟಿಗೆ ಪಾಲಿತಳಾಗಿ ಶೋಭಿಸಿದಳು ರಘುವು ಅಪರಾಧಿಗಳಿಗೆ ಶಿಕ್ಷೆವಿಧಿಸುವುದರಲ್ಲಿ ಕೂಡ, ಅತ್ಯುಷ್ಣವೂ ಅಥವಾ ಅತಿಶೀತಲವೂ ಇಲ್ಲದ ದಕ್ಷಿಣಾನಿಲದಂತೆ ವರ್ತಿಸುತ್ತಿದ್ದನು ಎಂದರೆ ಅತ್ಯಲ್ಪವಾಗಿಯೂ ಅಥವಾ ಅತಿ ಕ್ರೂರವಾಗಿಯೂ ಶಿಕ್ಷೆಯನ್ನು ವಿಧಿಸದೆ ಅಪರಾಧದ ಸ್ವರೂಪವನ್ನು ನೋಡಿ ಎಷ್ಟು ಅವಶ್ಯವೋ ಅಷ್ಟು ದಂಡನೆಯನ್ನು ಮಾತ್ರವೇ ವಿಧಿಸುತ್ತಿದ್ದನು ಅವನು ಆ ಬಗೆಯ ಯುಕ್ತದಂಡನೆಯ ಕಾರಣದಿಂದ ಪ್ರಜೆಗಳ ಮನಸ್ಸನ್ನು ಒಲಿಸಿಕೊಂಡನು ದಿಲೀಪನಿಗಿಂತಲೂ ಗುಣಾಧಿಕನಾದ ರಘುವಿನ ರಾಜ್ಯಭಾರ ವೈಖರಿಯನ್ನು ಕಂಡ ಪ್ರಜೆಗಳಿಗೆ - ರಸವತ್ತಾದ ಮಾವಿನ ಹಣ್ಣುಗಳನ್ನು ಕಂಡ ಮೇಲೆ ಮಾವಿನ ಮರದ ಪುಷ್ಪೋದ್ಗಮವನ್ನು ಕಂಡಿದ್ದಾಗಿನ ಔತ್ಸುಕ್ಯವು ಕಡಮೆಯಾಗುವಂತೆ – ದಿಲೀಪನ ವಿಷಯದಲ್ಲಿದ್ದ ಔತ್ಸುಕ್ಯವು ಕಡಮೆಯಾಯಿತು ರಾಜನೀತಿಜ್ಞರು ನವನೃಪತಿಯಾದ ರಘುವಿನ ಮುಂದೆ ಧರ್ಮಾಧರ್ಮ ವಿಚಾರ ಮಾಡಿ ಧರ್ಮಯುದ್ಧದ ಸಲಹೆಗಳನ್ನೂ ಕೂಟಯುದ್ಧದ ಸಲಹೆಗಳನ್ನೂ ಮಂಡಿಸುತ್ತಿದ್ದರು ಅವನು ಧರ್ಮಯುದ್ಧದ ಸಲಹೆಗಳನ್ನು ಮಾತ್ರವೇ ಸ್ವೀಕರಿಸುತ್ತಿದ್ದನು ಹೊಸರಾಜನಾದ ರಘು ಮಹೀಪಾಲನ ಪ್ರಭುತ್ವದಲ್ಲಿ ಸರ್ವವೂ ನವೀನತೆಯಿಂದ ಹೊಸದಾಗಿಯೇ ಕಾಣಲುಪಕ್ರಮಿಸಿ ಪ್ರಜೆಗಳಿಗೆ ಆಹ್ಲಾದಕರವಾಯಿತು ಪಂಚಭೂತಗಳ ಗುಣಗಳು ಕೂಡ ಉತ್ಕರ್ಷಹೊಂದಿ ನವತೆಯನ್ನು ಹೊಂದಿದುವೋ ಎಂಬಂತೆ ತೋರಿತು ಅವನ ರಾಜ್ಯಭಾರ ವಿಚಕ್ಷಣೆಯೇ ಅದಕ್ಕೆ ಕಾರಣ ರಾಜ್ಯಭಾರವು ಪ್ರಗತಿ ಸಾಧಕವಾಗಿ ಪ್ರಜೆಗಳ ಸುಖ ಸಂತೋಷಗಳನ್ನು ಹೆಚ್ಚಿಸಿತು ಆಹ್ಲಾದವನ್ನುಂಟುಮಾಡುವ ಕಾರಣದಿಂದ ಚಂದ್ರನು ಅನ್ವರ್ಥನಾಮಧೇಯನು ಸಂತಾಪಕರನಾಗಿರುವ ಕಾರಣದಿಂದ ತಪನನೆಂಬ ಹೆಸರುಳ್ಳ ಸೂರ್ಯನೂ ಅನ್ವರ್ಥ ನಾಮಧೇಯನು ಅದರಂತೆಯೇ ಪ್ರಕೃತಿರಂಜನೆಯ (ಎಂದರೆ ಪ್ರಜಾರಂಜನೆಯ) ಕಾರಣದಿಂದ ರಾಜಾ ರಘುವೂ ಅನ್ವರ್ಥನಾಮಧೇಯ

ನಾಗಿ ಕಂಗೊಳಿಸಿದನು ಅವನ ಲೋಚನಗಳು ಕರ್ಣಾಂತ ವಿಶ್ರಾಂತ ಗಳೆನಿಸಿ ವಿಶಾಲವಾಗಿದ್ದುವು ಅದು ದಿಟವೇ ತನ್ನ ಕರ್ತವ್ಯ ಜ್ಞಾನದಿಂದ ಅವನು ಸೂಕ್ಷ್ಮ ಕಾರ್ಯಾರ್ಥ ದರ್ಶಿಯೂ ಆಗಿದ್ದುದರಿಂದ, ಶಾಸ್ತ್ರಜ್ಞಾನ ರೂಪದ ಒಳಗಣ್ಣಿನ ಸೂಕ್ಷ್ಮದೃಷ್ಟಿಯನ್ನೂ ಅವನು ಪಡೆದಿದ್ದನು ಹೀಗೆ ಒಳಗಣ್ಣು ಹೊರಗಣ್ಣುಗಳೆರಡೂ ವಿಶಾಲವಾಗಿದ್ದುದರಿಂದ ಅವನು ಸೂಕ್ಷ್ಮ ಚಕ್ಷುವಾಗಿ ಪರಿಶೋಭಿಸುತ್ತಿದ್ದನು ಎಂದರೆ ಅವನಲ್ಲಿ ಬಾಹ್ಯ ಶೋಭೆಯ ಜೊತೆಗೆ, ಶಾಸ್ತ್ರವಿಧಿಗನುಸಾರವಾದ ಕರ್ತವ್ಯನಿಷ್ಠೆಯ ರೂಪದ ಆಂತರಿಕ ಶೋಭೆಯೂ ನೆಲಸಿದ್ದಿತು ನೂತನ ಪ್ರಭುವಾದ ರಘುವು ಶಿಷ್ಟರನ್ನು ಅನುರಂಜನ ಮಾಡಿ, ದುಷ್ಟರಿಗೆ ಪ್ರತೀಕಾರ ಮಾಡಿ ಒಟ್ಟು ರಾಜ್ಯದಲ್ಲೇ ಶಾಂತಿಯು ನೆಲೆಗೊಳ್ಳುವಂತೆ ಮಾಡಿದನು

ಆ ವೇಳೆಗೆ, ಕೆರೆಗಳಲ್ಲಿಯೂ ಕೊಳಗಳಲ್ಲಿಯೂ ಕಮಲ ಪುಷ್ಪಗಳುಸಮೃದ್ಧವಾ ಗಿರುವಲಕ್ಷಣವುಳ್ಳ ಶರದೃತುವು ಬಂದಿತು ಅದುದಿಗ್ವಿಜಯಕಾಲವಾಗಿದ್ದುದರಿಂದ ಎರಡನೆಯರಾಜಲಕ್ಷ್ಮಿಯು ಸಮುಪಸ್ಥಿತಳಾದಂತಿದ್ದಿತು ಮಳೆ ಬೀಳುತ್ತಿದ್ದ ಮೋಡಗಳಲ್ಲ ಮಾಯವಾಗಿದ್ದ ಕಾರಣ, ವಿಜಯಯಾತ್ರೆಗೆ ಮಾರ್ಗವಾಯಿತು ನೀರೆಲ್ಲ ಬರಿದಾಗಿ ಮೋಡಗಳು ಹಗುರವಾಗಿದ್ದುವು ಆದಕಾರಣ, ರಘುವಿನ ಭೂ ಸಂಚಾರವೂ ಸೂರ್ಯನ ಆಕಾಶ ಗಮನವೂ ಸುಲಭವಾದುವು ಪಂಡಿತ ನಾದ ರಘುವಿನ ಪ್ರತಾಪವೂ ಮತ್ತು ಸೂರ್ಯನ ಆತಪವೂ ದಿಕ್ಕುವಿದಿಕ್ಕು ಗಳನ್ನೂ ವ್ಯಾಪಿಸಿದ್ದುವು ವರ್ಷಾಕಾಲವು ಪೂರೈಸಿದ್ದುದರಿಂದ ಮಹೇಂದ್ರನು ತನ್ನ ಧನುಸ್ಸನ್ನು (ಎಂದರೆ ಕಾಮನ ಬಿಲ್ಲನ್ನು) ತ್ಯಜಿಸಿದ್ದನು ರಘುವು ತನ್ನ ಧನುಸ್ಸನ್ನು ಧರಿಸಿದ್ದನು ಉಭಯತ್ರರು ಧನುಸ್ಸನ್ನು ಧರಿಸುತ್ತಿದ್ದುದಕ್ಕೂ ಪ್ರಜಾಪ್ರಯೋಜನವೇ ಉದ್ದೇಶ (ಎಂದರೆ ಇಂದ್ರಧನುಸ್ಸಾದ ಕಾಮನ ಬಿಲ್ಲು ಕಾಣಿಸಿದಾಗ ಸುವೃಷ್ಟಿಯಿಂದ ಪ್ರಜಾಪ್ರಯೋಜನ, ರಘುವಿನ ಕೈಯಲ್ಲಿ ದನುಸ್ಸು ಕಾಣಿಸಿದಾಗ ಅವನ ದಿಗ್ವಿಜಯದಿಂದ ಶತ್ರುಬಾಧೆ ಪರಿಹಾರ ಮತ್ತು

---

[1] 'ರಾಜಾ ಪ್ರಕೃತಿರಂಜನಾತ್'- ಪ್ರಜಾರಂಜನ ಪರಾಯಣನಾಗಿರುವುದರಿಂದ ಮಾತ್ರವೇ ರಾಜನೆಂಬ ಹೆಸರು ಪ್ರಜಾರಂಜನೆ ಮಾಡದವನು ರಾಜನೆಂಬ ಹೆಸರಿಗೆ ಅರ್ಹನಲ್ಲ

ಅರ್ಥಪ್ರಾಪ್ತಿ ಹೀಗೆ ಅವೆರಡಕ್ಕೂ ಪ್ರಜಾಪ್ರಯೋಜನವೇ ಉದ್ದೇಶ) ಶ್ವೇತ ಚ್ಛತ್ರದಿಂದಲೂ, ಶ್ವೇತ ಚಾಮರಗಳಿಂದಲೂ ರಘುವು ವಿರಾಜಿಸುತ್ತಿದ್ದನು ಅದನ್ನು ಕಂಡು ಶರದೃತುವು * ಸ್ಪರ್ಧಿಸಿತು ಬಿಳಿಯ ಕಮಲ ರೂಪದ ಶ್ವೇತ ಚ್ಛತ್ರದಿಂದಲೂ ಮತ್ತು ನೊದೆ ಹುಲ್ಲಿನ ರೂಪದ ಚಾಮರಗಳಿಂದಲೂ ಕೂಡಿ ವಿಜೃಂಭಿಸಿ ಅವನನ್ನು ಅದು ಅನುಕರಣ ಮಾಡುತ್ತಿರುವಂತೆ ತೋರಿತು. ಆದರೆ ಆ ಅನುಕರಣವು ಸಫಲವಾಗಲಿಲ್ಲ ಪ್ರಸಾದ ಸುಮುಖನಾಗಿದ್ದ ರಘುವೂ, ನಿರ್ಮಲ ಕಾಂತಿಯುಳ್ಳ ಶರಚ್ಚಂದ್ರನೂ ನೋಡುವವರ ಮನಸ್ಸಿಗೆ ಸಮರಸ ಪ್ರೀತಿಯನ್ನುಂಟುಮಾಡುತ್ತಿದ್ದರು ರಘುವಿನ ಧವಳ ಕೀರ್ತಿಯು ಹಂಸಶ್ರೇಣಿಗಳಲ್ಲಿಯೂ, ನಕ್ಷತ್ರಗಳಲ್ಲಿಯೂ, ಕಮಲಗಳಿಂದ ಶೋಭಿಸುತ್ತಿದ್ದ ಜಲಾಶಯಗಳಲ್ಲಿಯೂ ವ್ಯಾಪಿಸಿ ಧವಳಿಮೆಯನ್ನುಂಟುಮಾಡಿದಂತೆ ತೋರುತ್ತಿದ್ದಿತು ಹಕ್ಕಿಗಳು ಬಂದು ಬತ್ತದ ತೆನೆಗಳನ್ನು ತಿಂದು ಹೋಗದಂತೆ ಕಬ್ಬಿನ ಜಲ್ಲೆಗಳ ನೆರಳಿನಲ್ಲಿ ಕುಳಿತು ಗದ್ದೆಗಳಲ್ಲಿದ್ದ ಬತ್ತದ ಬೆಳೆಗಳನ್ನು ಕಾಯುತ್ತಿದ್ದ ಸಸ್ಯಪಾಲಕಿಯರಾದ ಸ್ತ್ರೀಯರು ತಮ್ಮ ಪ್ರಭುವಾದ ರಘುವಿನ ಬಾಲಲೀಲೆಗಳನ್ನು ವರ್ಣಿಸುವ ಗೀತೆಗಳನ್ನೂ, ಅವನ ಯಶೋಗೀತೆಗಳನ್ನೂ ಹಾಡುತ್ತಿದ್ದರು ಶರದೃತು ಸೂಚಕವಾಗಿ ಅಗಸ್ತ್ಯ ನಕ್ಷತ್ರವು ಉದಯಿಸಿತು ವಾಪೀತಟಾಕಗಳಲ್ಲಿಯೂ ನದೀನದಗಳಲ್ಲಿಯೂ ನೀರು ತಿಳಿಯಾಯಿತು ರಘುವಿನ ವಿಜಯ ಯಾತ್ರೆಯು ಸಮೀಪಿಸಿದುದರಿಂದ ಸೋಲನ್ನು ಶಂಕಿಸಿ ಶತ್ರುಗಳ ಮನಸ್ಸು ಕದಡಿಹೋಯಿತು ರಘುವಿನ ಆನೆಗಳು ಸಪ್ತಪರ್ಣ ವೃಕ್ಷಗಳ ಮದಗಂಧಿ ಪುಷ್ಪಗಳ ವಾಸನೆಯನ್ನಾಘ್ರಾಣಿಸಿ ಅವುಗಳ ಮೇಲಿನ ಅಸೂಯೆಯಿಂದ ತಾವೂ ಮದಜಲವನ್ನು ಸ್ರವಿಸಿದುವು ಸ್ವಸಾಮರ್ಥ್ಯವೂ ಪರಾಕ್ರಮವೂ ದಿಗ್ವಿಜಯ ಯಾತ್ರೆ ಹೊರಡುವುದಕ್ಕಾಗಿ

* ಕಾಳಿದಾಸನು ಈ ಸಂದರ್ಭದಲ್ಲಿ ಮಾಡಿರುವ ಶರದೃತುವರ್ಣನೆಯು ನೈಸರ್ಗಿಕವಾಗಿ ಮನೋಹರವಾಗಿದೆ ಪ್ರಾಜ್ಞರೊಬ್ಬರು "The graphic picture of autumn given in stanzas 11-24 is so accurate that it cannot fail to appeal to any one who has marked the seasonal changes in India" ಎಂದು ಹೇಳಿದ್ದಾರೆ

ರಘುವನ್ನು ಪ್ರಚೋದಿಸಿದುವು ಆದರೆ ಅವಕ್ಕೆ ಮುಂಚಿತವಾಗಿ ದೋಣಿಗಳಲ್ಲಿ ದಾಟಬಹುದಾದಷ್ಟು ಆಳದ ನೀರುಳ್ಳ ನದಿಗಳಿಂದಲೂ, ಕೆಸರಿಲ್ಲದ ಸಂಚಾರ ಮಾರ್ಗಗಳಿಂದಲೂ ಕೂಡಿದ ಶರದೃತುವೇ ಅವನನ್ನು ಆನಕ್ಕಾಗಿ ಚೋದಿಸಿತು

ವಿಜಯ ಯಾತ್ರೆಗೆ ಹೊರಡುವುದಕ್ಕೆ ಮುಂಚಿತವಾಗಿ ರಘುವು ಸಂಪ್ರದಾಯಕ್ರಮದಲ್ಲಿ ಅಶ್ವಗಜಾದಿಗಳಿಗೆ "ನೀರಾಜನಾವಿಧಿ" ಯೆಂಬ ಶಾಂತಿಕರ್ಮವನ್ನಾಚರಿಸಿದನು, ಹೋಮಕಾರ್ಯವನ್ನು ನೆರವೇರಿಸಿ ಅಗ್ನಿಪ್ರದಕ್ಷಿಣೆ ಮಾಡಿದನು ಬಲಗಡೆಗೆ ವಾಲಿದ್ದ ಅಗ್ನಿಜ್ವಾಲೆಯು ಜಯಪ್ರಾಪ್ತಿಯನ್ನು ಅವನ ಕೈಗೆ ಒಪ್ಪಿಸುತ್ತಿದೆಯೋ ಎಂಬಂತೆ ತೋರುತ್ತಿದ್ದಿತು ರಘುವು ಶತ್ರುಭೀತಿಯಿಲ್ಲದಂತೆ ರಾಜಧಾನಿಯ ಕೋಟೆಕೊತ್ತಲಗಳನ್ನು ಸರಿಪಡಿಸಿ ತಕ್ಕಷ್ಟು ಸೈನ್ಯಬಲವನ್ನಿಟ್ಟು ಭದ್ರಗೊಳಿಸಿದನು ತನ್ನ ರಾಜ್ಯದ ಗಡಿನಾಡುಗಳ ದುರ್ಗಗಳನ್ನು ಬಲಪಡಿಸಿದನು ಅನಂತರ ಷಡ್ವಿಧ ಸೈನ್ಯಗಳಿಂದೊಡಗೂಡಿ ದಿಗ್ವಿಜಯೋದ್ದೇಶದಿಂದ ಪ್ರಯಾಣಮಾಡಿದನು ಪ್ರಯಾಣಹೊರಟ ರಘುವನ್ನು ಅಯೋಧ್ಯಾನಗರದ ವಯೋವೃದ್ಧೆಯರಾದ ಸುಮಂಗಲಿಯರು—ಸಮುದ್ರಮಥನ ಕಾಲದಲ್ಲಿ ಕ್ಷೀರಸಮುದ್ರದ ಅಲೆಗಳ ಹನಿಗಳು ಮಂದರ ಪರ್ವತದಿಂದ ಹಾರಿ ವಿಷ್ಣುವಿನ ಮೇಲೆ ಬೀಳುತ್ತಿದ್ದಂತೆ–ರಘುವಿನ ಮೇಲೆ ಬೀಳುವಂತೆ ಲಾಜಾಂಜಲಿಗಳನ್ನೆರಚಿ ಆಶೀರ್ವದಿಸಿದರು ಇಂದ್ರಸದೃಶನಾದ ರಘುವು ಮೊಟ್ಟಮೊದಲು ಪೂರ್ವಾಭಿಮುಖವಾಗಿ ವಿಜಯಯಾತ್ರೆ ಹೊರಟನು ಅನುಕೂಲವಾಗಿ ಗಾಳಿಯು ಬೀಸುತ್ತಿದ್ದುದರಿಂದ ಮೇಲೆ ಹಾರಾಡುತ್ತಿದ್ದ ಧ್ವಜಗಳನ್ನು ನೋಡಿದರೆ ತನ್ಮೂಲಕರಘುವು ತನ್ನ ಶತ್ರುಗಳನ್ನು ತರ್ಜಿಸುತ್ತಿದ್ದಾನೋ—ಎಂಬಂತೆ ತೋರುತ್ತಿದ್ದಿತು ಅಸಂಖ್ಯಾತ ರಥಗಳ ಚಕ್ರಗಳಿಂದಲೂ ಆನೆಗಳ ಕಾಲುಗಳಿಂದಲೂ ಮೇಲಕ್ಕೆದ್ದ ಕೆಂಧೂಳು ಆಕಾಶವನ್ನಣೆದು, ಅಂತರಿಕ್ಷವು ಭೂಭ್ರಾಂತಿಯನ್ನುಂಟುಮಾಡುತ್ತಿದ್ದಿತು ಮೇಘಸದೃಶವಾದ ಮತ್ತು ಗಜಗಳು ಮುಂದುವರಿಯುತ್ತಿದ್ದುದರಿಂದ ಭೂತಲವು ಅಂತರಿಕ್ಷಭ್ರಾಂತಿಯನ್ನುಂಟುಮಾಡುತ್ತಿದ್ದಿತು ವಿಜಯಯಾತ್ರೆಯಲ್ಲಿ ಅವನ ಪ್ರತಾಪದ ಖ್ಯಾತಿಯು ಅಗ್ರಗಾಮಿಯಾಗಿ ಮುಂದೆ ಸಾಗಿತು ಅದರ ಹಿಂದೆ ಸೈನಿಕರ ಕಲಕಲಧ್ವನಿ

ಯು ಹಬ್ಬಿತು ಅನಂತರ ಧೂಳು ಮುಂದುವರಿಯಿತು ಆ ಬಳಿಕ ಹಸ್ತ್ಯಶ್ವಾದಿ ಗಳಿಂದ ಕೂಡಿದ ಸೈನ್ಯವು ಮುಂದೆ ನಡೆಯಿತು ಹೀಗೆ ನಾಲ್ಕು ವ್ಯೂಹಗಳ ರೂಪದಲ್ಲಿ ರಘುಬಲವು ಮುಂದುವರಿಯುತ್ತಿದ್ದಂತೆ ತೋರಿತು

ಅಪಾರ ಸಾಮರ್ಥ್ಯದಿಂದಲೂ ಮತ್ತು ಅಮಿತ ಸಾಧನಸಂಪತ್ತುಗಳಿಂದ ಲೂ ನಿರ್ಜಲಸ್ಥಾನಗಳು ಜಲಸಮೃದ್ಧವಾಗುವಂತೆಯೂ, ನೌಕೆಗಳಿಂದ ದಾಟಬೇಕಾದ ನದಿಗಳನ್ನು ಸುಖವಾಗಿ ದಾಟುವುದು ಸಾಧ್ಯವಾಗುವಂತೆಯೂ ದುರ್ಗಮವಾದ ವಿಪಿನಗಳು ನಿರ್ವೃಕ್ಷಗಳಾದ ಸಮಪ್ರದೇಶಗಳಾಗುವಂತೆಯೂ ಪರಿಣಾಮಗೊಳಿಸಿ ರಘುವು ತನ್ನ ಸೈನಿಕರಿಗೆ ಸೌಕರ್ಯಗಳನ್ನೊದಗಿಸಿ ದ್ದನು ಚತುರಂಗಬಲದಿಂದ ಕೂಡಿದ ಬಹು ದೊಡ್ಡ ಸೈನ್ಯದೊಡನೆ ಅವನು ಮೊದಲು ಪೂರ್ವದಿಕ್ಕಿಗೆ ಪ್ರಯಾಣಮಾಡಿದನು ಅಪಾರ ಸೈನ್ಯದೊಡನೆ ಪೂರ್ವಸಾಗರದ ಕಡೆಗೆ ಸಾಗುತ್ತಿದ್ದ ರಘುವು ಹರನ ಜಟಾಜೂಟದಿಂದ ಹೊರಟ ಗಂಗಾಪ್ರವಾಹಕ್ಕೆಮಾರ್ಗದರ್ಶನ ಮಾಡುತ್ತ ಮುಂದುವರಿಯುತ್ತಿದ್ದ ಭಗೀರಥನನ್ನು ಹೋಲುತ್ತಿದ್ದನು ರಘುಮಹಾರಾಜನು ಶತ್ರುರಾಜರುಗಳನ್ನು ಯುದ್ಧದಲ್ಲಿ ಸೋಲಿಸಿ ದಿಂಡುಗೆಡಿಸಿ ಅವರಸಂಪತ್ತನ್ನು ಸೂರೆಗೊಳ್ಳುತ್ತಿದ್ದನು ಅವನು ಮಾರ್ಗದಲ್ಲಿ ಸಿಕ್ಕಿದ ಅನೇಕ ಪೌರಸ್ತ್ಯರಾಜ್ಯಗಳನ್ನು ಜಯಿಸಿ ತಾಲ ವೃಕ್ಷಗಳಿಂದ ಶ್ಯಾಮಲವಾಗಿ ಕಾಣಿಸುತ್ತಿದ್ದ ಸಾಗರ ತೀರವನ್ನು ಸೇರಿದನು ಅವಿನೀತರಾಗಿ ಮಲೆತುನಿಂತವರ ಪ್ರಾಣಗಳನ್ನು ಅವನು ಯುದ್ಧರಂಗದಲ್ಲಿ ಸೂರೆಗೊಳ್ಳುತ್ತಿದ್ದನು· ವಂಗದೇಶದ ಪಶ್ಚಿಮಕ್ಕಿದ್ದ ಸುಹ್ಮನಾಡಿನ ಜನರು ಅದನ್ನರಿತು—ಪ್ರವಾಹಬಂದಾಗ ಬಾಗಿ ಬಾಳುವ ಜೊಂಡಿನ ಮಾದರಿಯಲ್ಲಿ ''ವೈತಸೀ ವೃತ್ತಿ"ಯನ್ನನುಸರಿಸಿ–ನಮ್ರರಾಗಿ ಪ್ರಾಣಗಳನ್ನುಳಿಸಿಕೊಂಡರು. ತಮ್ಮ ನೌಕಾಬಲದಿಂದ ತನ್ನನ್ನೆದುರಿಸಿದ ವಂಗರಾಜ್ಯದವರನ್ನು ವೀರಾಗ್ರಣಿ ಯಾದ ರಘುವು ಸೋಲಿಸಿ ಗಂಗಾಪ್ರವಾಹ ಮಧ್ಯದಲ್ಲಿದ್ದ ದ್ವೀಪಗಳಲ್ಲಿ ಜಯ ಸ್ತಂಭಗಳನ್ನು ನೆಡಿಸಿದನು ಯುದ್ಧದಲ್ಲಿ ಸೋತುಹೋದ ವಂಗ ಪ್ರಾಂತದ ರಾಜರುಗಳು ರಘುವಿಗೆ ಶರಣಾಗತರಾಗಿ ಕೈಬಿಟ್ಟುಹೋಗಿದ್ದ ತಮ್ಮ ತಮ್ಮ ರಾಜ್ಯಗಳನ್ನು ಅವನಕೃಪೆಯಿಂದ ಮತ್ತೆ ಹಿಂದಕ್ಕೆಪಡೆದು, ಕಪ್ಪಕಾಣಿಕೆಗಳ

ನ್ನೊಪ್ಪಿಸಿ, ಅವನ ಪಾದಗಳಿಗೆ ಮಣಿದರು ಬೇರುಸಹಿತವಾಗಿ ಕಿತ್ತುಹಾಕಿ ಬೇರೆಕಡೆ ನಾಟಹಾಕಿದ ಬತ್ತದ ಗಿಡಗಳು ತೆನೆಯಭಾರದಿಂದ ಬಾಗಿ ಧಾನ್ಯ ವನ್ನು ಕೊಡುತ್ತವಷ್ಟೆ ಅದೇರೀತಿಯಲ್ಲಿ ಅವರು ಯುದ್ಧದಿಂದ ರಾಜ್ಯಭ್ರಷ್ಟ ರಾದರೂ ತಮಗೆ ರಾಜ್ಯವನ್ನು ಹಿಂದಕ್ಕೆ ಕೊಟ್ಟು ನೆಲೆಗೆ ನಿಲ್ಲಿಸಿದ ರಘುವಿಗ ಶರಣಾಗತರಾಗಿ ಕಾಣಿಕೆಗಳನ್ನು ಒಪ್ಪಿಸಿದರು ಅವನು ಅನಂತರ ಸೇನಾ ಸಮೇತನಾಗಿ—ಆನೆಗಳ ಸೇತುವೆಯ ಮೂಲಕ—ಕಪಿಶಾನದಿಯನ್ನು ದಾಟಿ ಉತ್ಕಲರಾಜರು ಮಾರ್ಗವನ್ನು ತೋರಿಸಿದ ಮೇಲೆ ಕಳಿಂಗಾಭಿಮುಖವಾಗಿ ಮುಂದೆ ನಡೆದನು ಕಳಿಂಗರಾಜನು ಗಜಸೇನೆಯೊಡನೆ ರಘುವನ್ನೆದುರಿಸಿ ಘೋರವಾಗಿ ಯುದ್ಧಮಾಡಿ, ಸುರೇಂದ್ರನನ್ನೆದುರಿಸಿದ ಮಹೇಂದ್ರಪರ್ವತ ದಂತೆ, ಪರಾಭವ ಹೊಂದಿದನು ಜಯಶಾಲಿಯಾದ ರಘುಮಹಾರಾಜನು ಶತ್ರುಗಳ ಬಾಣವರ್ಷವನ್ನು ಸಹಿಸಿ ಮಂಗಳಸ್ನಾನ ಮಾಡಿ ಜಯಶ್ರೀಯನ್ನು ಪಡೆದಂತೆ ಶೋಭಿಸುತ್ತಿದ್ದನು ಅವನ ಸೈನಿಕರು ವೀಳೆಯದೆಲೆಗಳ ದೊನ್ನೆ ಗಳನ್ನು ಕಟ್ಟಿ ನಾರಿಕೇಳಾಸವವನ್ನು ಪಾನಮಾಡಿದರು ಅದಕ್ಕಾಗಿ ಅವರು ಪ್ರತ್ಯೇಕವಾಗಿ ಒಂದು ಪಾನಶಾಲೆಯನ್ನೇ ಕಲ್ಪಿಸಿಕೊಂಡಿದ್ದರು ಆಗ ಅವರು ಶತ್ರುಗಳ ಯಶಸ್ಸನ್ನೇ ಹೀರುತ್ತಿದ್ದಂತೆ ತೋರಿತು ರಘುಮಹಾರಾಜನು ಕ್ಷಾತ್ರಧರ್ಮಾರ್ಥವಾಗಿ ವಿಜಯಶೀಲನಾಗಿದ್ದನೇ ಹೊರತು ರಾಜ್ಯಲೋಭ ದಿಂದಲ್ಲ ಆದಕಾರಣ, ಧರ್ಮವಿಜಯಿಯಾಗಿ ತಾನು ಸ್ವಾಧೀನಪಡಿಸಿ ಕೊಂಡಿದ್ದ ಮಹೇಂದ್ರನಾಥನಾದ ಕಳಿಂಗರಾಜನ ರಾಜ್ಯದ ಮೇಲೆ ಅವನಿಗೆ ಆಶೆಯಿರಲಿಲ್ಲ ಅವನು ತನಗೆ ಶರಣಾಗತನಾದ ಕಳಿಂಗರಾಜನನ್ನು ಸೆರೆ ಯಿಂದ ಬಿಡುಗಡೆ ಮಾಡಿ ಕಪ್ಪಕಾಣಿಕೆಗಳನ್ನು ಸ್ವೀಕರಿಸಿ ರಾಜ್ಯವನ್ನು ಹಿಂದ ಕ್ಕೆ ಕೊಟ್ಟನು ಅಲ್ಲಿಗೆ ಪೌರಸ್ತ್ಯರಾಜ್ಯಗಳನ್ನೆಲ್ಲ ಗೆದ್ದಿದ್ದ ಕಾರಣ, ರಘುವು ವಿಜಯಯಾತ್ರೆಯನ್ನು ದಕ್ಷಿಣಾಭಿಮುಖವಾಗಿ ಮುಂದುವರಿಸಿದನು ಫಲ ಭಾರದಿಂದ ಜಗ್ಗುತ್ತಿದ್ದ ಅಡಿಕೆ ತೋಟಗಳಿಂದ ಕಂಗೊಳಿಸುತ್ತಿದ್ದ ಸಮುದ್ರ ತೀರವನ್ನೇ ಅವಲಂಬಿಸಿ ರಘುಮಹಾರಾಜನು ಮುಂದೆ ನಡೆದನು ಆ ಬಳಿಕ ಅವನೂ ಅವನ ಸೈನಿಕರೂ ಕಾವೇರೀತೀರಕ್ಕೆ ಹೋದರು ಸೈನಿಕರಲ್ಲರೂ

ಉತ್ಸಾಹದಿಂದ ಕಾವೇರೀನದಿಯಲ್ಲಿ ಈಜಾಡಿ ಸ್ನಾನಮಾಡಿದರು ಆನೆಗಳೆಲ್ಲ ಕಾವೇರೀನದಿಯಲ್ಲಿ ಈಜಿದುವು ಅವುಗಳ ಮದಜಲವು ಸುರಿದುದರಿಂದ ಕಾವೇರೀನದಿಯ ನೀರಿಗೆ ಅದರ ವಾಸನೆಯು ವ್ಯಾಪಿಸಿತು ಜೈತ್ರಯಾತ್ರೆ ಹೊರಟ ರಘುವು ತನ್ನ ಸೈನಿಕರು ತಕ್ಕಷ್ಟು ದೂರದ ವರೆಗೆ ಸಾಗಿದ ಮೇಲೆ ಮಲಯಾದ್ರಿಯ ಬಳಿಯಲ್ಲಿ ಬೀಡುಬಿಡುವಂತೆ ಆಜ್ಞೆಮಾಡಿದನು ಅಲ್ಲಿ ಮೆಣಸಿನ ತೋಟಗಳಿದ್ದುವು ಮೆಣಸಿನ ತೋಟಗಳಿಗೆ ಗಿಳಿಗಳು ಹಾರಿ ಬಂದು ಓಂತಿರುಗುತ್ತಿದ್ದುವು ಕುದುರೆಗಳ ಖುರಪುಟಗಳಿಗೆ ತಗಲಿ ಅವುಗಳ ತುಳಿತದಿಂದ ಮೇಲಕ್ಕೆ ಹಾರಿದ ಏಲಕ್ಕಿಯ ಕಾಯಿಗಳು ಮದಜಲಧಾರೆಯಿಂದ ನೆನೆದ ಮತ್ತಗಜಗಳ ಗಂಡಸ್ಥಲಗಳಿಗೆ ತಗಲುತ್ತಿದ್ದುವು ರಘುಮಹಾರಾಜನ ಸೈನ್ಯದಲ್ಲಿದ್ದ ಆ ಆನೆಗಳು ಆಗ ರೋಷಪರವಶವಾಗುತ್ತಿದ್ದುವು ಸೈನಿಕರು ಮಲಯಾದ್ರಿಯ ಬಳಿಯಲ್ಲಿದ್ದ ಶ್ರೀಗಂಧವೃಕ್ಷಗಳಿಗೆ ಆನೆಗಳನ್ನು ಕಟ್ಟಿಹಾಕಿದ್ದರು ದಕ್ಷಿಣದಿಕ್ಕಿನಲ್ಲಿ ಚಂಡವಾದ ಸೂರ್ಯನ ತೇಜಸ್ಸು ಕೂಡ ಮಂದವಾಗುತ್ತದೆ ಹಾಗಿದ್ದೂ ಅಲ್ಲಿದ್ದ ಪಾಂಡ್ಯ ಭೂಪಾಲರಿಗೆ ರಘುವಿನ ಪ್ರತಾಪವನ್ನು ಸಹಿಸುವುದು ಅಶಕ್ಯವಾಯಿತು ಪಾಂಡ್ಯಭೂಪಾಲರುಗಳು ರಘುವಿನ ಪಾದಗಳಿಗೆರಗಿ (ತಾಮ್ರಪರ್ಣೀ[1] ನದಿಯು ಸಮುದ್ರಕ್ಕೆ ಸೇರುವ ಪ್ರದೇಶದಿಂದ ತಾವು ತೆಗೆಯಿಸಿಟ್ಟುಕೊಂಡಿದ್ದ) ಅಮೂಲ್ಯವಾದ ಮುತ್ತುಗಳನ್ನು ಕಾಣಿಕೆಯಾಗಿ ಸಮರ್ಪಿಸಿದರು ಶುಭ್ರವಾಗಿಯೂ ಅನರ್ಘ್ಯವಾಗಿಯೂ ಇದ್ದ ಆ ಮುತ್ತುಗಳ ಕಾಣಿಕೆಯನ್ನು ನೋಡಿದರೆ, ದೀರ್ಘಕಾಲದಿಂದ ಸಂಚಿತವಾಗಿದ್ದ ತಮ್ಮ ಯಶೋರಾಶಿಯನ್ನೇ ಅವರು ಕಾಣಿಕೆಯಾಗಿ ಒಪ್ಪಿಸಿದರೋ-ಎಂಬಂತೆ ತೋರುತ್ತಿದ್ದಿತು ಅತುಳ ಪರಾಕ್ರಮಿಯಾದ ರಘುಮಹಾರಾಜನು ತನಗೆ ಪಾಂಡ್ಯರಾಜರುಗಳು ಶರಣಾಗತರಾದಮೇಲೆ ಮಲಯ ದುರ್ದರ ಶೈಲಗಳನ್ನು

---

[1] ತಾಮ್ರಪರ್ಣೀ ನದಿಯೊಂದು ಸಣ್ಣ ನದಿ. ಅದು "ಪಾಲಂಕೋಟಾ" ಮಾರ್ಗವಾಗಿ ಪ್ರವಹಿಸಿ ಮನ್ನಾರ್ ಜಲಸಂಧಿಗೆ ಸೇರುತ್ತದೆ ಅದು ಸಮುದ್ರಕ್ಕೆ ಸೇರುವ ಪ್ರದೇಶದಲ್ಲಿ ಮುತ್ತುಗಳು ದೊರೆಯುತ್ತವೆ ಕಾಳಿದಾಸನು ತನ್ನ ಪ್ರಭುವಾದ ವಿಕ್ರಮಾದಿತ್ಯನ ಜೊತೆಯಲ್ಲಿ (ಆತನ ವಿಜಯಯಾತ್ರೆಯ ಕಾಲದಲ್ಲಿ) ದಕ್ಷಿಣ ಭಾರತವೂ ಸೇರಿ ಸಮಗ್ರಭಾರತದಲ್ಲಿ ಸಂಚರಿಸಿದ್ದು ಆಗಿನ ಅನುಭವವನ್ನೆಲ್ಲ ರಘುವಿನ ದಿಗ್ವಿಜಯ ವರ್ಣನೆಯಲ್ಲಿ ತಂದಿದ್ದಾನೆ

ಏರಿ ಅವುಗಳ ಸಾನುಪ್ರದೇಶದಲ್ಲಿ ದಟ್ಟವಾಗಿ ಬೆಳೆದಿದ್ದ ಶ್ರೀಗಂಧ ವೃಕ್ಷಗಳನ್ನೂ, ಸುತ್ತಮುತ್ತಲಿನ ಪ್ರಕೃತಿಸೌಂದರ್ಯವನ್ನೂ ನೋಡಿ ನೋಡಿ ಹರ್ಷಿಸಿ ತನಗೆ ತೃಪ್ತಿಯಾಗುವವರೆಗೂ ಗಿರಿಕಂದರಗಳಲ್ಲಿ ಸುತ್ತಾಡಿ ವಿಹರಿಸಿದನು ಆ ಬಳಿಕ ಸಹ್ಯಾದ್ರಿಯನ್ನೇರಿ ಸಮುದ್ರದ ನೀರಿನ ಹರವು ದೂರ ಸರಿದಿರುವಂತೆ ತೋರುತ್ತಿದ್ದ ದೃಶ್ಯವನ್ನು ನೋಡಿ ನಲಿದಾಡಿದನು

ವಿಜಯಾಕಾಂಕ್ಷಿಗಳಾದ ಅವನ ಸೈನಿಕರು ಪಶ್ಚಿಮಾಭಿಮುಖವಾಗಿ ಮುಂದೆ ಸಾಗಿದರು ಸಹ್ಯಾದ್ರಿಯ ಸಾನುಪ್ರದೇಶವನ್ನೆಲ್ಲ ಆಕ್ರಮಿಸಿದ್ದ ಅವನ ಸೈನ್ಯ ಸಾಗರವನ್ನು ನೋಡಿದರೆ, ಹಿಂದೆ ಪರಶುರಾಮನು ತನ್ನ ತಪಸ್ಸಿಗಾಗಿ ಸ್ಥಳವನ್ನು ಪಡೆಯುವುದಕ್ಕಾಗಿ ಹಿಮ್ಮೆಟ್ಟಿಸಿದ್ದ ಸಾಗರವು ಮತ್ತೆ ಸಹ್ಯಾದ್ರಿಯ ಬುಡಕ್ಕೆ ಬಂದಿತೋ — ಎಂಬಂತೆ ತೋರುತ್ತಿದ್ದಿತು ರಘುಮಹಾರಾಜನ ಮುತ್ತಿಗೆಯ ಪರಿಣಾಮವಾಗಿ ಯುದ್ಧವಾಗುವುದೆಂಬ ಭಯದಿಂದ ಕೇರಳ ಸ್ತ್ರೀಯರು ಆಭರಣಗಳನ್ನು ಧರಿಸಿ ಅಲಂಕಾರ ಮಾಡಿಕೊಳ್ಳುವುದನ್ನು ಬಿಟ್ಟು ಬಿಟ್ಟರು ಸೈನಿಕರ ಪದಘಾತದಿಂದ ಮೇಲಕ್ಕೆದ್ದ ಕೆಂಧೂಳು ಅವರ ಮುಖವನ್ನೂ ಮತ್ತು ಅವರ ಅಲಕ ಪಂಕ್ತಿಯನ್ನು ಆವರಿಸಿತು ಆ ಕೆಂಧೂಳೇ ಅವರ ಬೈತಲೆಯ ಚೂರ್ಣ†ವಾಗಬೇಕಾಯಿತು ಮುರಲಾ

---

*ಪರಶುರಾಮನ ಈ ಕಥೆಯು ಮಹಾಭಾರತದಲ್ಲಿಯೂ, ವಿಷ್ಣುಪುರಾಣದಲ್ಲಿಯೂ ಇದೆ ಪರಶುರಾಮನು ಭೂಮಂಡಲವನ್ನೆಲ್ಲ ಗೆದ್ದು ಯಜ್ಞದಕ್ಷಿಣಾರ್ಥವಾಗಿ ಕಶ್ಯಪ ಋಷಿಗೆ ದಾನಮಾಡಿದನಂತೆ ಆ ಬಳಿಕ ತಾನು ಯಾವ ಭೂಪ್ರದೇಶದಲ್ಲಿ ಆಶ್ರಮ ಕಟ್ಟಿಕೊಂಡರೂ ದತ್ತಾಪಹಾರದೋಷ ಬರುವಂತಿದ್ದ ಕಾರಣ, ಪರಶುರಾಮನು ಪಶ್ಚಿಮ ಸಮುದ್ರದ ಮೇಲೆ (ಎಂದರೆ ಅರಬ್ಬೀಸಮುದ್ರದ ಮೇಲೆ) ಬಾಣಪ್ರಯೋಗ ಮಾಡಿ, ಸಹ್ಯಾದ್ರಿಯಿಂದಾಚೆಗೆ ನೀರು ಸರಿಯುವವರೆಗೂ ಸಮುದ್ರವನ್ನು ಶೋಷಿಸಿ (ಪಶ್ಚಿಮಘಟ್ಟ ಪ್ರದೇಶದಲ್ಲಿ ಈಗ ಕೊಂಕಣವೆಂದು ಕರೆಯುವ) ಭೂಪ್ರದೇಶವನ್ನು ದೊರಕಿಸಿಕೊಂಡು ತಪಸ್ಸುಮಾಡಿದನಂತೆ ಆ ಐತಿಹ್ಯವನ್ನು ಕವಿಗುರುವು ಇಲ್ಲಿ ಮನೋಹರವಾಗಿ ಉಪಯೋಗಿಸಿ ಕೊಂಡಿದ್ದಾನೆ

† ಕಾಳಿದಾಸನ ಕಾಲದಲ್ಲಿ ಸ್ತ್ರೀಯರು ಬೈತಲೆ ಚೂರ್ಣವನ್ನೂ, ಮುಖಚೂರ್ಣ ಮುಂತಾದ ಅಲಂಕಾರ ಸಾಮಗ್ರಿಗಳನ್ನೂ (ಈಗಿನ ಸ್ತ್ರೀಯರು "ಫೇಸ್‌ಫೌಡರ್" ಮುಂತಾದುವುಗಳನ್ನು ಉಪಯೋಗಿಸುತ್ತಿರುವಂತೆಯೇ) ಬಳಸುತ್ತಿದ್ದರೆಂಬುದು ಇದರಿಂದಲೂ ಮತ್ತು "ನೀತಾ ಲೋಧ್ರ ಪ್ರಸವರಜಸಾ ಪಾಂಡುತಾಮಾನನಶ್ರೀಃ" ಮುಂತಾದ ಇತರ ಕಾಳಿದಾಸ ವಾಣಿಗಳಿಂದಲೂ ವ್ಯಕ್ತವಾಗುತ್ತದೆ

ನದಿಯ ಕಡೆಯಿಂದ ಬೀಸುತ್ತಿದ್ದ ತಂಗಾಳಿಯಿಂದ ಉತ್ಪಾಪಿತವಾದ ಕೇತಕೀ ರಜವು (ತಾಳೇದಳಗಳಿಂದ ಹಾರಿಬಂದ ಸುವಾಸನೆಯ ಧೂಳು) ಸೈನಿಕರ ಉಡುಪುಗಳಿಗೆ ಅವರ ಪ್ರಯತ್ನವಿಲ್ಲದೆಯೇ ನೈಸರ್ಗಿಕವಾಗಿ ಸುವಾಸನೆಯನ್ನುಂಟುಮಾಡತಕ್ಕ "ಪಟವಾಸ ಚೂರ್ಣ"ವಾಯಿತು. ರಘುಮಹಾರಾಜನ ಸೈನ್ಯದಲ್ಲಿದ್ದ ಕುದುರೆಗಳ ದೇಹದ ನಾನಾ ಭಾಗಗಳಿಗೂ (ಶತ್ರುಗಳ ಕತ್ತಿಗಳಿಂದಲೂ ಮತ್ತು ಶತ್ರುಬಾಣಗಳಿಂದಲೂ ಪೆಟ್ಟುಬೀಳದಂತೆ) ಕಬ್ಬಿಣದ ರಕ್ಷಣಾ ಕವಚಗಳನ್ನು ತೊಡಿಸಿ ಭದ್ರಗೊಳಿಸಿದ್ದರು. ಕುದುರೆಗಳು ನಡೆದಾಗ ಅವುಗಳಿಂದ ಆಗುತ್ತಿದ್ದ ಸಿಂಜಿತಧ್ವನಿಯು ರಾಜತಾಲೀವನಗಳ ಮರ್ಮರ ಧ್ವನಿಗಿಂತ ಅಧಿಕತರವಾಗಿ ಆ ಧ್ವನಿಯನ್ನು ಮುಳುಗಿಸುತ್ತಿದ್ದಿತು. ಕರಿಯ ದುಂಬಿಗಳು ಪುನ್ನಾಗವೃಕ್ಷಗಳಿಂದ ಹಾರಿಬಂದು ತಾಳವೃಕ್ಷಗಳಿಗೆ ಕಟ್ಟಿದ್ದ ಮತ್ತಗಜಗಳ ಗಂಡಸ್ಥಳಗಳಿಗೆರಗುತ್ತಿದ್ದುವು. ಆ ಆನೆಗಳ ಕಣ್ಣುಗಳ ಮೇಲೆ ಹರಿಯುತ್ತಿದ್ದ ಮದೋದಕದ ವಾಸನೆಯಿಂದ ಇವು ಆಕರ್ಷಿತವಾದುದೇ ಅವಕ್ಕೆ ಕಾರಣ. ಪರಶುರಾಮನಿಂದ ಅಭ್ಯರ್ಥಿತವಾದ ಪಶ್ಚಿಮ ಸಮುದ್ರವು ಆತನಿಗೆ ಅಪ್ರಮುಕ್ಕಾಗಿ ಭೂಮಿಯನ್ನು ಬಿಟ್ಟುಕೊಟ್ಟಿತಂತೆ. ಅದೇ ಸಮುದ್ರವು

---

ಕೇರಳವೆಂಬುದು, ಈಗಿನ ಕೊಚ್ಚಿ, ದಕ್ಷಿಣಕನ್ನಡ, ತಿರುವಾಂಕೂರು ಪ್ರದೇಶಗಳಿಗೆ ಪೂರ್ವಕಾಲದಲ್ಲಿದ್ದ ಹೆಸರು. ಸಹ್ಯಾದ್ರಿಯ ಪಾದದ ಬಳಿಯಲ್ಲಿರುವ ಕಾಳೀನದಿಗೆ ಕಾಳಿದಾಸನ ಕಾಲದಲ್ಲಿ ಮುರಲಾನದಿಯೆಂದು ಹೆಸರಿದ್ದಿತೆಂದು ವಿದ್ವಾಂಸರು ನಿರ್ಧರಿಸಿದ್ದಾರೆ.

ಕಾಳಿದಾಸನ ಕಾಲದಲ್ಲಿ ಗಂಡಸರು ತಮ್ಮ ಉಡುಪುಗಳಿಗೆ ಸುವಾಸನೆಯುಂಟಾಗುವಂತೆ "ಪಟವಾಸ ಚೂರ್ಣ"ವನ್ನು ಉಪಯೋಗಿಸುತ್ತಿದ್ದರೆಂಬುದು ಗೊತ್ತಾಗುತ್ತದೆ. ಪಟವಾಸಚೂರ್ಣವನ್ನು ಮಾಡಲು ಉಪಯೋಗಿಸುತ್ತಿದ್ದ ಸಾಮಗ್ರಿಗಳಾವುವೆಂಬುದನ್ನು ಕುರಿತ ವಿವರಣೆಯು ಬೃಹತ್ಸಂಹಿತೆಯಲ್ಲಿ "ತ್ವಗುಶೀರ ಪತ್ರಭಾಗೈಃ ಸೂಕ್ಷ್ಮೈಲಾರ್ಧೇನ ಸಂಯುಕ್ತೈಶ್ಚೂರ್ಣಃ। ಪಟವಾಸಃ ಪ್ರವರೋಯಂ ಮೃಗಕರ್ಪೂರ ಪ್ರಬೋಧೇನ" ಎಂದದೆ. "ಪಟವಾಸ"ವೆಂದರೆ ಉಡುಪುಗಳಿಗೆ ವಾಸನೆ ಕಟ್ಟುತ್ತಿದ್ದ ಸುವಾಸನಾಚೂರ್ಣವೆಂದೂ, ಅನೇಕವಿಧಗಳಲ್ಲಿ ಅದನ್ನು ಮಾಡುತ್ತಿದ್ದರೆಂದೂ ಸಾಮಾನ್ಯರು ಸಾಮಾನ್ಯ ಸುವಾಸನಾದ್ರವ್ಯಗಳಿಂದ ಸಿದ್ಧವಾದ ಚೂರ್ಣವನ್ನೂ, ಧನಿಕರು ಕಸ್ತೂರಿ ಮುಂತಾದುವುಗಳನ್ನು ಉಪಯೋಗಿಸಿ ಸಿದ್ಧಗೊಳಿಸಿದ "ಪಟವಾಸಚೂರ್ಣ"ವನ್ನೂ ಬಳಸುತ್ತಿದ್ದರೆಂದೂ ಹೇಳಲು ತಕ್ಕಷ್ಟು ಪ್ರಮಾಣವಾಕ್ಯಗಳಿವೆ.

ಪಶ್ಚಿಮ ರಾಜ್ಯಗಳ ಅರಸರ ಮೂಲಕ ರಘುಮಹಾರಾಜನಿಗೆ ಕಾಣಿಕೆಯನ್ನು ಸಲ್ಲಿಸಿತು. ರಘುಮಹಾರಾಜನ ಸೈನ್ಯದಲ್ಲಿದ್ದ ಮದಗಜಗಳು ಮೂರು ಶಿಖರ ಗಳುಳ್ಳ ಒಂದು ತ್ರಿಕೂಟಶೈಲದ ಸಾನುಪ್ರದೇಶವನ್ನು ತಮ್ಮ ಕೊಂಬುಗಳಿಂದ (ದಂತಗಳಿಂದ) ಅಗೆದು ಗುರುತುಮಾಡಿ ವಪ್ರಕ್ರೀಡೆಯನ್ನಾಡಿದುವು, ವಿಕ್ರಮ ಲಕ್ಷಣಗಳನ್ನು ಸ್ಪಷ್ಟವಾಗಿ ವ್ಯಕ್ತಗೊಳಿಸಿದುವು ಆ ತ್ರಿಕೂಟಶೈಲವು ರಘು ಮಹಾರಾಜನ ಜಯಸ್ತಂಭವೋ— ಎಂಬಂತೆ ಶೋಭಿಸಿತು ಅನಂತರ ರಘು ಮಹಾರಾಜನು ತತ್ತ್ವಜ್ಞಾನದಿಂದ ಇಂದ್ರಿಯಗಳೆಂಬ ಶತ್ರುಗಳನ್ನು ಜಯಿಸ ಲು ಯತ್ನಿಸುವ ಸಂಯಮಿಯಂತೆ(ಎಂದರೆ ಯೋಗಿಯಂತೆ) ಭೂಮಾರ್ಗದಿಂದ ಪಾರಸೀಕರನ್ನು ಗೆಲ್ಲಲು ಪ್ರಯಾಣಮಾಡಿದನು * ಯವನ ಮಹಿಳೆಯ ರ ಮುಖಗಳ ಮೇಲೆ ಮದ್ಯಪಾನ ಮತ್ತತೆಯಿಂದುಂಟಾದ ಮದರಾಗವಿದ್ದುದು ಅವನ ಮನಸ್ಸಿಗೆ ಸರಿಬೀಳಲಿಲ್ಲ ಪಾರಸೀಕರು ಸುಪ್ರಸಿದ್ಧವಾದ ತಮ್ಮ ಅಶ್ವಗಳನ್ನೇರಿ ರಘುಮಹಾರಾಜನ ಸೈನ್ಯಸಾಗರವನ್ನೆದುರಿಸಿದರು ಕುದುರೆಗಳ ಖುರಪುಟಗಳಿಂದೆದ್ದ ಕೆಂಧೂಳು ಯುದ್ಧರಂಗವನ್ನೆಲ್ಲ ಆವರಿಸಿ ದಟ್ಟವಾಗಿ ಕವಿಯಿತು ಆಗ ಸೈನಿಕರಲ್ಲಿ ಒಬ್ಬರಮುಖವನ್ನು ಮತ್ತೊಬ್ಬರು ಗುರುತಿಸು ವುದು ಸಾಧ್ಯವಿರಲಿಲ್ಲ ಅವರವರ ಧನಸ್ಸಿನ ಶಿಂಜಿನಿಯ ನಾದದಿಂದ ಮಾತ್ರವೇ ಒಬ್ಬರನ್ನೊಬ್ಬರು ಗುರುತಿಸಬೇಕಾಯಿತು ಸ್ಮಶ್ರುಸಹಿತನಾದ ಪಾರಸೀಕರ ತಲೆಗಳನ್ನು ರಘುಮಹಾರಾಜನೂ ಅವನ ಸೈನಿಕರೂ ಕಡಿದು ಕಡಿದು ನೆಲಕ್ಕು ರುಳಿಸಿದರು. ಅದನ್ನು ಕಂಡು ಧೈರ್ಯಗುಂದಿದ ಪಾರಸೀಕ ಸೈನಿಕರು ತಮ್ಮ ಶಿರಸ್ತ್ರಾಣಗಳನ್ನು ಕಳಚಿ ಬರಿಯ ತಲೆಯಲ್ಲಿ ರಘುಮಹಾರಾಜನಿಗೆ ಶರಣಾಗತ ರಾದರು. ಶರಣಾಗತಿಯೇ ಮಹಾತ್ಮರ ಕೋಪ ಶಾಂತಿಗೆ ಮಾರ್ಗ ಅನಂತರ ಶಾಂತಿ ಸ್ಥಾಪನೆಯಾಯಿತು ರಘುವಿನ ಸೈನಿಕರು ಆ ನಾಡಿನ ದ್ರಾಕ್ಷಾವಲ ಯ ಪ್ರದೇಶಗಳಲ್ಲಿ ಸೊಗಸಾದ ಕೃಷ್ಣಾಜಿನಗಳ ಮೇಲೆ ಕುಳಿತು ದ್ರಾಕ್ಷಾಸವ ವನ್ನು ಸೇವಿಸಿ ಯುದ್ಧ ಶ್ರಮವನ್ನು ಪರಿಹಾರ ಮಾಡಿಕೊಂಡರು

---

*ಅವನು ಭರತಖಂಡದ ವಾಯುವ್ಯ ದಿಕ್ಕಿನ ಗಡಿಪ್ರದೇಶಗಳಿಂದಾಚೆ ಸೈನ್ಯ ಸಮೇತನಾಗಿ ಹೋಗಿ ಪಾರಸೀಕರನ್ನು ಜಯಿಸಿದನೆಂಬುದು ಇದರತಾತ್ಪರ್ಯವೆಂದು ತೋರುತ್ತದೆ.

ಅನಂತರ ರಘುಮಹಾರಾಜನು ದಿಗ್ವಿಜಯಾರ್ಥವಾಗಿ ತನ್ನ ಸೈನ್ಯ ಸಾಗರದೊಡನೆ ಉತ್ತರದಿಕ್ಕಿಗೆ ಪ್ರಯಾಣಮಾಡಿದನು ಕಾಶ್ಮೀರ ದೇಶದಲ್ಲಿ 'ಸಿಂಧು"ವೆಂಬ ನದೀ ತೀರದಲ್ಲಿ (ಈಗಿನ ಆಮೂರ್ ನದೀತೀರದಲ್ಲಿ) ಹೊರಳಿ ಅವನ ಕುದುರೆಗಳು ತಮ್ಮ ಮಾರ್ಗಾಯಾಸವನ್ನು ಪರಿಹರಿಸಿಕೊಂಡುವು (ಕುದುರೆಗಳು ನೆಲದಮೇಲೆ ಹೊರಳಿದರೆ ಆಯಾಸ ಪರಿಹಾರ) ಅಲ್ಲದೆ ತಮ್ಮ ಬೆನ್ನಿಗೆ ಅಂಟಿಕೊಂಡಿದ್ದ ಕುಂಕುಮ ಕೇಸರಿಯ ಹೂಗಳ ಕೇಸರಿಗಳನ್ನು ಕೊಡಹಿಕೊಂಡುವು * ರಘುಮಹಾರಾಜನು ತನ್ನ ಅಪಾರ ಸೈನ್ಯದೊಡನೆ ಹೂಣರನ್ನು ಅಕಸ್ಮಾತ್ತಾಗಿ ಮುತ್ತಿದಾಗ ಹೂಣಸ್ತ್ರೀಯರು ಭಯವಿಹ್ವಲೆಯು ರಾದರು ಆಗ ಅವರ ಕಪೋಲಗಳು ಬಿಳುಪೇರಿ ಪಾಲವವಾದುವು ತಮ್ಮ ಗಂಡಂದಿರು ಪರಾಕ್ರಮದಿಂದ ಕಾದಿ ಮಡಿದುದನ್ನು ಕೇಳಿ ದುಃಖಿಸುತ್ತ (ಅವರ ದೇಶಾಚಾರಕ್ಕನುಸಾರವಾಗಿ) ಎದೆಯನ್ನೂ ಕೆನ್ನೆಗಳನ್ನೂ ಅಂಗ ಗಳಿಂದ ಬಲವಾಗಿ ಬಡಿದುಕೊಳ್ಳುತ್ತ ರೋದಿಸಿದರು ಅವರು ರಭಸದಿಂದ ಬಡಿದುಕೊಂಡ ಪೆಟ್ಟುಗಳ ಪೆಸೆಯಿಂದ ಅವರ ಕೆನ್ನೆಗಳು ಕೆಂಪೇರಿದುವು ದುರ್ಬಲರಾದ ಕಾಂಭೋಜರಾಜರು *ರಘುಪರಾಕ್ರಮವನ್ನು ತಡೆಯಲಾರದೆ ಅವನಿಗೆ ಶರಣಾಗತರಾಗಿ ತಲೆತಗ್ಗಿಸಿ ನಿಂತರು ಆನೆಗಳ ಕೊರಳ ಹಗ್ಗವನ್ನು ಕೊಂಬೆಗಳಿಗೆ ಕಟ್ಟಿದ್ದ ಕಾರಣ, ಅವುಗಳ ಸೆಳೆತದಿಂದ ಅಕ್ಷೋಟ ವೃಕ್ಷಗಳೂ ಕೂಡ, ಕಾಂಭೋಜ ರಾಜರೊಡನೆ ಅವರಂತೆಯೇ (ಶಿರವನ್ನು ತಗ್ಗಿಸಿದಂತೆ) ಬಾಗಿ ನಿಂತಿದ್ದುವು ಕಾಂಭೋಜರಾಜರಿಂದ ಕೋಸಲೇಶ್ವರನಾದ ರಘುಮಹಾ ರಾಜನಿಗೆ (ಶಿಕ್ಷಣ ಹೊಂದಿದ) ಜಾತ್ಯಶ್ವಗಳೂ ಮತ್ತು ಸುವರ್ಣರಾಶಿಗಳೂ ಕಾಣಿಕೆಯಾಗಿ ಪದೇ ಪದೇ ಬಂದು ಸೇರಿದುವು, ಆದರೆ ಸರ್ವವೂ ಬಂದು ಸೇರಲಿಲ್ಲ ತಮ್ಮನ್ನು ಜಯಿಸುವವರಿರಲಿಲ್ಲವೆಂಬ ಗರ್ವವು ಮಾತ್ರ ಅವರನ್ನು ಗೆದ್ದುಬಂದ ರಘುವಿನ ಬಳಿಗೆ ಬಂದು ಸೇರಲಿಲ್ಲ ಅವರನ್ನು ಗೆದ್ದುದರಿಂದ

---

* ಕಾಶ್ಮೀರ ದೇಶದಲ್ಲಿ ಬೆಳೆಯುವ ಕುಂಕುಮ ಕೇಸರಿಯ ಹೂಗಳನ್ನು ವರ್ಣಿಸಿರುವವನು ಕಾಳಿದಾಸ ಮಹಾಕವಿಯೊಬ್ಬನೇ ಅವನು ಕಾಶ್ಮೀರಕ್ಕೆ ಹೋಗಿ ನೋಡಿದ ಅನುಭವದಿಂದ ವರ್ಣಿಸಿದ್ದಾನೆ

ಗರ್ವಪಡಲು ಕಾರಣವಿದ್ದರೂ ರಘುವು ಗರ್ವಪಡಲಿಲ್ಲ ಅವನು ಅನಂತರ ತನ್ನ ಸೈನಿಕರೊಡನೆ ಹಿಮವತ್ಪರ್ವತವನ್ನು ಹತ್ತಿದನು ಕಂದರಗಳಲ್ಲಿದ್ದ ಸಿಂಹಗಳು ಸೈನ್ಯಘೋಷವನ್ನು ಕೇಳಿ ನಿದ್ರೆಯಿಂದೆಚ್ಚೆತ್ತುವು ಅಸಂಖ್ಯಾತ ಸೈನಿಕರು ಕೋಲಾಹಲ ಮಾಡುತ್ತಿದ್ದರೂ ಅವು ಭಯಪಡದೆ ದುರುಗುಟ್ಟಿ ನೋಡಿ ಉದಾಸೀನ ಭಾವದಿಂದಿದ್ದುವು ತುಲ್ಯಸತ್ತ್ವಗಳಾಗಿ ಸೈನಿಕರ ಕೋಲಾಹಲದಿಂದ ಕೂಡ ಹೆದರದೆ ಹಾಗೆ ಮಲಗಿದ್ದ ಸಿಂಹಗಳನ್ನು ರಘುವು ಪ್ರಶಂಸಿಸಿದನು ಭೂರ್ಜಪತ್ರಗಳನ್ನು ಅಲುಗಿಸಿ ಮರ್ಮರ ಶಬ್ದಮಾಡಿಸುತ್ತಲೂ, ಕಿರಿಬಿದಿರಿನೊಳಹೊಕ್ಕು ನಾದವನ್ನು ಹೊರಸೂಸುತ್ತಲೂ ಮಂದಮಾರುತವು ಬೀಸುತ್ತಿದ್ದಿತು ಗಂಗಾನದಿಯ ಮೇಲಿನಿಂದ ಬೀಸುತ್ತ, ಗಂಗಾಜಲದ ತುಂತುರುಗಳೊಡನೆ ಬಂದ ಆ ಮಂದಮಾರುತವು ರಘುವಿಗೆ ತನ್ನ ಸೇವೆಯನ್ನು ಸಮರ್ಪಿಸಿತು ಸೈನಿಕರು ನಮೇರು ವೃಕ್ಷಗಳ (ಎಂದರೆ ಸುರಪುನ್ನಾಗ ವೃಕ್ಷಗಳ) ನೆರಳಿನಲ್ಲಿ ಕಸ್ತೂರಿಯ ಸುವಾಸನೆಯಿಂದ ಘಮಘಮಿಸುತ್ತಿದ್ದ ಬಂಡೆಗಳ ಮೇಲೆ ಕುಳಿತು ಪರ್ವತಾರೋಹಣ ಶ್ರಮವನ್ನು ಹೋಗಲಾಡಿಸಿಕೊಂಡರು ಅವರು ಅಲ್ಲಿಗೆ ಬರುದುದಕ್ಕೆ ಮುಂಚಿತವಾಗಿ ಅದೇ ಬಂಡೆಗಳ ಮೇಲೆ ಕಸ್ತೂರೀ ಮೃಗಗಳು ಮಲಗಿದ್ದು ಹೊರಟು ಹೋಗಿದ್ದುವು ಆದ ಕಾರಣ, ಆ ಬಂಡೆಗಳಿಗೆ ಸುವಾಸನೆ ಬಂದಿತು.

ಹಿಮಾಲಯ ಪರ್ವತದ ಸಾನುಪ್ರದೇಶಗಳಲ್ಲಿ ರಘುವು ಬೀಡುಬಿಟ್ಟಿದ್ದ ಕಡೆಗಳಲ್ಲಿ ಆನೆಗಳ ಕೊರಳಿನ ಹಗ್ಗಗಳನ್ನು ಸೈನಿಕರು ದೇವದಾರು ವೃಕ್ಷಗಳಿಗ ಬಿಗಿಯುತ್ತಿದ್ದರು ಅದರಿಂದ ಆ ಸ್ಥಳದಲ್ಲಿ ದೇವದಾರು ವೃಕ್ಷಗಳ ತೊಗಟೆಗಳು ಉದರಿಹೋಗಿದ್ದುವು. ಆ ಪ್ರದೇಶದಲ್ಲಿ ವಾಸವಾಗಿದ್ದ ಕಿರಾತಗರ್ವದ ಕಾಡುಜನರು ಅದನ್ನು ಕಂಡು, ಅದರಿಂದ ಆನೆಗಳ ಎತ್ತರವೆಷ್ಟೆಂಬ ಪ್ರಮಾಣವನ್ನು ನಿರ್ಧರಿಸಿ ಚರ್ಚಿಸುತ್ತಿದ್ದರು ರಘುವಿನ ಸೈನಿಕರಿಗೂ ಕಿರಾತಪಡೆ

* ಕಾಂಭೋಜದೇಶದ ಜನರೆಂದರೆ ಹಿಂದೂಕುಶ್ ಪ್ರದೇಶದಿಂದ ಹಿಡಿದು ಟಿಬೆಟ್ಟಿನಲ್ಲಿರುವ ಲಡಕ್ ನಗರದವರೆಗೂ ಇದ್ದ ಜನರೆಂದು ಸಂಶೋಧಕರು ನಿರ್ಧರಿಸಿದ್ದಾರೆ ಅರ್ಜುನನು ಕಾಂಭೋಜರಾಜರನ್ನು ಜಯಿಸಿದನೆಂದು ಮಹಾಭಾರತದಲ್ಲಿದೆ.

ಗಳಿಗೂ ಯುದ್ಧವಾಯಿತು ದೂರದಿಂದ ಕಿರಾತರು ಬೀರಿದ ಕವಣೆ ಕಲ್ಲುಗಳಿಗೂ,ರಘುವಿನ ಸೈನಿಕರು ಪ್ರಯೋಗಿಸಿದ ಕಬ್ಬಿಣದ ಬಾಣಗಳಿಗೂ ಸಂಘರ್ಷಣವುಂಟಾದ ರಭಸಕ್ಕೆ ಬೆಂಕಿಯ ಕಿಡಿಗಳು ಹಾರುತ್ತಿದ್ದುವು * ರಘುಸೈನಿಕರ ನಾರಾಚಗಳಿಂದ ಘಾಸಿಹೊಂದಿದ ಕಿರಾತ ಪಡೆಗಳ ಉತ್ಸಾಹವು ಉಡುಗಿ ಹೋಯಿತು, ಅವರು ಸೋತು ದಿಕ್ಕುಗೆಟ್ಟರು ಕಿನ್ನರರು ರಘುವಿನ ವಿಜಯವನ್ನು ವರ್ಣಿಸಿ ಜಯಗೀತಗಳನ್ನು ಹಾಡಿದರು ಯುದ್ಧದಲ್ಲಿ ಸೋತ ಕಿರಾತರು ಕಾಣಿಕೆಯ ವಸ್ತುಗಳನ್ನು ತಂದೊಪ್ಪಿಸಿದರು ರಘುವಿನ ಸತ್ತ್ವವು ಹಿಮಾಲಯ ಪ್ರಾಂತದವರಿಗೂ, ಅಲ್ಲಿಯ ಸಂಪದವು ರಘುವಿಗೂ ಮನದಟ್ಟಾದುವು ಅವನು ಹಿಮಾಲಯ ಪ್ರಾಂತದರಾಜರುಗಳನ್ನೂ, ಕಿರಾತಪಡೆಗಳನ್ನೂ ಗೆದ್ದು, ಚ್ಯುತಿಯಿಲ್ಲದ ಯಶೋರಾಶಿಯನ್ನು ಅಲ್ಲಿ ನೆಲೆಗೊಳಿಸಿ ಹಿಮವತ್ಪರ್ವತದಿಂದ ಕೆಳಕ್ಕಿಳಿದು ಬಂದನು ಲೌಹಿತ್ಯಾ ನದಿಯನ್ನು ದಾಟಿ ರಘುವು ಮುಂದುವರಿದುದನ್ನು ಕೇಳಿ ಪ್ರಾಗ್ಜ್ಯೋತಿಷೇಶ್ವರನು ಭಯದಿಂದ ನಡುಗಿದನು + ರಘುಸೈನ್ಯದ ಆನೆಗಳನ್ನು ಕಟ್ಟಿಹಾಕಿದ್ದ ಕೃಷ್ಣಾಗರುವೃಕ್ಷಗಳೂ ನಡುಗಿದುವು. ರಘುಮಹಾರಾಜನ ರಥಗಳ ರಭಸಕ್ಕೆ ಮೇಲಕ್ಕೆದ್ದ ಧೂಳು ಸೂರ್ಯನ ಬೆಳಕನ್ನು ತಡೆಗಟ್ಟಿ ಮಳೆಯಿಲ್ಲದ ಮೇಘದಂತೆ ಕವಿದುಕೊಂಡಿತು ಪ್ರಾಗ್ಜ್ಯೋತಿಷೇಶ್ವರನು ಭಯವಿಹ್ವಲನಾಗಿ ಆ ಧೂಳನ್ನೇ ಸಹಿಸಲಾರದೆ ಹೋದನು ಇನ್ನು ರಘುವಿನ ಸೈನ್ಯವನ್ನು ಕಂಡು ಅವನಿಗುಂಟಾದ ತಲ್ಲಣವನ್ನು ಕೇಳಬೇಕಾದುದೇನು ! ಅವನು ಶರಣಾಗತನಾಗಿ ಅದುವರೆಗೂ ಶತ್ರುನಿಗ್ರಹ ಕಾರ್ಯದಲ್ಲಿ ತನಗೆ ಸಹಾಯಮಾಡಿದ್ದ ಗಜಬಲವನ್ನೇ ಇಂದ್ರನಿಗಿಂತಲೂ

*ಕಾಲಿದಾಸನು ತನ್ನ ಪ್ರಭುವಿನೊಡನೆ ಹೋದಾಗ ಅದನ್ನು ನೋಡಿದ್ದನೆಂದು ತೋರುತ್ತದೆ.

+ಅಸ್ಸಾಂ ದೇಶದ ಮೇಲಿನ ಭಾಗದಲ್ಲಿ ಹರಿಯುವ ಬ್ರಹ್ಮಪುತ್ರಾನದಿಯ ಭಾಗಕ್ಕೆ ಲೌಹಿತ್ಯಾನದಿಯೆಂದು ಹೆಸರು ಪ್ರಾಗ್ಜ್ಯೋತಿಷನಗರವು ಪುರಾತನವಾದ ಕಾಮರೂಪ ರಾಜ್ಯದ ರಾಜಧಾನಿ ಕಾಮರೂಪ ರಾಜ್ಯಕ್ಕೆ ಪ್ರಾಗ್ಜ್ಯೋತಿಷರಾಜ್ಯವೆಂದೂ ಹೆಸರು. ಪಶ್ಚಿಮ ಭೂತಾನವೂ ಮತ್ತು ಪೂರ್ವ ಅಸ್ಸಾಂ ಪ್ರಾಂತವೂ ಅದಕ್ಕೆ ಸೇರಿದ್ದುವು. ಕಾಮರೂಪದ ಪೂರ್ವಗಡಿಯಾಚೆ ಟಿಬೆಟ್ಟಿನ “ಚೂ” ಪ್ರಾಂತವಿದೆ

ಪರಾಕ್ರಮಶಾಲಿಯಾದ ರಘುವಿಗೆ ಸಮರ್ಪಿಸಿದನು ಕಾಮರೂಪೇಶ್ವರನು (ಪ್ರಾಗ್ಜ್ಯೋತಿಷೇಶ್ವರನು) ರಘುವನ್ನು ಹೇಮಪೀಠದಲ್ಲಿ ಕುಳ್ಳಿರಿಸಿ, ರಘುವೇ ತನ್ನಭಾಗದ ದೈವವೆಂದು ಭಾವಿಸಿ, ಸುವರ್ಣದ ಪಾದಪೀಠದ ಮೇಲಿದ್ದ ಪಾದಗಳ ಛಾಯೆಯ ಬಳಿಯಲ್ಲಿ ಅನರ್ಘ್ಯರತ್ನಗಳನ್ನು ಸಮರ್ಪಿಸಿ, ರತ್ನಗಳ ರೂಪದ ಪುಷ್ಪಾರ್ಚನೆಯನ್ನು ಸಲ್ಲಿಸಿದನು ಹೀಗೆ ನಾಲ್ಕು ದಿಕ್ಕುಗಳಲ್ಲಿಯೂ ಇದ್ದ ರಾಜ್ಯಗಳನ್ನೆಲ್ಲ ಗೆದ್ದು ಜಯಶೀಲನಾದ ರಘುಚಕ್ರೇಶ್ವರನ ಏಕಚ್ಛತ್ರಾಧಿಪತ್ಯಕ್ಕೆ ರಾಜರುಗಳೆಲ್ಲರೂ ಒಳಗಾಗಿದ್ದ ಕಾರಣ, ಅವರು ಇನ್ನೂ ಪ್ರಭುಗಳಾಗಿದ್ದರೂ ತಮ್ಮ ಅಧಿರಾಜನನ್ನು ಹಿಂಬಾಲಿಸುವಾಗ್ಗೆ ಸ್ವಾತಂತ್ರ್ಯದ ಮತ್ತು ಏಕಾಧಿಕಾರದ ಚಿಹ್ನೆಯಾದ ಛತ್ರಗಳನ್ನು ಅವರು ತಮ್ಮ ತಲೆಗಳ ಮೇಲೆ ಹಿಡಿಸಿಕೊಳ್ಳಲು ಅವರಿಗೆ ಅಧಿಕಾರವಿರಲಿಲ್ಲ (ಆ ಅಧಿಕಾರವನ್ನು ಅವರು ಬಿಟ್ಟುಕೊಟ್ಟಿದ್ದರು) ಆದಕಾರಣ, ರಘುಚಕ್ರೇಶ್ವರನ ರಥದ ಚಕ್ರಗಳಿಂದ ಮೇಲಕ್ಕೆದ್ದ ಧೂಳನ್ನು ತಮ್ಮ ಛತ್ರಶೂನ್ಯವಾದ ಹೆರಳುಗಳಲ್ಲಿ ಅವರು ಧರಿಸಬೇಕಾಯಿತು

ನಾಲ್ಕುದಿಕ್ಕುಗಳಲ್ಲಿಯೂ ವಿಜಯ ಯಾತ್ರೆಯನ್ನು ಪೂರೈಸಿ ಜಯಶೀಲನಾಗಿಚಕ್ರೇಶ್ವರನಾಗಿದ್ದ ರಘುಸಮ್ರಾಟನು 'ವಿಶ್ವಜಿತ್' ಎಂಬ ಯಜ್ಞವನ್ನು ನೆರವೇರಿಸಿದನು ಅವನು ವಿಶ್ವಜಿದ್ಯಜ್ಞವನ್ನು ನೆರವೇರಿಸಿದಕಾರಣ, ತನ್ನ ಸರ್ವಸ್ವವನ್ನೂ ಸತ್ಪಾತ್ರರಿಗ ಕೊಟ್ಟು ಪ್ರಜೆಗಳನ್ನು ತಣಿಸಿದನು ಅಸಂಖ್ಯಾತ ಮಂದಿ ರಾಜರುಗಳಿಂದ ಸ್ವೀಕರಿಸಿ ತಂದಿದ್ದ ಕಪ್ಪಕಾಣಿಕೆಗಳ ರಾಶಿಗಳನ್ನೂ ತನ್ನ ಅರಮನೆಯಲ್ಲಿದ್ದ ಸಮಸ್ತ ವಸ್ತುಗಳನ್ನೂ, ಮತ್ತು ತನ್ನ ಕೋಶದಲ್ಲಿದ್ದ ಧನಕನಕ ರತ್ನರಾಜಿಗಳನ್ನೂ ನಿಶ್ಶೇಷವಾಗಿ ಅರ್ಥಿಗಳ ಪ್ರಯೋಜನಕ್ಕಾಗಿ ವಿನಿಯೋಗಿಸಿದನು ಸತ್ಪುರುಷರು ಆರ್ಜನೆಮಾಡುವುದು ತ್ಯಾಗಕ್ಕಾಗಿ, ಮೇಘಗಳಂತೆ ಸಾಧುಗಳ ಆದಾನವು ವಿಸರ್ಗಕ್ಕಾಗಿ ಮೇಘಗಳು ತಾವು ಆವಿಯ ರೂಪದಲ್ಲಿ ಹೀರಿದ ನೀರನ್ನು ನಿಶ್ಶೇಷವಾಗಿ ಮಳೆಯರೂಪದಲ್ಲಿ ಹಿಂದಕ್ಕೆ ಕೊಡುವಂತೆ ಸಜ್ಜನರು ಧನಸಂಗ್ರಹ ಮಾಡುವುದೇ ಪಾತ್ರವರಿತು ದಾನ ಮಾಡುವುದಕ್ಕಾಗಿ

ಸಚಿವ ಸಖನಾಗಿದ್ದ * ರಘುಚಕ್ರವರ್ತಿಯು ಯಜ್ಞಾಂತದಲ್ಲಿ ತನ್ನ ರಾಜಧಾನಿಗೆ ಬಂದಿದ್ದ ಸಾಮಂತ ರಾಜರೆಲ್ಲರಿಗೂ ಗುರುತರವಾದ ಪುರಸ್ಕಾರ ಗಳನಿತ್ತು ಗೌರವಿಸಿ, ಅವರು ಪರಾಜಯ ಹೊಂದಿದ್ದ ದುಃಖವನ್ನು ಪರಿಹಾರ ಮಾಡಿದನು ಅಲ್ಲದೆ ಅವರ ರಾಣಿವಾಸಗಳವರು ಚಿರವಿರಹಿಗಳಾಗಿದ್ದುದನ್ನು ಸ್ಮರಿಸಿ ಆ ಸಾಮಂತ ರಾಜರುಗಳೆಲ್ಲರೂ ತಮ್ಮ ತಮ್ಮ ರಾಜಧಾನಿಗಳಿಗೆ ಹಿಂದಿರುಗಬಹುದೆಂದು ಅನುಜ್ಞೆಯನ್ನಿತ್ತನು ಸಾಮಂತರೆಲ್ಲರೂ ತಮ್ಮ ಸಮ್ರಾಟನನ್ನು ಬೀಳ್ಕೊಳ್ಳುವಾಗ ಅವನ ಚರಣಯುಗಕ್ಕೆ ನಮಸ್ಕಾರ ಮಾಡಿದರು ಧ್ವಜರೇಖೆ, ಛತ್ರರೇಖೆ ಮುಂತಾದ ಚಕ್ರವರ್ತಿ ಲಕ್ಷಣಗ ಳಿಂದ ಶೋಭಿಸುತ್ತಿದ್ದ ರಘುಚರಣಗಳಿಗೆ ನಮಸ್ಕಾರ ಮಾಡುವ ಅವಕಾಶವೇ ಕೃಪಾಲಭ್ಯವೆಂದು ಅವರೆಲ್ಲರೂ ಭಾವಿಸಿದರು ಅಸಂಖ್ಯಾತ ಮಂದಿಗಳು ರಘುಚಕ್ರೇಶ್ವರನ ಪದಯುಗಳಕ್ಕೆ ವಂದನೆಮಾಡಿದುದರಿಂದ ಅವರು ಧರಿ ಸಿದ್ದ ಪುಷ್ಪಮಾಲಿಕೆಗಳಿಂದ ಉದುರಿದ ಮಕರಂದದಿಂದಲೂ ಪರಾಗದಿಂದಲೂ ಆತನ ಕಾಲಬೆರಳುಗಳು ಗೌರವರ್ಣವನ್ನಾಂತು ಶೋಭಿಸಿದುವು

---

*ಆದರ್ಶ ಪ್ರಭುಗಳು ಸಚಿವರಲ್ಲಿ ಮಿತ್ರರಂತೆ ವರ್ತಿಸಬೇಕೆಂಬುದು ರಾಜ ಧರ್ಮ ರಘುಚಕ್ರವರ್ತಿ ಮುಂತಾದ ಪುರಾಣಪುರುಷರ ಮಾತು ಹಾಗಿರಲಿ ಉದ ಯನ, ಶ್ರೀಹರ್ಷ ಮುಂತಾದವರೆಲ್ಲ ಸಚಿವರನ್ನು ಸೋದರರಂತೆಯೂ ಮಿತ್ರ ರಂತೆಯೂ ಕಾಣುತ್ತಿದುದ್ದನ್ನು ಭಾರತದ ಇತಿಹಾಸವೇ ಉದ್ಘೋಷಿಸುತ್ತದೆ ಕ್ರಿಯಾ ರೂಪದಲ್ಲಿದ್ದ ಧ್ಯೇಯಗಳೆಲ್ಲ ಮಾಯವಾದಾಗಿನಿಂದ ಭಾರತದ ಅವನತಿಯು ಪ್ರಾರಂಭವಾಯಿತು.

# ಐದನೆಯ ಪರಿಚ್ಛೇದ

## ಅಜಸ್ವಯಂವರಾಭಿಗಮನ

ಸೂರ್ಯವಂಶದ ಪ್ರಭುಗಳೆಲ್ಲರೂ ತ್ಯಾಗವೀರರು ರಘುಚಕ್ರವರ್ತಿಯಂತೂ, ತ್ಯಾಗಶೀಲತೆಯ ಪ್ರತೀಕವೇ ಆಗಿದ್ದನು ಆತನು ತನ್ನ ದಿಗ್ವಿಜಯ ಕಾಲದಲ್ಲಿ ಲಭಿಸಿದ ಧನಕನಕಾದಿ ಸುವಸ್ತುಗಳನ್ನು ಮಾತ್ರವೇ ಅಲ್ಲದ ತನ್ನಲ್ಲಿದ್ದ ಸಮಸ್ತವನ್ನೂ ವಿಶ್ವಜಿದ್ಯಜ್ಞದಲ್ಲಿ ವಿನಿಯೋಗಿಸಿದ್ದನು ಅರ್ಥರಾಶಿಗಳೆಲ್ಲ ಪ್ರಜೆಗಳಿಗೆ ನಿಶ್ಶೇಷವಾಗಿ ವಿನಿಯೋಗವಾದುವು ಅವನ ಭಂಡಾರವು ಬರಿದಾಗಿದ್ದಿತು ಆ ಸಮಯದಲ್ಲಿ ವರತಂತುಋಷಿಯ ಶಿಷ್ಯನಾದ ಕೌತ್ಸನೆಂಬ ಋಷಿಯು ಗುರುದಕ್ಷಿಣಾರ್ಥಿಯಾಗಿ ರಘುಕ್ಷಿತೀಶನಲ್ಲಿ ಧನವನ್ನು ಯಾಚಿಸಲು ಬಂದನು ಅನರ್ಘಶೀಲನಾದ ರಘುಚಕ್ರವರ್ತಿಯು ಅರಮನೆಯ ಚಿನ್ನದ ಪಾತ್ರೆಗಳೇ ಮುಂತಾದುವುಗಳನ್ನೆಲ್ಲ ಅರ್ಥಿಗಳಿಗೆ ದಾನ ಮಾಡಿದ್ದ ಕಾರಣ, ಮಣ್ಣಿನ ಪಾತ್ರೆಗಳಲ್ಲಿ ಅರ್ಘ್ಯಾದಿಗಳಿಗಾಗಿ ಪೂಜಾದ್ರವ್ಯಗಳನ್ನಿಟ್ಟುಕೊಂಡಿದ್ದನು ಶ್ರುತಪ್ರಕಾಶನಾಗಿ ತನ್ನಲ್ಲಿಗೆ ಬಂದಿದ್ದ ಅತಿಥಿಯನ್ನು ಯಶಸ್ಸಿನಿಂದ ಪ್ರಸಿದ್ಧನಾಗಿ ಅತಿಥಿಸತ್ಕಾರ ನಿರತನಾದ *ರಘುಚಕ್ರೇಶ್ವರನು ಅರ್ಘ್ಯಾದಿಗಳಿಂದ ಸತ್ಕರಿಸಲು ಮುಂದೆ ನಡೆದನು ಮಾನಧನರಲ್ಲಿ ಅಗ್ರೇಸರನಾದ ಮತ್ತು ವಿಧಿಜ್ಞನಾದ ರಘುಚಕ್ರೇಶ್ವರನು ವಿಧಿವತ್ತಾಗಿ ತಪೋಧನನಾದ ಕೌತ್ಸನನ್ನು ಅರ್ಚಿಸಿದನು

ಅನಂತರ ಅವನು ಕೌತ್ಸನನ್ನು ಉಚಿತಾಸನದಲ್ಲಿ ಕುಳ್ಳಿರಿಸಿ, ಅಂಜಲಿಬದ್ಧನಾಗಿ ''ಕುಶಾಗ್ರಬುದ್ಧಿಯಾದ ಎಲೈ ಮುನಿಯೆ! ಜನರು ಸೂರ್ಯನಿಂದ ಚೈತನ್ಯವನ್ನು ಪಡೆಯುವಂತೆ ನೀನು ಅಶೇಷ ಜ್ಞಾನವನ್ನು ಮಂತ್ರಕೃತರಾದ ಋಷಿಗಳಲ್ಲಿ ಅಗ್ರಣಿಯಾದ ನಿನ್ನ ಗುರುವಿನಿಂದ ಪಡೆದಿರುವೆಯಷ್ಟೆ ನಿನ್ನ ಗುರುವಾದ ವರತಂತು ಮಹರ್ಷಿಯು ಕುಶಲಿಯೆ? ನಿನ್ನ

*ಮೂಲದಲ್ಲಿ "ಆತಿಥೇಯಃ" ಎಂಬ ಸೊಗಸಾದ ಮಾತನ್ನು ಕವಿಯು ಉಪಯೋಗಿಸಿದ್ದಾನೆ

ಗುರುವು ಕಾಯಾ ವಾಚಾ ಮನಸಾ ತ್ರಿವಿಧ ತಪಸ್ಸನ್ನು ಬಹುಕಾಲದಿಂದಲೂ ಆಚರಿಸಿ ಶೇಖರಿಸಿದ್ದಾನೆ ಸಂಚಿತವಾಗಿರುವ ಆ ತಪೋರಾಶಿಯಿಂದ ಇಂದ್ರನಿಗೆ ಕೂಡಿ ತನ್ನ ಪದವಿಗೆಲ್ಲಿ ಸಂಚಕಾರ ಬಂದು ವರತಂತು ಮಹರ್ಷಿಯು ಅದನ್ನೆಲ್ಲಿ ಅಪಹರಿಸುವನೋ ಎಂದು ಪದೇ ಪದೇ ಶಂಕೆಯುಂಟಾಗುತ್ತಿದೆ ಉಪವಾಸ ಕೃಚ್ಛ್ರ ಚಾಂದ್ರಾಯಣಾದಿಗಳ ರೂಪದಲ್ಲಿ ದೇಹದ ತಪಸ್ಸನ್ನೂ, ವೇದಘೋಷದ ರೂಪದಲ್ಲಿ ಮಾತಿನ ತಪಸ್ಸನ್ನೂ ಆಚರಿಸಿ ಸಂಗ್ರಹಿಸುವಲ್ಲಿ ಇಂದ್ರಪ್ರೇರಿತೆಯರಾಗಿ ತಪೋಭಂಗಕ್ಕಾಗಿ ಬಂದ ಅಪ್ಸರೆಯರಿಗೆ ಶಾಪಕೊಡುವುದಕ್ಕಾಗಿ ಆ ತಪಸ್ಸಿನ ಸ್ವಲ್ಪಭಾಗವೂ ವ್ಯಯವಾಗುತ್ತಿಲ್ಲವಷ್ಟೆ? ಪಾತಿಗಳನ್ನು ಕಟ್ಟಿ ನೀರೆರೆಯುವುದೇ ಮುಂತಾದ ಕೃಷಿಕಾರ್ಯಗಳಿಂದಲೂ ಪುತ್ರನಿರ್ವಿಶೇಷಪ್ರೀತಿಯಿಂದಲೂ* ನೀವು ಪ್ರಯತ್ನ ಪೂರ್ವಕವಾಗಿ ಬೆಳೆಯಿಸಿರುವ—ನೆಳಲು ಮುಂತಾದುವುಗಳಿಂದ ನಿಮ್ಮ ಶ್ರಮಪರಿಹಾರಕ್ಕೆ ಕಾರಣವಾಗಿರುವ—ಆಶ್ರಮ ವೃಕ್ಷಗಳಿಗೆ ಬಿರುಗಾಳಿ, ಕಾಡುಗಿಚ್ಚು ಮೊದಲಾದ ಉಪಪ್ಲವಗಳಿಲ್ಲವಷ್ಟೆ? ಮುನಿಗಳಿಗೆ ದರ್ಭೆಗಳು ಅನುಷ್ಠಾನ ಸಾಧನವಾಗಿರುವ ಕಾರಣ, ಅವು ಅಗತ್ಯವಾಗಿಬೇಕು ಹಾಗೆ ಅವರಿಗೆ ಅವಶ್ಯವಾಗಿರುವ ದರ್ಭೆಯನ್ನು ಜಿಂಕೆಗಳು ತಿಂದರೂ ಅವುಗಳಲ್ಲಿ ಅವರಿಗಿರುವ ವಾತ್ಸಲ್ಯದ ದೆಸೆಯಿಂದ ಅವರು ಅವುಗಳ ಆಶೆಗೆ ಅಡ್ಡಿಯನ್ನುಂಟುಮಾಡದೆ ಅವಕಾಶ ಕೊಡುತ್ತಿದ್ದಾರೆ, ಜಿಂಕೆಯ ಮರಿಗಳಂತೂ ಅವರ ತೊಡೆಯಮೇಲೇ ನಿರಾತಂಕವಾಗಿ ಮಲಗಿರುತ್ತವೆ, ಆ ಎಳೆಯ ಜಿಂಕೆ ಮರಿಗಳ ನಾಭಿನಾಳಗಳು ಕಳಚಿ ಅವರ ತೊಡೆಗಳಮೇಲೆ ಬೀಳುತ್ತವೆ† ನಿಮ್ಮ ಆಶ್ರಮದಲ್ಲಿ ಹೀಗೆ ಮೃಗಸ್ನೇಹವನ್ನು ತೋರಿಸುತ್ತಿರುವ ಮುನಿಗಳ ವಾತ್ಸಲ್ಯದ ಪರಿಣಾಮವಾಗಿ

*ಸಾಧು ಜೀವಿಗಳಾಗಿದ್ದ ಮುನಿಗಳ ಪ್ರಕೃತಿ ಪ್ರೇಮವನ್ನು ಇದು ಬಹು ಚೆನ್ನಾಗಿ ವ್ಯಕ್ತಗೊಳಿಸುತ್ತದೆ. ದೇವದಾರು ವೃಕ್ಷವನ್ನು ಪರಶಿವನು ಮಗನಂತೆ ಭಾವಿಸಿದ್ದುದನ್ನು ಹಿಂದೆಯೇ ಕವಿಯು ವರ್ಣಿಸಿದ್ದಾನೆ

†ಮುನಿಗಳ ಪ್ರಕೃತಿ ಪ್ರೇಮವನ್ನೂ ಭೂತದಯೆಯನ್ನೂ ಕವಿಯು ಮನೋಹರವಾಗಿ ವರ್ಣಿಸಿದ್ದಾನೆ.

ಜಿಂಕೆಗಳ ಸಂತತಿಯು ವೃದ್ಧಿಯಾಗುತ್ತಿದೆಯಷ್ಟೆ? ತೀರ್ಥೋದಕಗಳು ನಿಮ್ಮ ಸ್ನಾನಪಾನಾದಿಗಳಿಗೂ, ಪಿತೃತರ್ಪಣಾದಿ ಕರ್ಮಗಳಿಗೂ ಅನುಕೂಲವಾಗಿವೆಯಷ್ಟೆ? ನೀವು ಸಂಗ್ರಹಿಸಿದ ಧಾನ್ಯಗಳಲ್ಲಿ ರಾಜಾದಾಯವಾಗಿ ತೆಗೆದಿಟ್ಟ ಷಷ್ಠಾಂಶವು ಆ ತೀರ್ಥಗಳ ತೀರದ ಮರಳಿನ ಮೇಲೆ ಬಿಡಲ್ಪಟ್ಟಿದೆಯಷ್ಟೆ? ನೀವಾರ ಮುಂತಾದ ಧಾನ್ಯಗಳಿಂದಲೇ ನಿಮಗೆ ಜೀವನ, ಅವೇ ನಿಮ್ಮ ಶರೀರಸ್ಥಿತಿ ಸಾಧನ ನಿಮ್ಮ ಆಶ್ರಮದಲ್ಲಿ ಅತಿಥಿ ಸತ್ಕಾರಕ್ಕೂ, ನಿಮ್ಮ ದೇಹಪೋಷಣೆಗೂ ಅವೇ ಆಧಾರ ಹೊಟ್ಟನ್ನೂ ಹುಲ್ಲನ್ನೂ ಮಾತ್ರವೇ ತಿನ್ನಬೇಕಾದ ನೆರೆಹೂರೆಯ ಗ್ರಾಮಗಳ ದನಗಳು ನಿಮ್ಮ ಆಶ್ರಮದ ಧಾನ್ಯಗಳನ್ನು ತಿಂದುಹಾಕಿ ನಿಮಗೆ ತೊಂದರೆಯನ್ನುಂಟುಮಾಡಿಲ್ಲವಷ್ಟೆ? ಮಹರ್ಷಿಯಿಂದ ನಿನಗೆ ಚೆನ್ನಾಗಿ ಶಿಕ್ಷಣವಾಗಿ ವಿದ್ಯಾದಾನವು ಪೂರೈಸಿತೆ? ಮಹರ್ಷಿಯು ನಿನ್ನಲ್ಲಿ ಪ್ರಸನ್ನನಾಗಿ, ನೀನು ಗೃಹಸ್ಥಾಶ್ರಮ ಸ್ವೀಕಾರ ಮಾಡಬಹುದೆಂದು ಅನುಮತಿಯನ್ನು ಕೊಟ್ಟಿದ್ದಾನೆಯೆ? ಸರ್ವರಿಗೂ ಉಪಕಾರ ಮಾಡಲು ಅವಕಾಶವಿರುವ ಶ್ರೇಷ್ಠವಾದ ಗೃಹಸ್ಥಾಶ್ರಮ ಪ್ರವೇಶಕ್ಕೆ ಇದೀಗ ನಿನಗೆ ಸಕಾಲವಾಗಿದೆ, ವಿದ್ಯಾಭ್ಯಾಸವನ್ನು ಪೂರೈಸಿದವರು ಗೃಹಸ್ಥಾಶ್ರಮ ಸ್ವೀಕಾರಮಾಡುವುದು ಉಚಿತವಾಗಿಯೇ ಇದೆ ಪೂಜ್ಯನಾದ ನಿನ್ನ ಆಗಮನ ಮಾತ್ರದಿಂದಲೇ ನನ್ನ ಮನಸ್ಸಿಗೆ ತೃಪ್ತಿಯಿಲ್ಲ ನಿನ್ನ ಆಜ್ಞೆಯೇನೆಂಬುದನ್ನು ಕೇಳಿ ಸೇವೆಯನ್ನು ಸಲ್ಲಿಸಲು ನನ್ನ ಮನಸ್ಸು ಉತ್ಸುಕವಾಗಿದೆ ನನ್ನ ಸೇವೆಯನ್ನು ಸ್ವೀಕರಿಸಿ ನನ್ನನ್ನು ತನ್ಮೂಲಕ ಗೌರವಿಸುವುದಕ್ಕಾಗಿ, ನಿನ್ನ ಗುರುವಿನ ಆಜ್ಞೆಯಂತೆ ವನದಿಂದ ಬಂದಿರುವೆಯೋ ಅಥವಾ ನೀನಾಗಿಯೇ ವನದಿಂದ ಬಂದಿರುವೆಯೋ ತಿಳಿಸು" ಎಂದು ಕೌತ್ಸಮುನಿಗೆ ವಿಜ್ಞಾಪಿಸಿದನು

ಸರ್ವತ್ಯಾಗದಿಂದ ಮಣ್ಣಿನ ಪಾತ್ರೆಗಳನ್ನು ಉಪಯೋಗಿಸುವ ಸ್ಥಿತಿಯಲ್ಲಿದ್ದ ಮಹಾನುಭಾವನಾದ ರಘುಚಕ್ರವರ್ತಿಯ ಉದಾರವಾಣಿಗಳನ್ನಾಲಿಸಿದ ಕೌತ್ಸನಿಗೆ ತನ್ನ ಕೋರಿಕೆಯಂತೆ ಗುರುದಕ್ಷಿಣಾದ್ರವ್ಯವು ದೊರೆತು ತನ್ನ ಮನೋರಥ ಸಿದ್ಧಿಯಾಗುವ ಆಶೆಯು ದುರ್ಬಲವಾಯಿತು. ಅವನು ರಘು

ಚಕ್ರವರ್ತಿಯನ್ನು ಕುರಿತು, "ಎಲೈ ರಘುಚಕ್ರವರ್ತಿಯೆ! ಆಶ್ರಮವಾಸಿಗಳಾದ ನಾವು ಸರ್ವವಿಧಗಳಲ್ಲಿಯೂ ಕುಶಲಿಗಳಾಗಿ ನಿರಾತಂಕವಾಗಿದ್ದೇವೆ ನೀನು ಪ್ರಭುವಾಗಿರುವಲ್ಲಿ ಪ್ರಜೆಗಳಿಗೆ ಅಶುಭವುಂಟಾಗುವುದು ಸಾಧ್ಯವೆ? ಸೂರ್ಯನು ಪ್ರಕಾಶಿಸುತ್ತಿರುವಲ್ಲಿ ಜನರ ಕಣ್ಣುಗಳಿಗೆ ಕತ್ತಲೆಯು ಅಡ್ಡಿಬರುವ ಬಗೆ ಹೇಗೆ? ಪೂಜ್ಯರಾದವರಲ್ಲಿ ಭಕ್ತಿಯನ್ನು ತೋರಿಸುವುದು ನಿನ್ನಲ್ಲಿ ಕುಲೋಚಿತವಾಗಿ ನೆಲೆಗೊಂಡಿರುವ ಸದ್ಗುಣ ಮಹಾನುಭಾವನಾದ ಸಾರ್ವಭೌಮನೆ! ಪಾತ್ರವರಿತು ಅರ್ಥಿಗಳಿಗೆ ದಾನಮಾಡುವುದರಲ್ಲಿ ನೀನು ನಿನ್ನ ಪೂರ್ವಜರನ್ನೆಲ್ಲ ಮೀರಿಸಿದ್ದೀಯೆ ನಾನು ಸಕಾಲದಲ್ಲಿ[1] ಬಾರದೆ, ಕಾಲವು ಅತಿಕ್ರಮಿಸಿದ ಮೇಲೆ ಅರ್ಥಿಯಾಗಿ ನಿನ್ನಲ್ಲಿ ಬಂದೆನಲ್ಲಾ-ಎಂದು ವಿಷಾದಿಸುತ್ತಿದ್ದೇನೆ ಪ್ರಭುವೆ! ನಿನ್ನ ಸರ್ವಸ್ವವನ್ನೂ ಅರ್ಹರಾದ ಅತಿಥಿಗಳಿಗೆ ಕೊಟ್ಟು ಶರೀರವೊಂದನ್ನು ಮಾತ್ರ ನಿನ್ನದಾಗಿ ಉಳಿಸಿಕೊಂಡಿದ್ದೀಯೆ ಆರಣ್ಯಕರು ಧಾನ್ಯದ ತೆನೆಯನ್ನು ತೆಗೆದುಕೊಂಡು ಹೋದಮೇಲೆ ತಾಳು ಮಾತ್ರವೇ ನಿಂತಿರುವ ನೀವಾರದ ಗಿಡದಂತೆ ತ್ಯಾಗಶೀಲನಾಗಿ ಶೋಭಿಸುತ್ತಿದ್ದೀಯೆ ಚಕ್ರೇಶ್ವರನಾಗಿದ್ದೂ ನೀನು ಅರ್ಥಿಗಳಿಗೆ ಸರ್ವವನ್ನೂ ದಾನಮಾಡಿ ವಿಶ್ವಜಿದ್ಯಜ್ಞವನ್ನು ನೆರವೇರಿಸಿ ರಿಕ್ತದಶೆಯಲ್ಲಿರುವುದು ಯುಕ್ತವಾಗಿಯೂ ಭೂಷಣಪ್ರಾಯವಾಗಿಯೂ ಇದೆ ದೇವತೆಗಳು ಕ್ರಮವಾಗಿ ಅಮೃತಪಾನ ಮಾಡಲು ಅವಕಾಶಕೊಟ್ಟುದರ ಪರಿಣಾಮವಾಗಿ ಚಂದ್ರನು ಕೃಷ್ಣಪಕ್ಷದಲ್ಲಿ ಕಲಾಕ್ಷಯದಿಂದ ಕೂಡಿರುವುದು ಮುಂದೆ ಶುಕ್ಲಪಕ್ಷದ ಕಲಾವೃದ್ಧಿಯನ್ನು ಸೂಚಿಸುತ್ತ ಶ್ಲಾಘ್ಯತರವಾಗಿಯೇ ಇರುತ್ತದೆ ತ್ಯಾಗಶೀಲನಾದ ನೀನು ಇಂದು ರಿಕ್ತದಶೆಯಲ್ಲಿದ್ದರೂ ಮತ್ತೆ ಧನಸಮೃದ್ಧಿಯ ವೈಭವದ ದಿನಗಳು ಶೀಘ್ರದಲ್ಲೇ ಬರುವುವು ಆದಕಾರಣ, ಈ ಸ್ಥಿತಿಯಲ್ಲಿರುವ ನಿನಗೆ ನಾನು ತೊಂದರೆಯನ್ನುಂಟುಮಾಡಲಾರೆ ಚಾತಕಪಕ್ಷಿಯು ಕೂಡ, ನಿಶ್ಶೇಷವಾಗಿ ನೀರನ್ನು ಕೊಟ್ಟು ಬರಿದಾಗಿರುವ ಶರತ್ಕಾಲದ ಮೇಘವನ್ನು ನೀರಿಗಾಗಿ ಯಾಚಿಸುವುದಿಲ್ಲ ಮತ್ತಾವ ಕಾರ್ಯವೂ ಇಲ್ಲದೆ ಯಥಾವ

[1] ರಘುಚಕ್ರೇಶ್ವರನ ಬಳಿಯಲ್ಲಿ ಧನವಿದ್ದಾಗ

ಕಾಶನಾಗಿರುವ ನಾನು ಮತ್ತಾವನಾದರೂ ಉದಾರಿಯ ಬಳಿಗೆ ಹೋಗಿ ಗುರು ದಕ್ಷಿಣಾದ್ರವ್ಯವನ್ನು ಪಡೆಯಲು ಪ್ರಯತ್ನಿಸುವೆನು ನಿನಗೆ ಸರ್ವದಾ ಶುಭ ವುಂಟಾಗಲಿ !" ಎಂದು ಉತ್ತರ ಹೇಳಿ ರಘುಚಕ್ರೇಶ್ವರನಿಂದ ಬೀಳ್ಕೊಂಡು ತೆರಳಲುದ್ಯುಕ್ತನಾದನು

ಹೀಗೆ ಹೊರಡಲುದ್ಯುಕ್ತನಾದ ಮಹರ್ಷಿಶಿಷ್ಯನನ್ನು ತಡೆದು ರಘು ಚಕ್ರವರ್ತಿಯು, "ಎಲೈ ವಿದ್ವನ್ಮಣಿಯೆ ! ನಿಮ್ಮ ಗುರುವಿಗೆ ಕೊಡಲಿಚ್ಛಿಸುವು ದೇನು ? ಅದರ ಪರಿಮಾಣವೆಷ್ಟು ?" ಎಂದು ಕೇಳಿದನು ವಿಧಿವತ್ತಾಗಿ ವಿಶ್ವಜಿದ್ಯಜ್ಞವನ್ನು ನೆರವೇರಿಸಿ ವಿಹಿತಾಚಾರ ಸಂಪನ್ನನಾಗಿಯೂ, ನಿಗರ್ವಿ ಯಾಗಿಯೂ, ವರ್ಣಾಶ್ರಮ ನಿಯಾಮಕನಾಗಿಯೂ ಇದ್ದ ರಘುಚಕ್ರೇಶ್ವರ ನನ್ನು ಕುರಿತು ವಿದ್ವಾಂಸನಾದ ಆ ಬ್ರಹ್ಮಚಾರಿಯು, "ವಿದ್ಯಾಭ್ಯಾಸವು ಸಮಾ ಪ್ತವಾದ ಮೇಲೆ ನಾನು ನನ್ನ ಗುರುವಾದ ವರತಂತು ಮಹರ್ಷಿಯ ಬಳಿ ಯಲ್ಲಿ ಗುರುದಕ್ಷಿಣೆಯ ವಿಚಾರವನ್ನು ವಿಜ್ಞಾಪಿಸಿದೆ ನನ್ನ ಗುರುಭಕ್ತಿ ಯಿಂದ ಸಂತುಷ್ಟನಾಗಿದ್ದ ಮಹರ್ಷಿಯು ಚಿರಕಾಲ ನಾನು ಭಕ್ತಿಯಿಂದ ನೆರವೇರಿಸಿದ್ದ ಅಸ್ಖಲಿತ ಸೇವೆಯೇ ನನ್ನ ಗುರುದಕ್ಷಿಣೆಯೆಂದು ತಿಳಿಸಿದನು ಆದರೆ ನಾನು ಸುಮ್ಮನಿರದೆ ಗುರುದಕ್ಷಿಣೆಯನ್ನು ಸ್ವೀಕರಿಸಲೇಬೇಕೆಂದು ನಿರ್ಬಂಧಗೊಳಿಸಿದೆನು. ಅದರಿಂದ ರೋಷಗೊಂಡ ಗುರುವು ನನಗೆ ಬೋಧಿ ಸಿದ್ದ ಹದಿನಾಲ್ಕು ವಿದ್ಯೆಗಳ ಸಂಖ್ಯೆಗನುಸಾರವಾಗಿ ಹದಿನಾಲ್ಕು ಕೋಟಿ ಸುವರ್ಣ ನಾಣ್ಯಗಳನ್ನು ಗುರುದಕ್ಷಿಣೆಯಾಗಿ ಸಮರ್ಪಿಸಬೇಕೆಂದು ಹೇಳಿ ದನು ನನ್ನ ದರಿದ್ರಾವಸ್ಥೆಯನ್ನು ಕುರಿತು ಚಿಂತಿಸದೆಯೇ ಆತನು ಹಾಗೆ ಆಜ್ಞಾಪಿಸಿದನು. ದರಿದ್ರನಾದ ನಾನು ಗುರುದಕ್ಷಿಣಾರ್ಥಿಯಾಗಿ ನಿನ್ನಲ್ಲಿ ಹಣವನ್ನು ಯಾಚಿಸಲು ಇಲ್ಲಿಗೆ ಬಂದೆನು ಸರ್ವವನ್ನೂ ಅರ್ಥಿಗಳಿಗೆ ಕೊಟ್ಟು ಮಣ್ಣಿನ ಅರ್ಘ್ಯಪಾತ್ರಾದಿಗಳನ್ನಿಟ್ಟುಕೊಂಡಿರುವುದನ್ನು ನೋಡಿ ಸದ್ಯದಲ್ಲಿ ನಿನ್ನಲ್ಲಿ ದ್ರವ್ಯಾನುಕೂಲತೆಯಿಲ್ಲದೆ ಕೇವಲ ಪ್ರಭುಶಬ್ದವೊಂದನ್ನು ಮಾತ್ರವೇ ನೀನು ಉಳಿಸಿಕೊಂಡಿರುವೆಯೆಂದು ನನಗೆ ತೋರಿತು. ನಾನು

ಗುರುದಕ್ಷಿಣೆಗಾಗಿ ಹಣವನ್ನು ಕೊಡಬೇಕೆಂದು ನಿನ್ನನ್ನು ಯಾಚಿಸಿ ಉಪರೋಧಗೊಳಿಸುವುದಕ್ಕೆ ನನಗೆ ಮನಸ್ಸು ಬಾರದು" ಎಂದು ತಿಳಿಸಿದನು

ವೇದವಿದರಲ್ಲಿ ಶ್ರೇಷ್ಠನಾದ ಆ ದ್ವಿಜನು ಆಡಿದ ಮಾತುಗಳನ್ನು ದ್ವಿಜರಾಜಕಾಂತಿಯುಳ್ಳ ರಘುಚಕ್ರೇಶ್ವರನು ಆಲಿಸಿ ಕೇಳಿದನು ಪಾಪವೃತ್ತಿಗಳಿಂದ ಇಂದ್ರಿಯಗಳನ್ನು ನಿವೃತ್ತಗೊಳಿಸಿ ಸಾತ್ವಿಕ ಶ್ರೇಷ್ಠನಾಗಿದ್ದ ಜಗದೇಕನಾಥನಾದ ರಘುವು ಮತ್ತೆ ಕೌತ್ಸನನ್ನು ಕುರಿತು, "ವೇದಪಾರಂಗತನಾಗಿ ಗುರುದಕ್ಷಿಣಾದ್ರವ್ಯವನ್ನು ಕೇಳಲು ರಘುವಿನ ಬಳಿಗೆ ಬಂದಿದ್ದ ಅರ್ಥಿಯೊಬ್ಬನ ಆಶೆಯು ನೆರವೇರದೆ, ಆತನು ಉದಾರಿಯನ್ನು ಹುಡುಕಿಕೊಂಡು ಹೋದನೆಂಬ ಅಪವಾದವು ಈಗ ನನಗೆ ಮೊಟ್ಟಮೊದಲನೆಯ ಸಾರಿ ಬಾರದೆ ಇರಲಿ * ಎಲೈ ಪೂಜ್ಯನೆ! ಅತಿಥಿನಿವಾಸವೆಂದು ಪ್ರಸಿದ್ಧವಾಗಿ ತ್ರೇತಾಗ್ನಿಗಳ ಪೂಜೆಯು ನಡೆಯುತ್ತಿರುವ ನನ್ನ ಅರಮನೆಯ ಅಗ್ನ್ಯಾಗಾರದಲ್ಲಿ (ತ್ರೇತಾಗ್ನಿಶಾಲೆಯಲ್ಲಿ) ಮೂರು ಅಗ್ನಿಗಳ ಜೊತೆಗೆ ನಾಲ್ಕನೆಯ ಅಗ್ನಿಯಂತೆ ಬೆಳಗುತ್ತ ಎರಡು-ಮೂರು ದಿನಗಳಕಾಲ ಇದ್ದು ಕೃಪೆಮಾಡು ಅಷ್ಟರಲ್ಲಿ ನಿನ್ನ ಗುರುದಕ್ಷಿಣಾ ದ್ರವ್ಯವನ್ನು ಒದಗಿಸುವುದಕ್ಕೆ ಪ್ರಯತ್ನಿಸುತ್ತೇನೆ"† ಎಂದು ತಿಳಿಸಿದನು ರಘುಚಕ್ರೇಶ್ವರನ ಮಾತುಗಳೆಂದಿಗೂ ಸುಳ್ಳಾಗದಿದ್ದುದನ್ನು ಚೆನ್ನಾಗಿ ಅರಿತಿದ್ದ ಕೌತ್ಸನು ಸುಪ್ರೀತನಾಗಿ ಅದಕ್ಕೆ ಸಮ್ಮತಿಸಿದನು ತನ್ನ ಚಕ್ರಾಧಿಪತ್ಯದಲ್ಲಿ ತಾನು ಆಗ್ಗೆ ಪಡೆಯಬಹುದಾಗಿದ್ದ ಧನವನ್ನೆಲ್ಲ ಸಂಗ್ರಹಿಸಿ ಅರ್ಥಿಗಳಿಗಾಗಿಯೂ ಮತ್ತು ಯಜ್ಞಾರ್ಥವಾಗಿಯೂ ವಿನಿಯೋಗ ಮಾಡಿದ್ದುದನ್ನು ಮನಗಂಡು ಕುಬೇರನಿಂದ ಧನವನ್ನು ತರಬೇಕೆಂದು ರಘುಚಕ್ರವರ್ತಿಯು ನಿರ್ಧರಿಸಿದನು

---

*ರಘುಚಕ್ರೇಶ್ವರನು ಆ ಬಗೆಯ ಅರ್ಥಿಗಳ ಅಭೀಷ್ಟವನ್ನು ಅನೇಕ ಸಾರಿ ನೆರವೇರಿಸಿದ್ದನೆಂಬುದೂ, ಹಿಂದೆಂದೂ ತನಗೆ ಸಂಭವಿಸದಿದ್ದ ಅಪಕೀರ್ತಿಯುಂಟಾದೀತೆಂದು ಅಳುಕಿ, ಸಂಭಾವಿತನಾದವನಿಗೆ ಅಪಕೀರ್ತಿಯು ಮರಣಕ್ಕಿಂತ ಹೆಚ್ಚೆಂದು ಬೆದರಿದನೆಂಬುದೂ ಈ ಮಾತುಗಳಿಂದ ವ್ಯಕ್ತವಾಗುತ್ತದೆ

†ರಘುವೆಷ್ಟು ಸುಸಂಸ್ಕೃತನೆಂಬುದೂ ಕೌತ್ಸನೆಷ್ಟು ಸಾತ್ವಿಕನಾಗಿ ತೇಜಸ್ವಿಯಾಗಿದ್ದನೆಂಬುದೂ, ಈ ಮಾತುಗಳಿಂದ ಸ್ಪಷ್ಟವಾಗುತ್ತದೆ ಗಾರ್ಹಪತ್ಯಾಗ್ನಿ, ಆಹವನೀಯಾಗ್ನಿ ಮತ್ತು ದಕ್ಷಿಣಾಗ್ನಿ—ಇವು ತ್ರೇತಾಗ್ನಿಗಳು

ಪಟ್ಟಾಭಿಷೇಕ ಕಾಲದಲ್ಲಿ ಮಹಿಮಾನ್ವಿತನಾದ ವಸಿಷ್ಠಮಹರ್ಷಿಯು ಮಂತ್ರಪೂರ್ವಕವಾಗಿ ತೀರ್ಥೋದಕ ಪ್ರೋಕ್ಷಣೆ ಮಾಡಿದ್ದುದರ ಫಲವಾಗಿ ರಘುಚಕ್ರೇಶ್ವರನ ರಥಗತಿಯು, ಆಕಾಶದಲ್ಲಿಯೂ ನೀರಿನ ಮೇಲೂ ಮತ್ತು ಬೆಟ್ಟಗಳ ಮೇಲೂ ಅಪ್ರತಿಹತವಾಗಿದ್ದಿತು ಗಾಳಿಯಿಂದ ಚಲಿಸುವ ಮೇಘದಂತೆ ಅವನ ರಥವು ಸುಗಮವಾಗಿ ಸಂಚರಿಸುವ ಸಾಮರ್ಥ್ಯವನ್ನು ಪಡೆದಿದ್ದಿತು ನವನಿಧಿಗಳ ಒಡೆಯನೂ, ಅಲಕಾಪುರ ನಿವಾಸಿಯೂ, ಯಕ್ಷೇಶ್ವರನೂ ಆದ ಕುಬೇರನನ್ನು ಕೂಡ ಧೀರಾಗ್ರಣಿಯಾದ ರಘುವು ಒಬ್ಬ ಸಾಮಂತ ರಾಜನಂತೆಯೇ ಭಾವಿಸಿ ತನ್ನ ಭುಜಬಲದಿಂದ ಗೆದ್ದು ಅವನಿಂದ ವಿಪ್ರನ ಗುರುದಕ್ಷಿಣೆಗಾಗಿ ಧನವನ್ನು ತರಲು ಉತ್ಸುಕನಾಗಿ ಮಾರನೆಯ ದಿನ ಬೆಳಗ್ಗೆ ವಿಜಯ ಪ್ರಯಾಣಮಾಡಬೇಕೆಂದು ಸಂಕಲ್ಪಿಸಿದನು ಸಕಲ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತವಾಗಿದ್ದ ತನ್ನ ರಥದಲ್ಲಿಯೇ ರಾತ್ರಿ ಪವಡಿಸಿದನು ಮಾರನೆಯ ದಿನ ಪ್ರಾತಃಕಾಲ ವಿಜಯ ಯಾತ್ರೆಯ ಸಮಯವು ಸನ್ನಿಹಿತವಾಗುತ್ತಿರುವಲ್ಲಿ, ಬರಿದಾಗಿದ್ದ ಕೋಶಗೃಹವು ಸುವರ್ಣವೃಷ್ಟಿಯಿಂದ ತುಂಬಿ ಹೋಗಿದ್ದುದನ್ನು ಕಂಡು ವಿಸ್ಮಿತರಾದ ಕೋಶಾಧಿಕಾರಿಗಳು ಪ್ರಯಾಣಾಭಿಮುಖನಾಗಿದ್ದ ತಮ್ಮ ಪ್ರಭುವಿಗೆ ಆ ಸಂಗತಿಯನ್ನು ಬಿನ್ನೈಸಿದರು ರಘುಚಕ್ರವರ್ತಿಯು ಕೋಶಗೃಹಕ್ಕೆ ತೆರಳಿ ವಜ್ರಾಯುಧದ ಪೆಟ್ಟಿನಿಂದ ಕೆಳಕ್ಕುರುಳಿದ ಮೇರುಪರ್ವತ ಶಿಖರದಂತೆ ಅಲ್ಲಿ ಬಿದ್ದಿದ್ದ ಭಾಸುರ ಹೇಮರಾಶಿಯನ್ನು ಪೂರ್ತಿಯಾಗಿ ತೆಗೆದುಕೊಂಡು ಹೋಗಬೇಕೆಂದು ಕೌತ್ಸನಿಗೆ ಬಿನ್ನೈಸಿದನು ಆದರೆ ಕೌತ್ಸನು ಅದಕ್ಕೆ ಸಮ್ಮತಿಸಲಿಲ್ಲ ತಾನು ತನ್ನ ಗುರುವಿಗೆ ಸಮರ್ಪಿಸಬೇಕಾಗಿದ್ದ ಹದಿನಾಲ್ಕು ಕೋಟಿ ದ್ರವ್ಯಕ್ಕೆ ನಾಕಾಗುವಷ್ಟು ಭಾಗವನ್ನು ಮಾತ್ರವೇ ತೆಗೆದುಕೊಳ್ಳುವುದಾಗಿ ಅವನು ಸೂಚಿಸಿದನು ರಘುವು ಅವನ್ನೊಪ್ಪದೆ, ಕೌತ್ಸನ ಗುರುದಕ್ಷಿಣಾದ್ರವ್ಯದ ವ್ಯಾಜದಿಂದಲೇ ಆ ಸುವರ್ಣ ರಾಶಿಯು ಕುಬೇರನಿಂದ ಲಭಿಸಿದ್ದುದರಿಂದ ಕೌತ್ಸನು ಅದನ್ನು ಪೂರ್ತಿಯಾಗಿ ಸ್ವೀಕರಿಸಬೇಕೆಂದನು ತನ್ನ ಗುರುವಿಗೆ ಕೂಡಬೇಕಾಗಿದ್ದ ದ್ರವ್ಯವನ್ನು ಮಾತ್ರವೇ ಬಯಸಿ ಅದಕ್ಕಿಂತ ಅಧಿಕ ಭಾಗವನ್ನು ಸ್ವೀಕರಿಸಲು ಸಮ್ಮತಿಸದ

ಅರ್ಥಿಯನ್ನೂ, ಅರ್ಥಿಯ ಅಭೀಷ್ಟಕ್ಕಿಂತಲೂ ಹೆಚ್ಚಾಗಿ ದ್ರವ್ಯವನ್ನು ಕೊಡಲಿಚ್ಛಿಸಿದ ಭೂಪತಿಯನ್ನೂ ಕಂಡು ಸಾಕೇತನಗರದ ಜನರು ವಿಸ್ಮಿತರಾಗಿ ಅವರಿಬ್ಬರೂ ಅಭಿನಂದ್ಯಸತ್ತ್ವರಾದ ಮಹಾಪುರುಷರೆಂದು ಭಾವಿಸಿ ಆನಂದಿಸಿದರು

ಅನಂತರ ನೂರಾರು ಒಂಟೆಗಳ ಮೇಲೂ ಮತ್ತು ನೂರಾರು ಆನೆಗಳ ಮೇಲೂ ದ್ರವ್ಯವನ್ನು ಹೇರಿಸಿ ಕೌತ್ಸನೊಡನೆ ಕಳುಹಿಸಲು ರಘುವು ಅಣಿ ಮಾಡಿಸಿದನು ಮಹರ್ಷಿ ಕೌತ್ಸನು ತನ್ನ ಇಷ್ಟಾರ್ಥಸಿದ್ಧಿಯಾದುದಕ್ಕಾಗಿ ಸುಪ್ರೀತನಾದನು ಮಾತಿಗೆ ಮೀರಿದ ಭಾವನೆಗಳಿಂದ ಕೂಡಿ ವಿನಯನಮ್ರನಾಗಿ ಮೌನದಿಂದ ನಿಂತಿದ್ದ ರಘುವು ತನ್ನ ಕೈಗಳನ್ನು ಸ್ಪರ್ಶಿಸುತ್ತಿರುವಲ್ಲಿ ಅವನು ಪ್ರಯಾಣಸನ್ನದ್ಧನಾಗಿ, "ರಾಜವೃತ್ತಸ್ಥಿತನಾದ† ಕ್ಷಿತೀಶ್ವರನು ಅರ್ಥಿಗಳ ಅಭೀಷ್ಟವನ್ನು ನೆರವೇರಿಸುವುದೇನೂ ಆಶ್ಚರ್ಯವಲ್ಲ ಇದು ರಾಜಧರ್ಮವನ್ನು ಅನುಷ್ಠಿಸುವ ಸಾಮಾನ್ಯರ ವಿಷಯವಾಯಿತು ನಿನ್ನ ಪ್ರಭಾವವು ಅಚಿಂತನೀಯವಾದುದು ನೀನು ಭೂಲೋಕದಿಂದ ಮಾತ್ರವೇ ಅಲ್ಲದೆ ಸ್ವರ್ಗಾದಿಲೋಕಗಳಿಂದ ಕೂಡ ಸಾಧನ ಸಂಪತ್ತನ್ನು ಪಡೆದು ಪ್ರಯೋಜನ ಹೊಂದಬಲ್ಲ ಮಹಾಮಹಿಮನಾಗಿರುವೆ ಸರ್ವಶ್ರೇಯಸ್ಸನ್ನೂ ಪಡೆದಿರುವ ನಿನಗೆ ಪುತ್ರಲಾಭವೊಂದನ್ನು ಬಿಟ್ಟು ಮತ್ತೇನನ್ನು ಕೋರಿ ಆಶೀರ್ವದಿಸಿದರೂ, ನೀನು ಈಗ ಅನುಭವಿಸುತ್ತಿರುವ ಶುಭಗಳನ್ನೇ ಕೋರಿದಂತೆ ಪುನರುಕ್ತಭೂತವಾಗುತ್ತದೆ. ಆದುದರಿಂದ ನಾನು ಮತ್ತಾವ ಶುಭವನ್ನೂ ಕೋರದೆ ಇಷ್ಟನ್ನು ಮಾತ್ರವೇ ಹೇಳುತ್ತೇನೆ "ನಿಮ್ಮ ತಂದೆಗೆ ನೀನು ಹೇಗೆ ಅನುರೂಪನೋ ಅದೇ ರೀತಿ ನಿನಗೆ ಅನುರೂಪನಾದ ಸುಪುತ್ರನನ್ನು ನೀನೂ

† ನ್ಯಾಯವಾದ ರೀತಿಯಲ್ಲಿ ಧನವನ್ನು ಆರ್ಜಿಸುವುದು, ವೃದ್ಧಿಪಡಿಸುವುದು, ಪಾಲಿಸುವುದು ಮತ್ತು ಸತ್ಪಾತ್ರನಲ್ಲಿ ದಾನಮಾಡುವುದು—ಇವು ನಾಲ್ಕೂ ಸೇರಿ ರಾಜವೃತ್ತವೆನಿಸುವುದೆಂಬುದು ಕಾಮಂದಕನ ಅಭಿಪ್ರಾಯ ("ನ್ಯಾಯೇನಾರ್ಜನಮರ್ಥಸ್ಯ ವರ್ಧನಂ ಪಾಲನಂ ತಥಾ। ಸತ್ಪಾತ್ರೇಪ್ರತಿಪತ್ತಿಶ್ಚ ರಾಜವೃತ್ತಂ ಚತುರ್ವಿಧಂ॥") ಗುರುಪೂಜೆ, ದಯೆ, ಶೌಚ, ಸತ್ಯಶೀಲತೆ, ಇಂದ್ರಿಯನಿಗ್ರಹ, ಹಿತಾಚರಣೆ –ಇವು ಆರೂ ಸೇರಿ ರಾಜವೃತ್ತವೆನಿಸುವುದೆಂಬುದು ಹೇಮಚಂದ್ರನ ಅಭಿಪ್ರಾಯ. ("ಗುರೋಃ ಪೂಜಾ ಘೃಣಾ ಶೌಚಂ ಸತ್ಯಮಿಂದ್ರಿಯ ನಿಗ್ರಹಃ। ಪ್ರವರ್ತನಂ ಹಿತಾನಾಂ ಚ ತತ್ಸರ್ವಂ ವೃತ್ತಮುಚ್ಯತೇ॥").

ಪಡೆಯುವಂತಾಗಲಿ!" ಎಂದು ಹೇಳಿ ಆಶೀರ್ವದಿಸಿದನು ಕೌತ್ಸ ಮಹರ್ಷಿಯು ಆ ರೀತಿ ರಘುವಿಗೆ ಆಶೀರ್ವಾದ ಮಾಡಿ ತನ್ನ ಗುರುವಿನ ಆಶ್ರಮಕ್ಕೆ ಪ್ರಯಾಣಮಾಡಿದನು ಜೀವಲೋಕವು ಸೂರ್ಯನಿಂದ ಚೈತನ್ಯವನ್ನು ಪಡೆಯುವಂತೆ ತೇಜಸ್ವಿಯಾದ ಆ ಮಹರ್ಷಿಯ ಆಶೀರ್ವಾದದಿಂದ ಯಥಾಕಾಲದಲ್ಲಿ ರಘುಚಕ್ರೇಶ್ವರನು ಪುತ್ರನನ್ನು ಪಡೆದನು ರಘುವಿನ ಪಟ್ಟಮಹಿಷಿಯು ಕುಮಾರ ಕಲ್ಪನಾದ ಆ ಕುಮಾರನನ್ನು ಬ್ರಾಹ್ಮೀಮುಹೂರ್ತದಲ್ಲಿ ಪಡೆದ ಕಾರಣ, ಬ್ರಹ್ಮದೇವನ ಅಂಕಿತದ ಮೇಲೆ ರಘುಚಕ್ರೇಶ್ವರನು ಅವನಿಗೆ ಅಜನೆಂದು ನಾಮಕರಣಮಾಡಿದನು ರಘುಕುಮಾರನಾದ ಅಜನು ರಘುವಿನಂತೆಯೇ ರೂಪವುಳ್ಳವನಾಗಿ, ರಘುವಿನಂತೆಯೇ ಓಜಸ್ವಿಯಾಗಿ, ರಘುವಿನಂತೆಯೇ ವೀರ್ಯವುಳ್ಳವನಾಗಿ ರಘುವಿನಂತೆಯೇ ನೈಸರ್ಗಿಕವಾದ ಉನ್ನತತ್ತ್ವವುಳ್ಳವನಾಗಿದ್ದನು ಒಂದು ದೀಪದಿಂದಹೊತ್ತಿಸಿದ ಮತ್ತೊಂದು ದೀಪದಂತೆ ಆ ಕುಮಾರನು ಸಮಸ್ತ ರೀತಿಗಳಲ್ಲಿಯೂ ರಘುವಿಗೆ ಅನುರೂಪನಾಗಿ ಅವನನ್ನೇ ಹೋಲುತ್ತಿದ್ದನು ಅಜನು ವಿಧಿವತ್ತಾಗಿ ಗುರುಕುಲವಾಸ ಮಾಡಿ ಗುರುಗಳಿಂದ ವಿದ್ಯೆಯನ್ನು ಕಲಿತನು ಯೌವನಾವಿರ್ಭಾವದಿಂದ ಅವನು ವಿಶೇಷಕಾಂತಿಯನ್ನು ಪಡೆದು ಶೋಭಿಸುತ್ತಿದ್ದನು ರಾಜ್ಯಲಕ್ಷ್ಮಿಯು ಅಜನನ್ನು ಸೇರಲು ಅಭಿಲಾಷೆಪಟ್ಟರೂ, ಉನ್ನತಚಿತ್ತಳಾದ ಕನ್ಯೆಯು ವಿವಾಹಕ್ಕೆ ತನ್ನ ತಂದೆಯ ಅನುಜ್ಞೆಯನ್ನು ಆಕಾಂಕ್ಷಿಸುವಂತೆ ಅವಳು ರಘುವಿನ ಅನುಜ್ಞೆಯನ್ನು ಆಕಾಂಕ್ಷಿಸುವಂತಿದ್ದಿತು

ವಿದರ್ಭರಾಜನಾದ ಭೋಜನು ತನ್ನ ಸೋದರಿಯಾದ ಇಂದುಮತಿಯ ಸ್ವಯಂವರಕ್ಕೆ ಅಜಕುಮಾರನನ್ನು ಕಳುಹಿಸಬೇಕೆಂಬ ಆಹ್ವಾನದೊಡನೆ ರಘು ಚಕ್ರೇಶ್ವರನ ಬಳಿಗೆ ದೂತನನ್ನು ಕಳುಹಿಸಿದನು ಅದು ಶ್ಲಾಘ್ಯ ಸಂಬಂಧವೆಂಬುದನ್ನೂ, ತನ್ನ ಪುತ್ರನಾದ ಅಜಕುಮಾರನು ವಿವಾಹಯೋಗ್ಯನಾಗಿದ್ದನೆಂಬುದನ್ನೂ ಪರಿಗಣಿಸಿ ಸಮೃದ್ಧವಾದ ಭೋಜರಾಜನ ರಾಜಧಾನಿಗೆ ಸಸೈನ್ಯನಾಗಿ ತನ್ನ ಪುತ್ರನನ್ನು ರಘುಚಕ್ರೇಶ್ವರನು ಪ್ರಯಾಣ ಮಾಡಿಸಿದನು ಮಾರ್ಗ ಮಧ್ಯದಲ್ಲಿ ಅಜಕುಮಾರನು ಅಲ್ಲಲ್ಲಿ ಬೀಡು ಬಿಟ್ಟು ತಂಗಿದೆ

ಡೆಗಳಲ್ಲಿ ರಾಜಯೋಗ್ಯವಾದ ಡೇರೆಗಳಂತಿದ್ದ ಪಟಭವನಗಳೂ, ಅವುಗಳಲ್ಲಿ ಶಯನಾದಿ ಸೌಕರ್ಯಗಳೂ ಅವನ ಬೀಡಾರಕ್ಕಾಗಿ ಏರ್ಪಟ್ಟುವು ಪರಿವಾರದವರಿಗೂ ಸೈನಿಕರಿಗೂ ಪಟಗೃಹಗಳಿದ್ದುವು ಅಲ್ಲಿ ನಾಜೂಕಾದ ಮೇಲುಕಟ್ಟುಗಳೇ ಮುಂತಾದ ಅಲಂಕಾರಗಳಿಂದ ಕೂಡಿದ ಪಟಮಂಡಪಾದಿಗಳು* ರಾಜಸದನ ಭ್ರಾಂತಿಯನ್ನುಂಟುಮಾಡುತ್ತಿದ್ದುವು ಸುತ್ತ ಮುತ್ತಲಿನ ಗ್ರಾಮಸ್ಥರು ಕಾಣಿಕೆಯಾಗಿ ಅಜಕುಮಾರನಿಗೆ ಸಮರ್ಪಿಸಲು ನಾನಾ ಸುವಸ್ತುಗಳನ್ನು ತರುತ್ತಿದ್ದರು ಅವನ ಬೀಡಾರಗಳಾಗಿದ್ದ ಪಟಭವನಗಳು ಉದ್ಯಾನಮಧ್ಯದ ವಿಹಾರಸ್ಥಾನವಾದ ಭವ್ಯಮಂದಿರಗಳೋ ಎಂಬಂತೆ ಶೋಭಿಸುತ್ತಿದ್ದುವು ಅಜನು ಮಾರ್ಗ ಮಧ್ಯದಲ್ಲಿ ಒಂದು ದಿನ ದಣಿದ ಸೈನಿಕರೊಡನೆ ನರ್ಮದಾತೀರದಲ್ಲಿ ಬೀಡು ಬಿಟ್ಟನು ದೂರ ಪ್ರಯಾಣದಿಂದ ಅವರ ಧ್ವಜಗಳು ಧೂಳಿಧೂಸರವಾಗಿದ್ದುವು

ನದಿಯ ನೀರಿನ ಮೇಲಿನಿಂದ ಬೀಸುತ್ತಿದ್ದ ಶೀಕರಾರ್ದ್ರವಾದ ಬಿರುಗಾಳಿಗೆ ಚಿರಬಿಲ್ವವೃಕ್ಷಗಳು† ಕಂಪಿಸುತ್ತಿದ್ದುವು ಆಗ ಮದಿಸಿದ ಒಂದು ಕಾಡಾನೆಯು ನದಿಯ ಪ್ರವಾಹ ಮಾರ್ಗವಾಗಿ ನುಗ್ಗಿ ಬಂದಿತು ಅದು ಘೀಳಿಡುತ್ತ ನೀರಿಗಿಳಿದು ಅಜನ ಬೀಡಾರವಿದ್ದ ತೀರದ ಕಡೆಗೆ ರಭಸದಿಂದ ಬರುತ್ತಿದ್ದಿತು ಅದರ ಮದಧಾರೆಯಿಂದ ಆಕರ್ಷಿತವಾದ ದುಂಬಿಗಳು ಅದರ ತಲೆಯ ಮೇಲೆ ಹಾರಾಡುತ್ತಿದ್ದುವು ನೀರಿನಲ್ಲಿ ಅದರ ಕಪಾಲ ಭಿತ್ತಿಯು, ನೆನೆದುದರಿಂದ ಮದೋದಕವು ಕೊಚ್ಚಿಹೋಗಿ ಮದೋದಕವು ಸುರಿಯುತ್ತಿದ್ದ ಭಾಗವು ಶುಭ್ರವಾಗಿ ಹೊಳೆಯುತ್ತಿದ್ದಿತು ಆ ಮದಗಜವು ಅಲ್ಲಿಗೆ ಸಮೀಪದಲ್ಲಿದ್ದ ಋಕ್ಷವಂತ ಪರ್ವತದ ತಪ್ಪಲಿನಲ್ಲಿ ವಪ್ರಕ್ರೀಡೆಯನ್ನಾಡಿ ಬಂದಿದ್ದುದರ ಗುರುತುಗಳು ಅದರ ಎರಡು ದಂತಗಳ ಮೇಲೂ ಕಾಣಿಸುತ್ತಿದ್ದುವು ಏಕೆಂದರೆ, ವಪ್ರಕ್ರೀಡೆಯಲ್ಲಿ ಅದು ತನ್ನ ದಂತಗಳಿಂದ ನೆಲವನ್ನು

---

* ಎಂದರೆ ಬಟ್ಟೆಯಲ್ಲಿ ರಚಿತವಾಗಿದ್ದ ಡೇರಾ ಮಂಟಪಗಳೇ ಮುಂತಾದುವು

† ಬಿಲ್ವ ವೃಕ್ಷಗಳ ಒಂದು ಜಾತಿಗೆ 'ಚಿರ ಬಿಲ್ವ ವೃಕ್ಷ'ಗಳೆಂಬ ಹೆಸರೆಂದು ವ್ಯಾಖ್ಯಾನಕಾರರು ಸೂಚಿಸಿದ್ದಾರೆ

ತೋಡಿದ್ದ ಮಣ್ಣಿನ ಗುರುತು ದಂತಗಳಿಂದ ನೀರಿನಲ್ಲಿ ಕೊಚ್ಚಿಹೋಗಿದ್ದರೂ ಅವುಗಳ ಮೇಲೆ ಕಲ್ಲಿನ ಗೀರುಗಳು ಬಿದ್ದು ನೀಲವರ್ಣವು ಬಂದಿದ್ದುದು ಮಾತ್ರ ಹಾಗೆಯೇ ಉಳಿದಿದ್ದಿತು ಅದು ಸೊಂಡಲನ್ನು ಅತಿ ಬೇಗ ಬೇಗ ಮಡಿಸಿಕೊಳ್ಳುತ್ತಲೂ ನೀಡುತ್ತಲೂ, ಬೃಂಹಿತಧ್ವನಿಮಾಡುತ್ತಲೂ, ಮಹಾ ರಭಸದಿಂದ ನದಿಯ ಅಲೆಗಳನ್ನು ಭೇದಿಸಿಕೊಂಡು ತೀರಾಭಿಮುಖವಾಗಿ ಬರುತ್ತಿದ್ದಿತು ತನ್ನ ಬಂಧನಸ್ಥಾನದ ದ್ವಾರಪ್ರಾಂತದಲ್ಲಿ ಅಡ್ಡವಾಗಿ ಬಿಗಿದಿರುವ ದೊಡ್ಡ ತೊಲೆಗಳನ್ನು ಜಗ್ಗಿಸಿ ಕಿತ್ತುಹಾಕಿ ನಿರ್ಬಂಧದಿಂದ ಪಾರಾಗಿ ಹೋಗಲುದ್ಯುಕ್ತವಾಗಿದ್ದರೆ ಎಷ್ಟು ರಭಸದಿಂದ ಅದು ಸೊಂಡಿಲನ್ನುಪಯೋಗಿಸುತ್ತಿದ್ದಿತೆ ? ಅಷ್ಟು ರಭಸದಿಂದ ಅದೇರೀತಿ ಸೊಂಡಿಲನ್ನು ಆಡಿಸುತ್ತ ವೇಗವಾಗಿ ಮುಂದೆ ನುಗ್ಗಿತು ಶೈಲ ಸದೃಶವಾಗಿದ್ದ ಆ ಕಾಡಾನೆಯು ತನ್ನ ಎದೆಗೆ ಅಂಟಿಕೊಂಡಿದ್ದ ಶೈವಲ ಮಂಜರಿಗಳ ವೃಂದವನ್ನೂ † ಸೆಳೆದುಕೊಂಡು ನುಗ್ಗಿ ಬಂದ ರಭಸಕ್ಕೆ ಕಲಕಿಹೋದ ಪ್ರವಾಹದ ನೀರುದಡಕ್ಕೆ ಬಡಿಯುತ್ತಿದ್ದಂತೆಯೇ ಆದ ಏಕಕಾಲದಲ್ಲಿ ದಡವನ್ನೇರಿ ಮುಂದೆ ನಡೆಯಿತು ಆನೆಯು ನೀರಿನಲ್ಲಿಳಿದು ಬಂದಾಗ ಕಪೋಲಗಳಿಂದ ಹರಿಯುತ್ತಿದ್ದ ಮದ ಧಾರೆಯು ಕ್ಷಣಕಾಲ ನಿಂತು ಹೋಗಿದ್ದಿತು ಆ ಒಂಟಿ ಸಲಗವು ನದೀ ತೀರದಲ್ಲಿ ಅಜಕುಮಾರನ ಸೈನ್ಯದಲ್ಲಿದ್ದ ಪಳಗಿದ ಆನೆಗಳ ಗುಂಪನ್ನು ನೋಡಿದೊಡನೆಯೇ ಅದರ ವಿಶಾಲವಾದ ಕಪೋಲಗಳಿಂದ ಮತ್ತೆ ಮದಧಾರೆಯಿಳಿಯಲು ಪ್ರಾರಂಭವಾಯಿತು ಸಪ್ತಚ್ಛದ ವೃಕ್ಷದ ಹಾಲಿನಂತೆ ಅತ್ಯಂತ ದುರ್ಗಂಧಮಯವಾಗಿದ್ದ ಅದರ ಮದಧಾರಯ ವಾಸನೆಯನ್ನು ಸಹಿಸಲಾರದೆ ಅಜನ ಆನೆಗಳು ತಲ್ಲಣಿಸಿ ತಮ್ಮ ಮಾವಟಿಗರು ಮಹತ್ತರ ಪ್ರಯತ್ನವಮಾಡಿದರೂ ನಿಲ್ಲದೆ ಹಾರಿ ಹಾರಿ ಓಡಲುಪಕ್ರಮಿಸಿದುವು ಕಾಡಾನೆಯ ಆವಾಂತರದಿಂದ ನಿಮಿಷಮಾತ್ರದಲ್ಲಿ ಬೀಡಾರದಲ್ಲೆಲ್ಲ ಅವ್ಯವಸ್ಥೆಯುಂಟಾಯಿತು ಕುದುರೆಗಳು ಹಗ್ಗಗಳನ್ನು ಕಿತ್ತುಕೊಂಡು ಪಲಾಯನ ಮಾಡಿದುವು, ಹಲವು ರಥಗಳು ನೆಲಕ್ಕುರುಳಿದುವು, ಸೈನಿಕರೇ ಮುಂತಾದವರು

† ಎಂದರೆ ಪಾಚಿಯ ಜೊಂಪಲುಗಳನ್ನೂ

ತಮ್ಮ ಸ್ತ್ರೀಯರನ್ನು ಆನೆಗೆ ಆಹುತಿಯಾಗದಂತೆ ಕಾಪಾಡಿಕೊಳ್ಳುವ ಬಗೆ ಹೇಗೆಂಬ ವ್ಯಾಕುಲದಿಂದ ತಲ್ಲಣಿಸಿದರು ರಾಜನಿಗೆ ಸೇರಿದ ಕಾಡಾನೆಯನ್ನು ಕೊಲ್ಲಕೂಡದೆಂಬ ವಿಧಿಯನ್ನರಿತಿದ್ದ * ಅಜಕುಮಾರನು ಸಾಧ್ಯವಿದ್ದಲ್ಲಿ ಆನೆಯನ್ನು ಕೊಲ್ಲದೆ ಬೆದರಿಸಿ ಓಡಿಸಬೇಕೆಂಬ ಅಭಿಲಾಷೆಯಿಂದ ತನ್ನ ಧನುಸ್ಸಿನ ಶಿಂಜಿನಿಯನ್ನು ಸ್ವಲ್ಪಮಾತ್ರವೇ ಸೆಳೆದು ಆನೆಯ ಗಂಡಸ್ಥಲಕ್ಕೆ ಗುರಿಯಿಟ್ಟು † ಉಕ್ಕಿನ ಬಾಣವೊಂದನ್ನು ಪ್ರಯೋಗಿಸಿದನು

ಆ ಮದಗಜದ ಗಂಡಸ್ಥಲಕ್ಕೆ ಬಾಣವು ತಗುಲಿದೊಡನೆಯೇ ಆನೆಯು ಮಾಯವಾಗಿ ಅದರ ಸ್ಥಳದಲ್ಲಿ ದೇದೀಪ್ಯಮಾನನಾಗಿ ಹೊಳೆಯುತ್ತಿದ್ದ ಪ್ರಭಾಮಂಡಲ ಮಧ್ಯವರ್ತಿಯಾದ ವ್ಯೋಮಚಾರಿಯೊಬ್ಬನ ತೇಜಃಪುಂಜವಾದ ಶರೀರವು ಗೋಚರಿಸಿತು ಆ ಕೌತುಕವನ್ನು ಕಂಡು [illegible]

---

*ತೀರ ಅಪಾಯವುಂಟಾದ ಅಸಾಧಾರಣ ಸಂದರ್ಭದಲ್ಲಿ ಹೊರತು ಉಳಿದ ಸಂದರ್ಭಗಳಲ್ಲಿ ಕಾಡಾನೆಗಳನ್ನು ಕೊಲ್ಲಕೂಡದೆಂದು ಈಗ ನಿಬಂಧನೆಗಳೇ ವಿಧಾಯಕವಾಗಿವೆ ಹಿಂದೆ ಕೂಡ ಅದೇ ವಿಧಿಯೇ ಏರ್ಪಟ್ಟಿದ್ದುದು ಇದರಿಂದ ವ್ಯಕ್ತವಾಗುತ್ತದೆ

ಅಜಕುಮಾರನು ತಾನೇ ಚಕ್ರವರ್ತಿಯ ಪುತ್ರನಾಗಿದ್ದೂ ಸಾಮಂತ ರಾಜ್ಯದ ವಿಧಿಯನ್ನು ಆ ಬಗೆಯ ಅಪತ್ಕಾಲದಲ್ಲಿ ಕೂಡ, ಪಾಲಿಸಲು ಸಿದ್ಧನಾಗಿದ್ದುದನ್ನು ಕಂಡು ವಿಸ್ಮಯವಾಗುತ್ತದೆ

†ಕಾಡಾನೆಯನ್ನು – ಅದರಲ್ಲಿಯೂ ಮದಿಸಿದ ಕಾಡಾನೆಯನ್ನು – ಎದುರಿಸುವುದೆಷ್ಟು ಅಪಾಯಕರವೆಂಬುದನ್ನೂ, ಅದಕ್ಕೆಷ್ಟು ಧೈರ್ಯವಿರಬೇಕೆಂಬುದನ್ನೂ ಬೇಟೆಗಾರರಿಂದಲೇ ಕೇಳಿ ತಿಳಿಯಬೇಕು ಅಜನ ಧೈರ್ಯಪರಾಕ್ರಮಗಳನ್ನು ಮನವರಿಕೆ ಮಾಡಿಕೊಡಲು ಸೊಗಸಾದ ನಿದರ್ಶನವನ್ನೇ ಕವಿಯು ಕಲ್ಪಿಸಿದ್ದಾನೆ ಆದಾಗ್ಗೂ ಇದು ಅಸಂಭವವಾಗಿಲ್ಲ. ಶತ್ರುಗಳು ಮದ್ಯಪಾನ ಮಾಡಿಸಿ ಕಳುಹಿಸಿ ಓಡಿಸಿದ ಆನೆಯು ತನ್ನ ಮೇಲೆ ಎರಗಿಬಂದಾಗಲೂ ಬುದ್ಧಗುರುವು (ಹಿಂದೆ ವೀರಶ್ರೇಷ್ಠನಾಗಿದ್ದ ಶಾಕ್ಯ ಮುನಿಯು) ಧೈರ್ಯವಾಗಿ ನಿಂತಿದ್ದುದು ಐತಿಹಾಸಿಕ ಸಂಗತಿ. ಲೋಕೋತ್ತರ ಚೇತನಗಳನ್ನು ಅಂಜುಕುಳಿಗಳಾದ ಸಾಮಾನ್ಯರ ಮಟ್ಟದಿಂದ ಅಳೆಯಬಾರದು, ಅವರನ್ನು ಸಾಮಾನ್ಯರ ಮಟ್ಟದಿಂದ ನೋಡಲೂ ಬಾರದು.

ವಿಸ್ಮಿತರಾದರು ಆನೆಯ ರೂಪವನ್ನು ಕಳೆದುಕೊಂಡು ನಿಜರೂಪದಿಂದ ರಾಜಿಸುತ್ತಿದ್ದ ಪ್ರಭಾವಶಾಲಿಯಾದ ಆ ಗಂಧರ್ವನು ತನ್ನ ಮಹಿಮೆಯಿಂದ ಪಡೆದ ಕಲ್ಪವೃಕ್ಷದ ಪುಷ್ಪಗಳನ್ನು ಅಜಕುಮಾರನ ಮೇಲೆ ವರ್ಷಿಸಿದನು ವಾಗ್ಮಿಯಾಗಿದ್ದ ಗಂಧರ್ವನು ತನ್ನ ಎದೆಯ ಮೇಲಿದ್ದ ಮುತ್ತಿನ ಹಾರದ ಕಾಂತಿಯನ್ನು ತನ್ನ ದಂತಕಾಂತಿಯಿಂದ ವೃದ್ಧಿಗೊಳಿಸುತ್ತ, "ನಾನು ಪ್ರಿಯ ದರ್ಶನನೆಂಬ ಗಂಧರ್ವರಾಜನ ಮಗನಾದ ಪ್ರಿಯಂವದ ನಾನು ನನ್ನ ಗರ್ವದ ದೆಸೆಯಿಂದ ಮತಂಗ ಮುನಿಯಲ್ಲಿ ಅಪರಾಧಮಾಡಿ ಶಾಪಗ್ರಸ್ತನಾಗಿ ಆನೆಯ ಜನ್ಮವನ್ನು ಹೊಂದಿದ್ದೆ ಮತಂಗ ಮಹರ್ಷಿಯು ನನಗೆ ಶಾಪ ಕೊಟ್ಟಾಗ ನಾನು ವಿನೀತನಾಗಿ ಆತನಿಗೆ ಪ್ರಣಾಮಮಾಡಿ ದುಃಖಿಸಿದೆ ಆಗ ಆತನು ಶಾಂತನಾದನು ಬೆಂಕಿಯಿಂದ ಅಥವಾ ಬಿಸಿಲಿನ ಬೇಗೆಯಿಂದ ನೀರು ಬೆಚ್ಚಗಾಗುವುದು ನಿಜವಾದರೂ, ಶೈತ್ಯವೇ ಅದರ ಸ್ವಭಾವ ಇತರರ ಅಪರಾಧದಿಂದ ಕುಪಿತರಾದರೂ ಮಹರ್ಷಿಗಳು ಶಾಂತ ಸ್ವಭಾವದವರು ನನ್ನ ಅಪರಾಧದಿಂದ ಕೋಪಿಸಿಕೊಂಡು ಆತನು ಶಪಿಸಿದ ನಾದರೂ ನನ್ನ ದುಃಖವನ್ನು ನೋಡಿ ಆತನು ಶಾಂತನಾದನು. ಅಲ್ಲದೆ "ಇಕ್ಷ್ವಾಕು" ವಂಶದವನಾದ ಅಜಕುಮಾರನು ತನ್ನ ಉಕ್ಕಿನ ಬಾಣದಿಂದ ನಿನ್ನ ಕುಂಭಸ್ಥಲವನ್ನು ಘಾತಿಸಿದಾಗ ನಿನಗೆ ಶಾಪವಿಮೋಚನವಾಗಿ ಮಹಿಮಾ ಯುತವಾದ ನಿನ್ನ ಗಂಧರ್ವ ಶರೀರವನ್ನು ನೀನು ಮತ್ತೆ ಪಡೆಯುವೆ' ಎಂದು ತಪೋಧನನಾದ ಮತಂಗ ಮಹರ್ಷಿಯು ನನಗೆ ತಿಳಿಸಿ ಕೃಪೆಮಾಡಿದನು. ನಾನು ಅಂದಿನಿಂದಲೂ ಮಹಾ ಸತ್ತ್ವನಾದ ನಿನ್ನ ದರ್ಶನವನ್ನು ಪಡೆಯುವ ಸುದಿನವನ್ನೇ ನಿರೀಕ್ಷಿಸುತ್ತಿದ್ದೆನು ನಿನ್ನಿಂದ ನನಗೆ ಶಾಪವಿಮೋಚನವಾಯಿತು ಇದಕ್ಕಾಗಿ ನಾನು ಪ್ರತಿಪ್ರಿಯರೂಪದಲ್ಲಿ ಪ್ರತ್ಯುಪಕಾರಮಾಡದೆ ಹೋದಲ್ಲಿ ಮಹಿಮಾನ್ವಿತವಾದ ನನ್ನ ಸ್ವಸ್ಥಾನಪ್ರಾಪ್ತಿಯು ಲಭಿಸಿ ಫಲವಿಲ್ಲ ಆದ ಕಾರಣ, ಗಂಧರ್ವದೇವತಾಸ್ತ್ರವಾದ ಸಂಮೋಹನವೆಂಬ ನನ್ನ ಅಸ್ತ್ರವನ್ನು ನಿನಗೆ ಕೊಟ್ಟು ಅದರ ಪ್ರಯೋಗ ಮಂತ್ರವನ್ನೂ ಮತ್ತು ಉಪಸಂಹಾರ ಮಂತ್ರವನ್ನೂ ನಿನಗೆ ಉಪದೇಶಿಸಲಿಚ್ಛಿಸುವೆನು ಎಲೈ ಮಿತ್ರನೆ! ಅದನ್ನು

ಸ್ವೀಕರಿಸುವವನಾಗು ಈ ಅಸ್ತ್ರವನ್ನು ಪ್ರಯೋಗಿಸಿದವನಿಗೆ ಶತ್ರು ಹಿಂಸೆಯಿಲ್ಲ+ ವಿಜಯವಂತೂ ಕೈಯಲ್ಲೇ ಇದ್ದಂತೆ ನೀನು ನನ್ನನ್ನು ಘಾತಿಸತೊಡಗಿದ್ದ ಕಾರಣದಿಂದ ಅಸ್ತ್ರವನ್ನು ಸ್ವೀಕರಿಸಲು ನೀನು ಲಜ್ಜಿಸಬೇಕಾದುದಿಲ್ಲ ಏಕೆಂದರೆ ನನ್ನನ್ನು ಪ್ರಹರಿಸುವಲ್ಲಿ ಕೂಡ, ಅದಕ್ಕೆ ಮುಂಚಿತವಾಗಿ ಒಂದೆರಡು ಕ್ಷಣಗಳಕಾಲ ನೀನು ದಯಾಪರನಾಗಿಯೇ ಇದ್ದು ಪರ್ಯಾಲೋಚಿಸಿದೆ* ಆದಕಾರಣ, ಅಸ್ತ್ರವನ್ನು ಸ್ವೀಕರಿಸಬೇಕೆಂದು ನಿನ್ನನ್ನು ಪ್ರಾರ್ಥಿಸುತ್ತಿರುವ ನನ್ನಲ್ಲಿ ನನ್ನ ಪ್ರಾರ್ಥನೆಯ ತಿರಸ್ಕಾರ ರೂಪದ ಕಾಠಿನ್ಯವನ್ನು ಈಗ ನನ್ನಲ್ಲಿ ತೋರಿಸಬೇಡ" ಎಂದು ಹೇಳಿದನು ಅಸ್ತ್ರಜ್ಞನಾದ ಅಜಕುಮಾರನು ಅದಕ್ಕೆ ಸಮ್ಮತಿಸಿ ಪವಿತ್ರವಾದ ನರ್ಮದಾನದಿಯ ಜಲದಲ್ಲಿ ಆಚಮನ ಮಾಡಿ ಉತ್ತರಾಭಿಮುಖವಾಗಿ ಕುಳಿತು ಗಂಧರ್ವರಾಜಕುಮಾರನಾದ ಪ್ರಿಯಂವದನಿಂದ ಮಂತ್ರೋಪದೇಶವನ್ನು ಪಡೆದು ಅಸ್ತ್ರವನ್ನು ಸ್ವೀಕರಿಸಿದನು

ಹೀಗೆ ಮಾರ್ಗಮಧ್ಯದಲ್ಲಿ ದೈವಯೋಗದಿಂದ ಅವರಿಬ್ಬರಿಗೂ ಅಚಿಂತ್ಯಹೇತುವಾದ ಸಖ್ಯವುಂಟಾಯಿತು ಆ ಬಳಿಕ ಪ್ರಿಯಂವದನು ಚೈತ್ರರಥವೆಂಬ ಕುಬೇರೋದ್ಯಾನ ಪ್ರದೇಶಕ್ಕೆ ತೆರಳಿದನು ಅಜಕುಮಾರನು ತನ್ನ ಸೈನ್ಯದೊಡನೆ ನರ್ಮದಾನದಿಯನ್ನು ದಾಟಿ ರಾಜ್ಯಾಡಳಿತವು ವಿಚಕ್ಷಣೆಯಿಂದ ಶ್ರೇಷ್ಠರೀತಿಯಲ್ಲಿ ನಡೆಯುತ್ತಿದ್ದ ರಮ್ಯವಾದ ವಿದರ್ಭದೇಶಕ್ಕೆ ಪ್ರಯಾಣ ಮಾಡಿದನು ಅವನು ರಾಜಧಾನಿಯ ಸಮೀಪಕ್ಕೆ ಬಂದೊಡನೆಯೇ ಭೋಜರಾಜನು—ಚಂದ್ರನನ್ನು ಕಂಡ ಸಮುದ್ರವು ವೀಚಿ ಮಾಲೆಗಳಿಂದ ಉಬ್ಬ

+ಶತ್ರುಗಳಲ್ಲಿ ಕೂಡ ಅನವಶ್ಯವಾಗಿ ಹಿಂಸಾವೃತ್ತಿಯನ್ನು ತೋರಿಸದೆ ಅಹಿಂಸಾವೃತ್ತಿಯನ್ನು ಅಗತ್ಯವಾಗಿ ಅವಲಂಬಿಸಬೇಕೆಂಬುದನ್ನು ಕಾಳಿದಾಸ ಮಹಾಕವಿಯು ತನ್ನದೇ ಆದೊಂದು ವೈಶಿಷ್ಟ್ಯದಿಂದ ಕಾವ್ಯಧ್ವನಿಯನ್ನಿಟ್ಟು ಇಲ್ಲಿ ಸೂಚಿಸಿದ್ದಾನೆ ಆವನು ಪ್ರತಿಪಾದಿಸಿರುವ ಉದಾತ್ತ ತತ್ತ್ವವು ಇಂದಿನ ಜಗತ್ತಿಗೆ ಅತ್ಯವಶ್ಯವಾದ ಸಂದೇಶವಾಗಿದೆ ಆದರೆ ಹಿಂಸಾವೃತ್ತಿಯೇ ಪ್ರಧಾನವಾಗಿ ವಿಜೃಂಭಿಸುತ್ತಿರುವ ಇಂದಿನ ಪಾಶ್ಚಾತ್ಯ ಸಮಾಜಕ್ಕೆ ಇದನ್ನು ಕೇಳಲು ಕಿವಿಯಿದೆಯೆ?

*ತನ್ನ ಪ್ರಾಣಕ್ಕೇ ಸಂಚಕಾರಬಂದಿದ್ದ ಅಪಾಯ ಕಾಲದಲ್ಲಿ ಕೂಡ ಒಂದೆರಡು ಕ್ಷಣಗಳಕಾಲ ದಯಾಪರನಾಗಿದ್ದು ಪರ್ಯಾಲೋಚಿಸಿ, ಸಾಧ್ಯವಾದರೆ, ಆ ಮದಗಜವನ್ನು ಕೊಲ್ಲದೆಯೇ ಬಾಣಾಘಾತದಿಂದ ಬೆದರಿಸಿ ಓಡಿಸಬೇಕೆಂದು ಉದ್ದೇಶಿಸಿದುದರಿಂದ ಅಜನ ಕರುಣಾರ್ದ್ರಸ್ವಭಾವವು ವ್ಯಕ್ತವಾಗುತ್ತದೆ

ವಂತೆ—ಸಂತೋಷದಿಂದ ಅವನನ್ನು ಸ್ವಾಗತಿಸಲು ಅಲ್ಲಿಗೆ ಹೋದನು. ಭೋಜರಾಜನು ಅಜಕುಮಾರನನ್ನು ಸಂಭ್ರಮದಿಂದ ಸ್ವಾಗತಿಸಿ, ಸೇವಾ ಧರ್ಮದಿಂದ ತಾನೇ ಮುಂದೆ ನಡೆಯುತ್ತ ನಮ್ರತೆಯಿಂದ ಪುರಪ್ರವೇಶ ಮಾಡಿಸಿದನು ಅಷ್ಟೇ ಅಲ್ಲ ತನ್ನ ಸಂಪತ್ತನ್ನು ಅಜಕುಮಾರನಿಗೆ ಕಾಣಿಕೆ ಯಾಗಿ ಸಮರ್ಪಿಸಿದನು. ಅಲ್ಲದೆ, ಜನರೆಲ್ಲರೂ ವಿದರ್ಭೇಶ್ವರನಾದ ಭೋಜ ರಾಜನೇ ಅತಿಥಿಯೆಂದೂ, ಅಜಕುಮಾರನೇ ವಿದರ್ಭೇಶ್ವರನೆಂದೂ ತಿಳಿದು ಕೊಳ್ಳುವಷ್ಟು ನಾಟ್ಟಿನ ವಿನೀತಭಾವದಿಂದಲೂ ಗೌರವದಿಂದಲೂ ಭೋಜ ರಾಜನು ಅವನನ್ನು ಉಪಚರಿಸಿ ನೋಡಿಕೊಂಡನು ಭೋಜರಾಜನ ಅಧಿ ಕಾರಿಗಳು ಅಜಕುಮಾರನಿಗೆ ರಮ್ಯವಾದ ನೂತನ ರಾಜಭವನವನ್ನು ತೋರಿಸಿ ವಿಶೇಷ ಗೌರವದಿಂದ ಅವನನ್ನು ಅಲ್ಲಿಗೆ ಕರೆದೊಯ್ದರು ಆ ರಾಜಭವನದ ಪೂರ್ವಾಭಿಮುಖವಾದ ಮಹಾದ್ವಾರದ ಮುಂದೆ ವೇದಿಯ ಮೇಲೆ ಅವನ ಗೌರವಾರ್ಥವಾಗಿ ಪೂರ್ಣಕುಂಭವು ಶೋಭಿಸುತ್ತಿದ್ದಿತು ರಘುವಿನಂತೆಯೇ ಇದ್ದ ಅಜಕುಮಾರನು ಆ ರಾಜಭವನದಲ್ಲಿ ಮದನನು ಯೌವನ ದಶೆಯಲ್ಲಿ ನೆಲಸಿದಂತೆ ಮಂಡಿಸಿದನು ಆ ನಗರದಲ್ಲಿ ಇಂದುಮತಿಯ ಸ್ವಯಂವರ ಕ್ಕಾಗಿ ಒಟ್ಟು ರಾಜಲೋಕವೇ ಬಂದು ನೆರೆದಿದ್ದಿತು ಕಮನೀಯಳಾದ ಆ ಕನ್ಯಾಲಲಾಮಳನ್ನು ಪಡೆಯಬೇಕೆಂಬ ತೀವ್ರಾಭಿಲಾಷೆಯಿಂದಿದ್ದ ಅಜ ಕುಮಾರನಿಗೆ ಆ ರಾತ್ರಿ ಬಹಳ ಹೊತ್ತಿನ ಮೇಲೆ ನಿದ್ರೆ ಬಂದಿತು ಪತಿಯ ರಹಸ್ಯವನ್ನು ಭೇದಿಸಲಿಚ್ಛಿಸುವ ಪ್ರಿಯಪತ್ನಿಗೆ ಬಹಳ ತಡವಾಗಿ ನಿದ್ರೆಹತ್ತುವಂತೆ, ಅವನಿಗೂ ಬಹಳ ಹೊತ್ತಿನ ಮೇಲೆ ನಿದ್ರೆ ಹತ್ತಿತು ಮಗ್ಗಲು ಹಾಸಿಗೆಯ ಮೇಲೆ ಹೊರಳಿದಾಗ ಉಂಟಾದ ಘರ್ಷಣದಿಂದ ಅವನ ಅಂಗರಾಗವು ಸ್ವಲ್ಪಮಟ್ಟಿಗೆ ಮಸಕಾಯಿತು ಸೂತಪುತ್ರರಾದ ಮತ್ತು ಅವನ ಸಮವಯಸ್ಕರಾದ ವೈತಾಳಿಕರು ವಿದ್ವಾಂಸನಾದ ಅವನನ್ನು ಉಷಃ ಕಾಲಕ್ಕೆ ಸರಿಯಾಗಿ ಪ್ರಭಾತಕಾಲದ ಸ್ತುತಿಪಾಠಗಳಿಂದ ಎಚ್ಚರಿಸಿದರು ಅವರು "ಮೇಧಾವಿಶ್ರೇಷ್ಠನೆ! ರಾತ್ರಿಯು ಕಳೆದುಹೋಯಿತು ಇನ್ನು ಹಾಸಿಗೆಯನ್ನು ಬಿಟ್ಟು ಏಳು ಬ್ರಹ್ಮನು ಪ್ರಪಂಚದ ಆಡಳಿತದ ಭಾರ

ವನ್ನು ಎರಡು ಭಾಗಗಳಾಗಿ ವಿಭಾಗಿಸಿದನು ಅವುಗಳಲ್ಲೊಂದನ್ನು ನಿನ್ನ ತಂದೆಯಾದ ರಘುಚಕ್ರೇಶ್ವರನು ನಿದ್ರೆಯನ್ನೂ ತೊರೆದು ನಿರ್ವಹಿಸುತ್ತಿದ್ದಾನೆ ಮತ್ತೊಂದು ನಿನ್ನನ್ನೇ ಅವಲಂಬಿಸಿದೆ ಆದಕಾರಣ ನೀನೂ ನಿದ್ರೆಯನ್ನು ಬಿಟ್ಟು ಏಳು ಕಮಲಗಳು ಅರಳುವ ಕಾಲವು ಸನ್ನಿಹಿತವಾಗಿದೆ ನೀನು ಕಣ್ಣುಗಳನ್ನು ತೆರೆದು ಸ್ನೇಹಮಯವಾಗಿ ಚಲಿಸುತ್ತಿರುವ ಕರಿಯ ಗುಡ್ಡೆಗಳಿಂದ ಕೂಡಿದ ನಿನ್ನ ಕಣ್ಣುಗಳೂ, ಮನೋಹರವಾಗಿ ಚಲಿಸುವ ತುಂಬಿಯಿಂದ ಕೂಡಿದ ಕಮಲಪುಷ್ಪವೂ ಅನ್ಯೋನ್ಯ ಸಾದೃಶ್ಯವನ್ನು ಪಡೆಯುವಂತೆ ಮಾಡು ತರುಣಾರುಣ ಪಲ್ಲವಗಳ ತಾಮ್ರಗರ್ಭವನ್ನು ಸೇರಿ ತೊಳಗುತ್ತಿರುವ ಮಂಜಿನ ಹನಿಗಳು ಮುಕ್ತಾಹಾರದ ತೊಳೆದ ಮುತ್ತುಗಳಂತೆ ಶುಭ್ರವಾಗಿವೆ ಅವುಗಳು ತೊಳಗುವುದನ್ನು ನೋಡಿದರೆ ನಿನ್ನ ಅಧರೋಷ್ಠಗಳಲ್ಲಿ ಲೀಲಾಸ್ಮಿತವು ಮಿನುಗುತ್ತಿರುವಾಗಿನ ನಿನ್ನದಂತ ಕಾಂತಿಯಂತೆ ತೋರುತ್ತದೆ ತೇಜೋನಿಧಿಯಾದ ಸೂರ್ಯನು ಉದಯಿಸುವುದಕ್ಕೆ ಮುಂಚಿತವಾಗಿ ಅರುಣನೇ ಅಂಧಕಾರವನ್ನು ಚದುರಿಸಿ ಅಟ್ಟಿಬಿಟ್ಟಿದ್ದಾನೆ ಎಲೈ ವೀರನೆ! ರಣಶಿರಸ್ಸಿನಲ್ಲಿ ನೀನು ನಿನ್ನ ಸೈನಿಕರೊಡನೆ ಮುಂದೆ ಹೊರಡುತ್ತಿರುವಲ್ಲಿ ನಿಮ್ಮ ತಂದೆಯು ಅವರನ್ನು ಸೋಲಿಸಬೇಕಾದ ಪ್ರಸಂಗ ಬರುತ್ತದೇನು? ನಿನ್ನ ಸೈನ್ಯದಲ್ಲಿರುವ ಆನೆಗಳು ನಿದ್ರೆಯಿಂದ ಎಚ್ಚರಗೊಂಡು ಅವುಗಳನ್ನು ಬಂಧಿಸಿರುವ ಕಬ್ಬಿಣದ ಸರಪಳಿಗಳ ಶೃಂಖಲೆಗಳ ಶಬ್ದದೊಡನೆ ಮೇಲಕ್ಕೆದ್ದು ನಿಲ್ಲುತ್ತಿವೆ ಮೊಗ್ಗುಗಳಂತಿರುವ ಅವುಗಳ ದಂತಗಳು ತರುಣಾರುಣರಾಗ ಸಂಬಂಧದಿಂದ ಕೆಂಪಗೆ ಕಾಣುತ್ತಿವೆ ಅವುಗಳನ್ನು ನೋಡಿದರೆ ಗೈರಿಕಧಾತುವಿನ ಸಂಪರ್ಕದಿಂದ ದಂತಗಳು ಕೆಂಪು ಛಾಯೆಯನ್ನು ತಳೆದಿರುವಂತೆ ತೋರುತ್ತಿದೆ ದೊಡ್ಡ ದೊಡ್ಡ ಪಟಗೃಹಗಳಲ್ಲಿ ಕಟ್ಟಿರುವ ನಿನ್ನ ಸೈನ್ಯದ ಪಾರಸೀಕ ತುರಗಗಳು ನಿದ್ರೆಯಿಂದ ಎಚ್ಚರಗೊಂಡು ಅವುಗಳ ಮುಂದೆ ಇಡಲ್ಪಟ್ಟಿರುವ ಸೈಂಧವ ಲವಣದ ಶಲಾಕಗಳನ್ನು ಆಶೆಯಿಂದ ನೆಕ್ಕುತ್ತಿವೆ ನಿನ್ನೆಯ ದಿನ ಪೂಜೆಯಲ್ಲಿ ಉಪಯೋಗಿಸಿದ್ದ ಮಾಲೆಗಳ ಪುಷ್ಪಗಳು ಬಾಡಿಹೋಗಿ ಕುಂದಿರುವುದರಿಂದ ಅವು ದೂರದೂರಕ್ಕಿರುವಂತೆ ತೋರುತ್ತವೆ.

ರಾತ್ರಿಯು ಕಳೆದು ಬೆಳಕು ಹರಿಯುತ್ತಿರುವುದರಿಂದ, ದೊಡ್ಡ ದೊಡ್ಡ ದೀಪಗಳು ಕೂಡ ಮಂಕಾಗಿವೆ ನೀನು ಪಂಜರದಲ್ಲಿಟ್ಟುಕೊಂಡಿರುವ ಮಂಜುಳ ಧ್ವನಿಯ ಶುಕವು ನಿನ್ನನ್ನು ಎಚ್ಚರಗೊಳಿಸುವುದಕ್ಕಾಗಿ ನಾವು ಆಡುತ್ತಿರುವ ಮಾತುಗಳನ್ನೇ ತಾನೂ ಆಡುತ್ತಿದೆ" ಎಂದು ಹೇಳಿದರು ಸೂದಿಮಾಗಧರ ಈ ಮಾತುಗಳನ್ನು ಕೇಳಿ ಅಜಕುಮಾರನು ತಟಕ್ಕನೆ ಎಚ್ಚರಗೊಂಡನು ಗಂಗಾತೀರದ ಮರಳಿನ ಮೇಲೆ ನಿದ್ರಿಸುತ್ತ ಮಲಗಿದ ಸುಪ್ರತೀಕವೆಂಬ ಸುರಗಜವು ಮದಿಸಿದ ರಾಜಹಂಸಗಳ ಮಧುರ ಧ್ವನಿಯಿಂದ ಎಚ್ಚರಗೊಂಡು ಮೇಲಕ್ಕೇಳುವಂತೆ, ಆತನೂ ಅವರ ಮಾತುಗಳಿಂದ ಎಚ್ಚರಗೊಂಡು ಹಾಸಿಗೆಯನ್ನು ಬಿಟ್ಟು ಎದ್ದುನಿಂತನು ಅನಂತರ ಅವನು ಪ್ರಾತಃಕಾಲೋಚಿತವಾದ ಶಾಸ್ತ್ರವಿಧಿಗಳನ್ನು ನೆರವೇರಿಸಿ, ಕುಶಲರಾದ ಪ್ರಸಾಧನದಕ್ಷರಿಂದ ಸ್ವಯಂವರೋಚಿತವಾದ ಅಲಂಕಾರಮಾಡಿಸಿಕೊಂಡು ಸ್ವಯಂವರ ಮಂಟಪದಲ್ಲಿದ್ದ ರಾಜಸಮೂಹಕ್ಕೆ ಸೇರಲು ತನ್ನ ಬೀಡಾರದಿಂದ ಹೊರಟನು

# ಆರನೆಯ ಪರಿಚ್ಛೇದ

## ಇಂದುಮತೀ ಸ್ವಯಂವರ

ಅಜಕುಮಾರನು ಸ್ವಯಂವರ ಮಂಟಪಕ್ಕೆ ಹೋಗಿ ಪರ್ಯಂಕಗಳ ಮೇಲಿದ್ದ ಸಿಂಹಾಸನಗಳಲ್ಲಿ ಮಂಡಿಸಿದ್ದ ರಾಜರುಗಳನ್ನು ನೋಡಿದನು ಅವರು ಮನೋಹರವಾಗಿ ಅಲಂಕೃತರಾಗಿ ವೈಮಾನಿಕರಾದ ದೇವತೆಗಳಂತೆ ಶೋಭಿಸುತ್ತಿದ್ದರು ರತಿದೇವಿಯ ಪ್ರಾರ್ಥನೆಯನ್ನು ಲಾಲಿಸಿ ಮಹೇಶ್ವರನು ಅಂಗ ಸೌಭಾಗ್ಯನನ್ನು ಕರುಣಿಸಿದ್ದ ಕಂದರ್ಪನಂತೆ ಕಂಗೊಳಿಸುತ್ತಿದ್ದ ಅಜ ಕುಮಾರನನ್ನು ನೋಡಿದೊಡನೆಯೇ ಅಲ್ಲಿದ್ದ ರಾಜರುಗಳೆಲ್ಲರೂ ಇಂದುಮತಿಯು ಅವನನ್ನು ಬಿಟ್ಟು ತಮ್ಮೆಲ್ಲಾರನ್ನೂ ವರಿಸಲಾರಳೆಂದು ನಿರಾಶೆಹೊಂದಿದರು ಅಜಕುಮಾರನು ವಿದರ್ಭರಾಜನಾದ ಭೋಜನು ತೋರಿಸಿದ ಸೋಪಾನ ಮಾರ್ಗವಾಗಿ ಪರ್ಯಂಕವನ್ನೇರಿ ಅದರ ಮೇಲೆ ಎತ್ತರವಾಗಿದ್ದ ಸಿಂಹಾಸನದಲ್ಲಿ ಮಂಡಿಸಿದನು ಅದನ್ನು ನೋಡಿದರೆ ಸಿಂಹಶಾಬವು ಮೆಟ್ಟಲುಗಳಂತಿರುವ ಶಿಲಾವಿಭಂಗಗಳ ಮಾರ್ಗವಾಗಿ ಶೈಲಾಗ್ರವನ್ನೇರಿದಂತೆ ತೋರುತ್ತಿದ್ದಿತು ವಿವಿಧ ವರ್ಣರಂಜಿತವಾದ ರತ್ನಕಂಬಳಿಯ ಮೆತ್ತೆಯಿಂದ ಕೂಡಿದ್ದ ರತ್ನಖಚಿತವಾದ ಸಿಂಹಾಸನದಲ್ಲಿ ಮಂಡಿಸಿದ್ದ ಅಜಕುಮಾರನು ನವಿಲಿನ ಮೇಲೆ ಕುಳಿತ ದೇವಸೇನಾನಿಯಾದ ಕುಮಾರಸ್ವಾಮಿಯನ್ನು ಹೋಲುತ್ತಿದ್ದನು ದೇದೀಪ್ಯಮಾನವಾಗಿ ತೊಳಗುತ್ತಿದ್ದ ವಸ್ತ್ರಾಭರಣಗಳಿಂದ ಅಲಂಕೃತರಾಗಿ ರತ್ನಖಚಿತವಾದ ಸಿಂಹಾಸನಗಳಲ್ಲಿ ಶೋಭಿಸುತ್ತಿದ್ದ ರಾಜರ ಪರಂಪರೆಯಲ್ಲಿ ಬೆಳಗುತ್ತಿದ್ದ ಲಕ್ಷ್ಮಿಯು ಸಹಸ್ರಧಾ ವಿಭಕ್ತಳಾಗಿ ಕಣ್ಣುಗಳು ಕೋರೈಸುವಷ್ಟು ಪ್ರಕಾಶಮಾನಳಾಗಿದ್ದಂತೆಯೂ ಮತ್ತು ಮೇಘಗಳ ಪಂಕ್ತಿಯನ್ನೆಲ್ಲ ವ್ಯಾಪಿಸಿದ ಮಿಂಚಿನಂತೆ ದುರ್ನಿರೀಕ್ಷ್ಯಳಾಗಿದ್ದಂತೆಯೂ ತೋರುತ್ತಿದ್ದಿತು ವಿಧವಿಧವಾದ ವೇಷಭೂಷಣಗಳಿಂದ ಅಲಂಕೃತರಾಗಿ ಸಿಂಹಾಸನಗಳಲ್ಲಿ ಮಂಡಿಸಿದ್ದ ರಾಜರುಗಳ ಮತ್ತು ರಾಜಕುಮಾರರುಗಳ ಮಧ್ಯದಲ್ಲಿ ರಘುಸೂನುವಾದ ಅಜಕುಮಾರನೇ ಅತ್ಯಂತ ತೇಜಸ್ವಿಯಾಗಿ ಕಲ್ಪವೃಕ್ಷಗಳ ಮಧ್ಯದ ಪಾರಿಜಾತವೃಕ್ಷದಂತೆ ರಾರಾಜಿಸುತ್ತಿದ್ದನು ಪುರ

ಜನರ ಕಣ್ಣುಗಳೆಲ್ಲ ಎಲ್ಲ ರಾಜರನ್ನೂ ಬಿಟ್ಟು ಅಜಕುಮಾರನಲ್ಲೇ ನೆಲಸಿದ್ದುವು ಪುಷ್ಪ ವೃಕ್ಷಗಳನ್ನೆಲ್ಲ ಬಿಟ್ಟು ಮದಿಸಿದ ಕಾಡಾನೆಯ ಮದ ಜಲದ ವಾಸನೆಯಿಂದ ಆಕರ್ಷಿತವಾಗಿ ಅದರ ಕಡೆಗೆ ನುಗ್ಗುವ ದುಂಬಿಗಳಂತೆ ಪುರಜನರ ಕಣ್ಣುಗಳೂ ಅಜಕುಮಾರನನ್ನೇ ನೋಡುತ್ತ ಅವನಲ್ಲೇ ನೆಲಸಿದ್ದುವು ಸ್ತುತಿಪಾಠಕರಾದ ವಂದಿಗಳು ಅಲ್ಲಿ ಮೂಡಿಸಿದ್ದ ಸೂರ್ಯವಂಶದ ಅರಸರನ್ನು ಸ್ತುತಿಸುತ್ತಿದ್ದರು ಅಗರು ಮುಂತಾದ ಧೂಪ ಸಾಮಗ್ರಿಗಳ ಸುವಾಸನೆಯ ಹೊಗೆಯು ಪತಾಕೆಗಳಿಗಿಂತಲೂ ಮೇಲಕ್ಕೆ ಹೋಗುತ್ತಿದ್ದಿತು ಸ್ವಯಂವರ ಮಂಟಪದಲ್ಲಿ ಊದುತ್ತಿದ್ದ ಶಂಖಗಳ ಧ್ವನಿಯು ಮೇಘಗಳ ಗುಡುಗುಗಳ ಧ್ವನಿಯೆಂದು ಭ್ರಮಿಸಿ ನಗರ ಪ್ರಾಂತದ ಉಪವನದಲ್ಲಿದ್ದ ನವಿಲುಗಳು ನೃತ್ಯಮಾಡಲಾರಂಭಿಸಿದ್ದುವು ಮಂಗಳ ವಾದ್ಯಗಳ ಮೊಳಗು ದಿಗಂತಗಳನ್ನು ವ್ಯಾಪಿಸಿತು ಸ್ವಯಂವರೋಚಿತವಾದ ವೇಷಭೂಷಣಗಳನ್ನು ಧರಿಸಿದ್ದ ಇಂದುಮತಿಯು ಶಿಬಿಕೆಯಲ್ಲಿ* ಕುಳಿತು ಪರಿವಾರ ಸಮೇತಳಾಗಿ ರಾಜರುಗಳು ಸಿಂಹಾಸನಗಳಲ್ಲಿ ಕುಳಿತಿದ್ದ ಪರ್ಯಂಕಗಳ ಮಧ್ಯದ ರಾಜ ಮಾರ್ಗದಲ್ಲಿ ಬಂದಳು ವಿಧಾತನ ವಿಶೇಷ ಸೃಷ್ಟಿಯಾದ ಕನ್ಯಾರೂಪವೋ ಎಂಬಂತಿದ್ದ ಇಂದುಮತಿಯಲ್ಲಿ ನೂರಾರು ನೇತ್ರಗಳ ದೃಷ್ಟಿಯು ನೆಲಸಿ ನಿಂತಿತು.

ಸ್ವಯಂವರ ಸಭೆಯಲ್ಲಿದ್ದ ರಾಜರುಗಳೂ ಮತ್ತು ರಾಜಕುಮಾರರೂ ರೂಪರಾಶಿಯಾಗಿ ವಿಧಾತನ ಸೃಷ್ಟಿವಿಶೇಷದಂತಿದ್ದ ಇಂದುಮತಿಯನ್ನು ನೋಡಿದಾಗ ಅವರ ದೇಹಗಳೇನೋ ಸಿಂಹಾಸನಗಳ ಮೇಲಿದ್ದುವು ಆದರೆ ಅವರ ಅಂತಃಕರಣಗಳು ಕುಸಿದುಬಿದ್ದು, ಅವರು ತಮ್ಮ ದೇಹಗಳ ಮೇಲಿನ ಸ್ಮೃತಿಯನ್ನೇ ಕಳೆದುಕೊಂಡಿದ್ದರು ಇಂದುಮತಿಯ ರೂಪದಿಂದ ಮುಗ್ಧರಾಗಿ ಅವಳನ್ನು ವಿವಾಹಮಾಡಿಕೊಳ್ಳಬೇಕೆಂದು ಅವರೆಲ್ಲರಿಗೂ ಅಭಿಲಾಷೆಯುಂಟಾಯಿತು ತಮ್ಮ ಮನೋರಥವನ್ನು ಸೂಚಿಸಲು ಅವರು ಮಾಡಿದ ವಿವಿಧ ಶೃಂಗಾರ ಚೇಷ್ಟೆಗಳು ವೈವಿಧ್ಯದಿಂದ ಕೂಡಿ ವೃಕ್ಷಗಳ ಪಲ್ಲವ ಸಂಪತ್ತಿ

* ಪಲ್ಲಕ್ಕಿಯಲ್ಲಿ.

ನಂತಿದ್ದುವು. ರಾಜನೊಬ್ಬನು ತನ್ನ ಎರಡು ಕೈಗಳಿಂದಲೂ ಲೀಲಾರವಿಂದ ನಾಳವನ್ನು ಹಿಡಿದುಕೊಂಡು ಆ ಕಮಲಪತ್ರಗಳಿಂದ ದುಂಬಿಗೆ ಪೆಟ್ಟುತಗಲು ವಂತೆಯೂ, ಪರಾಗದಿಂದ ಕಮಲಪುಷ್ಪದಲ್ಲಿ ಪರಿವೇಷವುಂಟಾಗುವಂತೆಯೂ ರಭಸದಿಂದ ತಿರುಗಿಸಲಾರಂಭಿಸಿದನು. ಇಂದುಮತಿಯು ತನ್ನನ್ನು ವರಿಸು ವುದಾದರೆ ಆವಳು ಕೈಯಲ್ಲಿ ಹಿಡಿದ ಲೀಲಾರವಿಂದದಂತೆ ತನ್ನನ್ನು ಆಡಿಸ ಬಹುದೆಂದೂ, ಅವಳು ಹೇಳಿದಂತೆ ತಾನು ಕೇಳತಕ್ಕವನೆಂದೂ ಸೂಚಿಸು ವುದು ಅವನ ಆಶಯ ಕ್ರಿಯನ್ನು ತಿರುಗಿಸುತ್ತಿದ್ದ ಆ ರಾಜನು ಅವಲಕ್ಷಣದ ಚೇಷ್ಟೆಯುವನೆಂದು ಭಾವಿಸಿ ಇಂದುಮತಿಯು ಅವನನ್ನು ವರಿಸಲಿಚ್ಛಿಸಲಿಲ್ಲ ವಿಲಾಸಿಯಾದ ಮತ್ತೊಬ್ಬರಾಜನು ತನ್ನ ಹೆಗಲಿನ ಮೇಲಿನಿಂದ ಜಾರಿ ರತ್ನ ಖಚಿತವಾದ ಕೇಯೂರದ ಮಾಲೆಗಳಿಗೆ ಸಿಕ್ಕಿಕೊಂಡ ತನ್ನ ಉತ್ತರೀಯವನ್ನು ಬಿಡಿಸಿ ಸರಿಮಾಡಿಕೊಂಡು ತನ್ನ ತಲೆಯನ್ನೊಂದು ಪಾರ್ಶ್ವಕ್ಕೆ ಬಾಗಿಸಿ ಆ ಉತ್ತರೀಯವನ್ನು ಅದರ ಸ್ವಸ್ಥಾನಕ್ಕೆ ಸೇರಿಸಿದನು ಹಾಗೆ ಮಾಡಿದುದರಲ್ಲಿ ಇಂದುಮತಿಯು ತನ್ನನ್ನು ವರಿಸಿದರೆ ಅವಳನ್ನು ಯಥೋಚಿತವಾದ ಸರಿ ಯಾದ ಸ್ಥಾನದಲ್ಲಿಟ್ಟು ಪ್ರೀತ್ಯಾದರಗಳಿಂದ ನೋಡಿಕೊಳ್ಳುವ ತನ್ನ ಮನೋ ಗತವನ್ನು ಸೂಚಿಸಬೇಕೆಂಬುದು ಅವನ ಆಶಯ ಇತರರಿಗೆ ಗೋಚರವಾಗ ದಂತಹ ದೋಷವು ಅವನ ಅಂಗಗಳಲ್ಲಿದ್ದ ಕಾರಣ ಅವನು ಭುಜದ ಮೇಲಿ ನಿಂದ ಜಾರಿದ್ದ ಉತ್ತರೀಯವನ್ನು ತಟಕ್ಕನೆ ಹಾಗೆ ಹೊದೆದುಕೊಂಡ ನೆಂಬುದು ಇಂದುಮತಿಯ ಅಭಿಪ್ರಾಯ. ಮತ್ತೊಬ್ಬರಾಜನು ಸ್ವಲ್ಪ ಮಟ್ಟಿಗೆ ತಲೆತಗ್ಗಿಸಿ ಕೆಳಗೆ ನೋಡುತ್ತ, ಸಿಂಹಾಸನದ ಕೆಳಗಿದ್ದ ಚಿನ್ನದ ಪಾದ ಪೀಠದ ಮೇಲೆ ಕಾಲಿನ ಹೆಬ್ಬೆರಳನ್ನು ಬೊಗ್ಗಿಸಿ ತನ್ನ ಕಡೆಗೆ ಗೆರೆಗಳನ್ನೆಳ ದಂತೆ ಬರೆದನು ಇಂದುಮತಿಯು ತನ್ನ ಸಮೀಪಗತಳಾಗಿ ತನ್ನನ್ನು ವರಿಸ ಬೇಕೆಂಬುದು ಅವನ ಸೂಚನೆ ಪಾದಪೀಠದ ಮೇಲೆ ಗೆರೆಗಳನ್ನೆಳೆಯು ತ್ತಿದ್ದ ಆ ರಾಜನು ಅವಲಕ್ಷಣದವನೆಂಬುದು ಇಂದುಮತಿಯ ಅಭಿಪ್ರಾಯ ಮತ್ತೊಬ್ಬರಾಜನು ಸಿಂಹಾಸನದ ಒಂದು ಭಾಗದಲ್ಲಿ ತನ್ನ ಎಡಗೈಯನ್ನೂರಿ ತನ್ನ ಭುಜವನ್ನು ಎತ್ತರಿಸಿಕೊಂಡು ತನ್ನ ಎಡಪಾರ್ಶ್ವದಲ್ಲಿದ್ದ ಮಿತ್ರನೊಡನೆ

ಸಂಭಾಷಣತತ್ಪರನಾಗಿದ್ದನು ಅವನು ಧರಿಸಿದ್ದ ಮುಕ್ತಾಹಾರವು ಅವನು ಹಾಗೆ ಕುಳಿತಿದ್ದುದರಿಂದ ಎರಡು ಭಾಗಗಳಾಗಿ ಕಾಣಿಸುತ್ತಿದ್ದಿತು ತಾನು ಇಂದುಮತಿಯನ್ನು ವಾಮಭಾಗದಲ್ಲಿ ಕುಳ್ಳಿರಿಸಿಕೊಂಡು ಅದೇ ರೀತಿಯಲ್ಲಿ ಅವಳೊಡನೆ ಸಂಭಾಷಣತತ್ಪರನಾಗುವುದಾಗಿ ಸೂಚಿಸುವ ಸಲುವಾಗಿ ಅವನು ಹಾಗೆ ಮಾಡಿದನು ಮತ್ತೊಬ್ಬನೊಡನೆ ಮಾತನಾಡುವುದರಲ್ಲಿ ಮಗ್ನನಾಗಿ ತನ್ನ ಕಡೆಗೇ ತಿರುಗಿ ನೋಡದಿದ್ದ ಆತನು ತನ್ನಲ್ಲಿ ಅನಾದರವುಳ್ಳವನೆಂದು ಇಂದುಮತಿಯು ಅಭಿಪ್ರಾಯಪಟ್ಟಳು ಮತ್ತೊಬ್ಬ ರಾಜನು ಲೀಲಾರ್ಥವಾಗಿ ತನ್ನ ಬೆರಳುಗಳಲ್ಲಿ ದಾಳಗಳನ್ನು ಹಿಡಿದುಕೊಂಡು ತೋರಿಸುತ್ತಿದ್ದನು ಅವನು ಬೆರಳುಗಳಲ್ಲಿ ಧರಿಸಿದ ರತ್ನಖಚಿತವಾದ ಉಂಗುರ ಪ್ರಭೆಯಿಂದ ದಾಳಗಳು ಬೆಳಗುತ್ತಿದ್ದುವು ಅವನ ಅಂಗೈಗಳು ಕೆಂದಾವರೆಯಂತೆ ಕೆಂಪಗಿದ್ದು ರಾಜಲಕ್ಷಣವಾದ ಧ್ವಜಲಾಂಛನರೇಖೆಯಿಂದ ಶೋಭಿಸುತ್ತಿದ್ದುವು ಇಂದುಮತಿಯು ತನ್ನನ್ನು ವರಿಸಿದರೆ, ತಾನು ಅವಳೊಡನೆ ಸಂತೋಷದಿಂದ ಪಗಡೆಯನ್ನಾಡುವುದಾಗಿ ಸೂಚಿಸಬೇಕೆಂಬುದು ಅವನ ಆಶಯ ಪಗಡೆಯಾಟದ ದುರ್ವ್ಯಸನದಿಂದ ಕೂಡಿದ್ದ ಆ ರಾಜನು ಕಾಪುರುಷನೆಂಬುದು ಇಂದುಮತಿಯ ಅಭಿಪ್ರಾಯ ಮತ್ತೊಬ್ಬ ರಾಜನು ತಾನು ಸಿಂಹಾಸನದಲ್ಲಿ ಭದ್ರವಾಗಿ ಮಂಡಿಸಿದ್ದೂ ಹಠಾತ್ತಾಗಿ ಸಿಂಹಾಸನದಿಂದ ಜಾರಿದಂತೆಯೂ ಅದರ ಪರಿಣಾಮವಾಗಿ ಸ್ವಸ್ಥಾನದಿಂದ ಚಲಿಸಿದಂತೆಯೂ ನಟಿಸುತ್ತ, ಚಲನಭರದಲ್ಲಿ ತಾನು ಕಿರೀಟದ ಮೇಲೆ ಅಂಗೈಯನ್ನಿಟ್ಟುಕೊಂಡನು ಕಿರೀಟವು ವಜ್ರಖಚಿತವಾಗಿದ್ದ ಕಾರಣ ಕೈಬೆರಳುಗಳ ಸಂದಿಗಳಿಂದ ವಜ್ರಗಳ ಪ್ರಭೆಯು ಹೊರಹೊಮ್ಮುತ್ತಿದ್ದಿತು, "ನೀನು ಈ ಕಿರೀಟದಂತೆ ನನ್ನ ತಲೆಯನ್ನೇರಿ ಕುಳಿತರೂ ನೀನು ನನಗೆ ಭಾರವೆಂದೆಣಿಸದೆ ನಿನ್ನನ್ನು ಪ್ರೀತಿಯಿಂದ ಕಾಪಾಡುತ್ತೇನೆ" ಎಂದು ಸೂಚಿಸುವುದು ಅವನ ಆಶಯ. ಹೀಗೆ ತಲೆಯ ಮೇಲೆ ಕೈಯಿಟ್ಟುಕೊಂಡಿರುವ ರಾಜನು ಅವಲಕ್ಷಣದವನೆಂಬುದು ಇಂದುಮತಿಯ ಅಭಿಪ್ರಾಯ ಹೀಗೆ ಶೃಂಗಾರ ಚೇಷ್ಟೆಗಳಿಂದ ತಮ್ಮ ಇಂಗಿತವನ್ನು ಸೂಚಿಸಿ ತನ್ಮೂಲಕ ತಮ್ಮ ಅಸಭ್ಯತೆಯನ್ನು ತೋರಿಸಿಕೊಂಡ ರಾಜರಲ್ಲಾರನ್ನೂ ವರಿಸದೆ ಇಂದುಮತಿಯು ಮುಂದೆ ಹೋದಳು

ಅನಂತರ, ದ್ವಾರಪಾಲಿಕೆಯೂ, ಗಂಡಸರಂತೆ ಮಾತನಾಡಬಲ್ಲ ವಾಗ್ಮಿನಿಯೂ, ರಾಜಸಂತತಿಗಳ ಚರಿತ್ರೆಯನ್ನರಿತವಳೂ ಆಗಿದ್ದ ಸುನಂದೆಯೆಂಬಾಕೆಯು ಕುಮಾರಿಯಾದ ಇಂದುಮತಿಯನ್ನು ಮಗಧೇಶ್ವರನಾದ ಪರಂತಪನ ಮುಂದೆ ನಿಲ್ಲಿಸಿ ಈತನು ಶರಣಾರ್ಥಿಗಳಾಗಿ ರಕ್ಷಣೆಯನ್ನು ಬಯಸುವವರಿಗೆ ಶರಣ್ಯನು, ಅಗಾಧಸತ್ತ್ವನು, ಗಂಭೀರಸ್ವಭಾದವನು, ಮಗಧರಾಜ್ಯದಲ್ಲಿ ಇವನು ತ್ರಾಣಸ್ವರೂಪನು, ಪ್ರಜಾರಂಜನ ನಿಪುಣನು, ಇವನು ಶತ್ರುಗಳನ್ನು ನೆಗ್ಗುವವನು, ಆದಕಾರಣ, ಪರಂತಪನೆಂದು ಅನ್ವರ್ಥನಾಮವುಳ್ಳವನು ಸಾವಿರ ಗಟ್ಟಲೆಯಾಗಿ ಇತರ ರಾಜರಿರಬಹುದು ಆದರೆ ದೇಶವು ರಾಜನ್ವತಿಯೆನಿಸಿಕೊಳ್ಳಬೇಕಾದರೆ ಇಂತಹ ರಾಜರಿರುವುದರಿಂದಲೇ ರಾತ್ರಿಯು 'ಜ್ಯೋತಿಷ್ಮತಿ'ಯೆನಿಸಿಕೊಳ್ಳುವುದು ಚಂದ್ರನಿಂದಲೇ ನಕ್ಷತ್ರಗಳಿಂದಲಾಗಲಿ, ತಾರೆಗಳಿಂದಲಾಗಲಿ ಮತ್ತು ಗ್ರಹಸಂಕುಲದಿಂದಲಾಗಲಿ ರಾತ್ರಿಯು ಜ್ಯೋತಿಷ್ಮತಿಯೆಂಬ ಹೆಸರನ್ನೆಂದಿಗೂ ಪಡೆಯಲಾರದು ಇವನು ಸಂತತವಾಗಿ ಯಜ್ಞಗಳನ್ನು ಮಾಡುತ್ತಿರುವದರಿಂದ ಸಹಸ್ರನೇತ್ರನಾದ ಇಂದ್ರನಿಗೆ ಏಕಪ್ರಕಾರವಾಗಿ ಆಹ್ವಾನವನ್ನಿತ್ತು ಹವಿಸ್ಸನ್ನು ಸಮರ್ಪಿಸಿದವನು ಹೀಗೆ ಹವಿಸ್ಸನ್ನು ಸ್ವೀಕರಿಸುತ್ತ ಇಂದ್ರನು ಅಮರಾವತಿಯನ್ನು ಚಿರಕಾರ ಬಿಟ್ಟಿರುಬೇಕಾಯಿತು ಅಷ್ಟು ದೀರ್ಘಕಾಲವೂ ಇಂದ್ರನನ್ನಗಲಿದ ಶಚೀದೇವಿಯು ಮಂದಾರ ಪುಷ್ಪಗಳಿಂದ ತನ್ನ ಮುಂಗುರುಳುಗಳನ್ನು ಅಲಂಕರಿಸಿಕೊಳ್ಳದೆ ಪಾಂಡುವರ್ಣದ ಕಪೋಲಗಳ ಮೇಲೆ ಅವು ಹಾರಾಡುವಂತೆ ಬಿಟ್ಟಿರುವಂತಾಯಿತು ನೀನು ವರಿಸಲು ಈ ಮಗಧೇಶ್ವರನು ಯೋಗ್ಯನಾಗಿದ್ದಾನೆ ಅವನು ನಿನ್ನ ಪಾಣಿ ಗ್ರಹಣವಾಡಿಕೊಳ್ಳಲೆಂದ. ನೀನು ಇಚ್ಛಿಸುವ ಪಕ್ಷಕ್ಕೆ ಅದಕ್ಕೆ ಸಮ್ಮತಿಸು ನೀನು ಆತನೊಡನೆ ಮಗಧರಾಜಧಾನಿಯಾದ ಪುಷ್ಪಪುರವನ್ನು ಪ್ರವೇಶಿಸುವಾಗ್ಗೆ ಪುಷ್ಪ ಪುರಾಂಗನೆಯರು ಪ್ರಸಾದವಾತಾಯನಗಳಲ್ಲಿ ಕುಳಿತು ನಿನ್ನನ್ನು ನೋಡಿ ನೇತ್ರೋತ್ಸವ ಮಾಡಿಕೊಳ್ಳಲು ಅವಕಾಶ ಕೊಡು ಎಂದು ತಿಳಿಸಿದಳು ಇಂದುಮತಿಯು ಸುನಂದೆಯ ಮಾತುಗಳನ್ನು ಕೇಳಿ ಪರಂತಪನೆಂಗು ಯಥಾರ್ಥನಾಮನಾದ ಮಗಧೇಶ್ವರನನ್ನು

ನೋಡಿ, ಲೇಶಮಾತ್ರವೂ ಅನುರಾಗವಿಲ್ಲದ ಅನಾಸಕ್ತಭಾವದಿಂದ ಅವನಿಗೆ ಕೈ ಮುಗಿದಳು, ಒಂದು ಮಾತನ್ನೂ ಆಡದೆ ಮೌನದಿಂದ ಮುಂದೆ ಸಾಗಿದಳು ರಾಜಕುಮಾರಿ ಇಂದುಮತಿಯ ಗೌರವಾರ್ಥವಾಗಿ ವೇತ್ರ ಗ್ರಹಣ ಕಾರ್ಯದಲ್ಲಿ ನಿಯುಕ್ತಳಾಗಿದ್ದ ಸುನಂದೆಯು—ಮಾನಸಸರೋವರದಲ್ಲಿ ಗಾಳಿಯಿಂದ ಉತ್ಪತ್ತಿಯಾದ ಅಲೆಗಳ ರೇಖೆಯು ರಾಜಹಂಸಿಯನ್ನು ಒಂದು ಕಮಲದ ಬಳಿಯಿಂದ ಮತ್ತೊಂದು ಕಮಲದ ಬಳಿಗೆ ಕರೆದೊಯ್ಯುವಂತೆ— ರಾಜಕುಮಾರಿಯನ್ನು ಮಗಧರಾಜನ ಸಮ್ಮುಖದಿಂದ ಅಂಗರಾಜನ ಬಳಿಗೆ ಕರೆದೊಯ್ದಳು ಸುನಂದೆಯು ಇಂದುಮತಿಯೊಡನೆ ಈತನು, ಅಂಗ ರಾಜನು ಸುರಾಂಗನೆಯರು ಕೂಡ ವರಿಸಲು ಯೋಗ್ಯನಾಗಿದ್ದಾನೆ ಇವನ ರಾಜ್ಯದ ಗಜಶಾಸ್ತ್ರಜ್ಞರು ಆನೆಗಳನ್ನು ಪಳಗಿಸಿ, ಗಜಬಲವನ್ನು ವೃದ್ಧಿಗೊಳಿಸಿದ್ದಾರೆ ಈತನು ಭೂಲೋಕದಲ್ಲಿದ್ದೂ ಇಂದ್ರಪದವಿಯನ್ನನುಭವಿಸುವಂತಿದ್ದಾನೆ ಪತಿಗಳನ್ನು ಕಳೆದುಕೊಂಡ ಶತ್ರುವನಿತೆಯರ ಕಣ್ಣುಗಳಿಂದ ಮುತ್ತುಗಳಿಗಿಂತಲೂ ದಪ್ಪವಾದ ಅಶ್ರುಬಿಂದುಗಳು ಅವರ ಎದೆಯ ಮೇಲೆ ಬೀಳುವಂತೆ ಮಾಡಿ ಈತನು ಅವರಿಗೆ ಸೂತ್ರರಹಿತವಾದ ಮುಕ್ತಾಹಾರವನ್ನು ಕೊಟ್ಟಿದ್ದಾನೆ * ಇವನು ಅರಿಭಯಂಕರನಾಗಿ ಯುದ್ಧಗಳಲ್ಲಿ ಜಯಶೀಲನಾಗಿದ್ದಾನೆ ಲಕ್ಷ್ಮಿಯೂ ಸರಸ್ವತಿಯೂ ಸ್ವಭಾವತಃ ಭಿನ್ನಾಶ್ರಯವುಳ್ಳವರು ಅವರು ಒಟ್ಟಿಗೆ ಒಂದೇಕಡೆ ನೆಲಸಿರುವುದು ವಿರಳ ಈತನಲ್ಲಿ ಮಾತ್ರ ಅವರಿಬ್ಬರೂ ನೆಲಸಿದ್ದಾರೆ ಕಾಂತಿಮತಿಯೂ ಸತ್ಯಭಾಷಿಣಿಯೂ ಆದ ನೀನು ಮೂರನೆಯವಳಾಗಿ ಅವರೊಡನೆ ಸೇರಬಹುದಾಗಿದೆ ಅಂಗರಾಜನು ನಿನಗೆ ಅನುರೂಪನಾದ ವರನಾಗಿದ್ದಾನೆ ಎಂದಳು ಇಂದುಮತಿಯು ಅಂಗ

* ವಿಕ್ರಮಾದಿತ್ಯನ ವಿಜಯಯಾತ್ರೆಯನ್ನು ನೋಡಿದ್ದ ಕವಿಯು ರಘುವಿನ ಪರಾಕ್ರಮವನ್ನು ವರ್ಣಿಸುವ ವ್ಯಾಜದಿಂದಲೇ ಯುದ್ಧದ ಫಲಿತಾಂಶಗಳೆಷ್ಟು ದಾರುಣವೆಂಬುದನ್ನು ಹೃದಯವೇಧಕವಾಗುವಂತೆ ಚುಚ್ಚಿ ತಿಳಿಸುವುದಕ್ಕಾಗಿ ಹೀಗೆ ಹೇಳಿದ್ದಾನೆ ಶತ್ರು ವನಿತೆಯರ ದುಃಖದ ವರ್ಣನೆಯನ್ನು ಕೇಳಿ ಮನಸ್ಸು "ಅಯ್ಯೋ" ಎನ್ನುವಂತೆ ಮಾಡಿದ್ದಾನೆ

ರಾಜನ ಕಡೆಯಿಂದ ಕಣ್ಣುಗಳನ್ನು ಹೊರಳಿಸಿ ತನ್ನ ತಾಯಿಯ ಸಖಿಯಾದ ಸುನಂದೆಯನ್ನು ಮುಂದೆ ನಡೆಯುವಂತೆ ಹೇಳಿದಳು ಅಂಗರಾಜನು ಸುಂದರನಾಗಿರಲಿಲ್ಲವೆಂದಲ್ಲ, ಇಂದುಮತಿಗೆ ವಿವೇಚನಾ ಸಾಮರ್ಥ್ಯವಿರಲಿಲ್ಲವೆಂದೂ ಅಲ್ಲ ಅವನೂ ಸುಂದರನಾಗಿ ಅವಳಿಗೂ ವಿವೇಚನಾ ಸಾಮರ್ಥ್ಯವಿದ್ದೂ ಕೂಡ ಅವಳು ಅಂತಹ ರಾಜನನ್ನು ವರಿಸಲಿಚ್ಛಿಸಲಿಲ್ಲ ಏಕೆಂದರೆ "ಲೋಕೋ ಹಿ ಭಿನ್ನರುಚಿಃ" ಒಬ್ಬೊಬ್ಬರ ಅಭಿರುಚಿಯು ಒಂದೊಂದು ಬಗೆ. ಆದಕಾರಣ, ಅಂಗರಾಜನು ಯೋಗ್ಯವರನೇ ಆಗಿದ್ದೂ ಕೂಡ, ಇಂದುಮತಿಯು ಅವನನ್ನು ವಿವಾಹಮಾಡಿಕೊಳ್ಳಲು ಸಮ್ಮತಿಸಲಿಲ್ಲ ಅನಂತರ ದೌವಾರಕಿಯು ಶೂರನೂ ರೂಪವಂತನೂ ಆದ ಮತ್ತೊಬ್ಬ ರಾಜನನ್ನು ಉದಯಿಸುತ್ತಿರುವ ಚಂದ್ರನನ್ನು ತೋರಿಸುವಂತೆ ಇಂದುಮತಿಗೆ ತೋರಿಸಿ, ಅವಂತೀ ರಾಜನಾದ ಈತನು ದೀರ್ಘಬಾಹುವೂ, ವಿಶಾಲ ವಕ್ಷಸ್ಥಳವುಳ್ಳವನೂ ಸೂರ್ಯನಂತೆ ತೇಜಸ್ವಿಯೂ ಆಗಿದ್ದಾನೆ ಇವನು ಸಮಗ್ರ ಶಕ್ತಿಯುಳ್ಳವನು ಎಂದರೆ ಕೋಶದಂಡಬಲವುಳ್ಳ* ಪ್ರಭುಶಕ್ತಿಯೂ, ವಿಕ್ರಮಬಲವುಳ್ಳ ಉತ್ಸಾಹಶಕ್ತಿಯೂ ಮತ್ತು ಬುದ್ಧಿಬಲವುಳ್ಳ ಮಂತ್ರಿಶಕ್ತಿಯೂ ಮೂರೂ ಇವನಲ್ಲಿವೆ ವಿಜಯ ಯಾತ್ರೆಗಳಲ್ಲಿ ಈತನ ಕುದುರೆಗಳ ಗೊರಸಿನಿಂದೆದ್ದ ಧೂಳು ಸಾಮಂತರಾಜರ ಕಿರೀಟಮಣಿಗಳ ಕಾಂತಿಯು ಕಾಣದಂತೆ ತಡೆದು ತಪ್ಪಿಸುತ್ತದೆ ಈತನು ಉಜ್ಜಯಿನಿಯ ಮಹಾಕಾಲ ದೇವಾಲಯಕ್ಕೆ ಸಮೀಪ ವರ್ತಿಯಾಗಿ ವಾಸಿಸುತ್ತಿದ್ದಾನೆ. ನೀನು ಈತನನ್ನು ವರಿಸಿದ ಪಕ್ಷದಲ್ಲಿ ಶಿಪ್ರಾನದಿಯ ಮೇಲಿನಿಂದ ಬೀಸುವ ತಂಗಾಳಿಯ ಸೌಖ್ಯವನ್ನನುಭವಿಸುತ್ತ ಅಲ್ಲಿಯ ಉದ್ಯಾನವನಗಳಲ್ಲಿ ವಿಹರಿಸಿ ಹರ್ಷಿಸಬಹುದು ಎಂದು ಹೇಳಿದಳು ಕಮಲಗಳನ್ನು ಉಲ್ಲಾಸಗೊಳಿಸಿ ಕೆಸರನ್ನು ಸಂಶೋಷಿಸುವ ಸೂರ್ಯನು ಕನ್ನೈದಿಲೆಯನ್ನು ಹೇಗೆ ಸಂತೋಷಗೊಳಿಸಿ ಆಕರ್ಷಿಸಲಾರನೋ ಅದೇರೀತಿ ಬಂಧುಗಳನ್ನು ತನ್ನ ಪ್ರೀತಿಯಿಂದ ಆಹ್ಲಾದಗೊಳಿಸಿ ಶತ್ರುಗಳನ್ನು ತನ್ನ ಪ್ರತಾಪದಿಂದ ನಾಶಗೊಳಿಸುತ್ತಿದ್ದ ಅಂಗರಾಜನು ಸುಕು

---

* ಭಂಡಾರವು ಸಮೃದ್ಧಿಯಾಗಿದ್ದು ಪರಾಭವಗೊಳಿಸುವ ಸಾಮರ್ಥ್ಯವುಳ್ಳ

ಮಾರಿಯಾದ ಇಂದುಮತಿಯು ಮನಸ್ಸನ್ನಾಕರ್ಷಿಸಲಿಲ್ಲ ವೇತ್ರಧಾರಿಣಿ ಯಾದ ಸುನಂದೆಯು ಅನಂತರ ಮುಂದುವರಿದು ಅನೂಪದೇಶದ ಒಡೆಯ ನಾದ ಪ್ರತೀಪನನ್ನು ತೋರಿಸಿದಳು ಕೆಂದಾವರೆಯಂತೆ ಕಾಂತಿಯುಳ್ಳವಳೂ ಮತ್ತು ಗುಣವತಿಯೂ ಆಗಿ ವಿಧಾತನ ಲಲಿತಸೃಷ್ಟಿಯಂತಿದ್ದ ಆ ಸುದತೀ ಮಣಿಯನ್ನು ಕುರಿತು ಸುನಂದೆಯು "ಹಿಂದೆ ಕಾರ್ತವೀರ್ಯನೆಂಬ ಅರಸ ನಿದ್ದನು ಅವನಿಗೆ ದತ್ತಾತ್ರೇಯರ ವರದಿಂದ ಯುದ್ಧಕಾಲದಲಿ ಸಹಸ್ರ ಬಾಹುಗಳಂತೆ ಆತನು ಅಷ್ಟಾದಶ ದ್ವೀಪಗಳನ್ನೂ ತನ್ನ ಭುಜಬಲದಿಂದ ಗೆದ್ದು ಅಲ್ಲಿ ಯೂಪಸ್ತಂಭಗಳನ್ನು ಸ್ಥಾಪಿಸಿದ್ದನಂತೆ ಸಮಸ್ತ ಯಜ್ಞಗ ಳನ್ನೂ ಮಾಡಿದ್ದನಂತೆ ಸರ್ವಭೂತರಂಜನೆಯಿಂದ ರಾಜನೆಂಬ ಹೆಸರಿಗೆ ಅನನ್ಯಸಾಧಾರಣರೀತಿಯಲ್ಲಿ ಸಂಪೂರ್ಣವಾಗಿ ಅರ್ಹನಾಗಿದ್ದ ಕಾರ್ತವೀ ರ್ಯನು ರಾಜರನ್ನೆಲ್ಲ ಗೆದ್ದು ಸಾರ್ವಭೌಮನೆನಿಸಿದ್ದನಂತೆ ಆತನು ಬ್ರಹ್ಮ ಜ್ಞಾನಿಯಾದ ಯೋಗಿಯಂತಿದ್ದನಂತೆ ದುರ್ಜನರ ದುರಾಲೋಚನೆಗಳು ಕೂಡ ದತ್ತಾತ್ರೇಯರ ವರದಿಂದ ಆತನಿಗೆ ತಿಳಿಯುತ್ತಿದ್ದ ಕಾರಣ ಅಕಾರ್ಯ ಮಾಡುವ ಯೋಚನೆಯು ಅವರ ಮನಸ್ಸಿನಲ್ಲಿ ಹುಟ್ಟುತ್ತಿರುವಾಗಲೇ ಕಾರ್ತ ವೀರ್ಯನು ಚಾಪಧರನಾಗಿ ಅವರ ಮುಂದೆ ನಿಂತು ತನ್ಮೂಲಕ ಅಕಾರ್ಯಗ ಳನ್ನು ಅವನು ತಡೆಗಟ್ಟುತ್ತಿದ್ದನಂತೆ, ಪ್ರಜೆಗಳ ಅವಿನಯವನ್ನೂ, ಮಾನ ಸಾಪರಾಧಗಳನ್ನೂ ಕೂಡ ನಿವಾರಿಸುತ್ತ, ಅವನು ನಿಜವಾದ ಉಪಾಸಕನಾಗಿ ದ್ದನಂತೆ ಇಂದ್ರನನ್ನು ಕೂಡ ಜಯಿಸಿದ್ದ ಲಂಕೇಶ್ವರನಾದ ರಾವಣನು ಕಾರ್ತ ವೀರ್ಯನಿಂದ ಪರಾಜಯ ಹೊಂದಿ, ಅವನ ಬಿಲ್ಲಿನ ಹೆದೆಯಿಂದ ತನ್ನ ಇಪ್ಪತ್ತು ತೋಳುಗಳನ್ನೂ ಬಿಗಿಸಿಕೊಂಡು, ತನಗೆ ಬಿಡುಗಡೆಯ ಆಸೆಯಿಲ್ಲದೆ ನಿಟ್ಟುಸಿ ರುಬಿಡುತ್ತ ಅವನ ಅನುಗ್ರಹವಾಗುವ ವರೆಗೂ ಬಹುಕಾಲ ಕಾರಾಗೃಹದಲ್ಲಿದ್ದ

ನಂತೆ ಈ ಪ್ರತೀಪ ರಾಜನು ಕಾರ್ತವೀರ್ಯನ ವಂಶದವನು ಈ ಪ್ರತೀಪ ಭೂಪತಿಯು ಆಗಮವೃದ್ಧರಾದ ಸಾಧು ಸಜ್ಜನರಸೇವೆಯಲ್ಲಿ ನಿರತನು ಲಕ್ಷ್ಮಿಯು ದುಷ್ಟಾಶ್ರಯೆ ತ್ಯಾಗಶೀಲೆಯೂಗಿರುವ ಕಾರಣ, ಅವಳು ಅನುಗ್ರಹಿಸಿದ್ದವರಲ್ಲಿ ದುರ್ಗುಣ ಗಳು ಮೂಡಿದೊಡನೆಯೇ ಅವಳು ದೂರ ಸರಿಯುವುದರ ಮರ್ಮವನ್ನರಿಯದ ಮೂಢರು ಅವಳನ್ನು ಚಂಚಲೆಯೆಂದು ದೂರುವರು † ಈ ಪ್ರತೀಪರಾಜನು ದೋಷದೂರನಾಗಿ ನಿರಂತರವೂ ಲಕ್ಷ್ಮೀದೇವಿಯ ಅನುಗ್ರಹಕ್ಕ ಪಾತ್ರನಾಗಿ ರುವುದರಿಂದ, ಆಕೆಗೆ ಬಂದಿರುವ 'ಸ್ವಭಾವಲೋಲೆ' ಎಂಬ ಅಪವಾದವು ಇವ ನಿಂದ ಪರಿಹಾರವಾಯಿತು ಮಹಿಳೆಯ ನೊಂಟವನ್ನು ಬಳಸಿರುವ ಡಾಬಿ ನಂತೆ ಮಾಹಿಷ್ಮತೀನಗರವನ್ನು ಬಳಸಿ ರಮ್ಯವಾದ ಜಲವೇಣಿಗಳಿಂದ ಕೂಡಿ ರುವ ನರ್ಮದೆಯ ಸೊಬಗನ್ನು ಪ್ರಾಸಾದ ಗವಾಕ್ಷಗಳಿಂದ ನೋಡಬೇಕೆಂಬ

* ಇದರ ಪೂರ್ವಕಥೆಯು ಹೀಗಿದೆ.—ಕಾರ್ತವೀರ್ಯನು ಒಂದುಸಲ ತನ್ನ ಮಡದಿಯರೊಡನೆ ನರ್ಮದಾ ನದಿಯಲ್ಲಿ ಜಲಕ್ರೀಡೆಯಾಡುತ್ತಿದ್ದನಂತೆ ಆಗ ಅವನುನದಿಯಲ್ಲಿಳಿದಿದ್ದಾಗ ನದಿಯನೀರನ್ನೆಲ್ಲಅಣೆಯನ್ನುಕಟ್ಟಿದಂತೆಬಂಧಿಸಿದ್ದನಂತೆ ಅವನಿದ್ದ ಪ್ರದೇಶಕ್ಕೆ ಕೆಳಭಾಗದಲ್ಲಿ ನದೀ ಪಾತ್ರವು ನೀರಿಲ್ಲದೆ ಬರಿದಾಗಿದ್ದಿತಂತೆ ಆಗ ಅಲ್ಲಿಗೆ ಬಂದ ರಾವಣನು ಶಿವಲಿಂಗ ಪೂಜೆಗಾರಂಭಿಸಿದನಂತೆ ಅಷ್ಟರಲ್ಲಿ ಕಾರ್ತವೀರ್ಯನು ನದಿಯಿಂದಹೊರಗೆ ಬಂದನಂತೆ ಅದುವರೆಗೂ ಅಣೆಯನ್ನುಕಟ್ಟಿ ದಂತೆ ನಿಂತಿದ್ದ ನೀರೆಲ್ಲ ಮಹಾರಭಸದಿಂದ ನುಗ್ಗಿ ರಾವಣನನ್ನೂ, ಅವನು ಪೂಜಿ ಸುತ್ತಿದ್ದ ಶಿವಲಿಂಗವನ್ನೂ ಕೊಚ್ಚಿಕೊಂಡು ಹೋಯಿತಂತೆ ರಾವಣನು ಕೋಪ ದಿಂದ ಕೆರಳಿ ಯುದ್ಧಕ್ಕೆ ಬಂದಾಗ, ಕಾರ್ತವೀರ್ಯನು ಅವನನ್ನು ಸೋಲಿಸಿ, ಸೆರೆ ಹಿಡಿದು, ಕಾರಾಗೃಹದಲ್ಲಿಟ್ಟಿದ್ದನಂತೆ ಮುಂದೆ ರಾವಣನ ಪರವಾಗಿ ಪುಲಸ್ತ್ಯನು ಪ್ರಾರ್ಥಿಸಿದ ಮೇಲೆ ಕಾರ್ತವೀರ್ಯನು ಅವನನ್ನು ಬಿಡುಗಡೆಮಾಡಿದನಂತೆ

† ಇದು ಕಾಲಿದಾಸ ಮಹಾಕವಿಯ ಪ್ರತಿಭೆಗೂ ಮತ್ತು ಕಲ್ಪನಾ ಸಾಮ ರ್ಥ್ಯಕ್ಕೂ ಉತ್ತಮವಾದ ನಿದರ್ಶನಗಳಲ್ಲೊಂದಾಗಿದೆ ಇತರ ಕವಿಗಳೆಲ್ಲರೂ ಲಕ್ಷ್ಮಿಯು ಚಂಚಲೆಯೆಂದೂ ಋಜುಮಾರ್ಗದವಳಲ್ಲವೆಂದೂ ದೂರುತ್ತಿರುವಲ್ಲಿ ಅವನು ಈ ರೀತಿ ಹೇಳಿರುವುದು ಅವನ ಮನೋಧರ್ಮವೆಂತಹದೆಂಬುದಕ್ಕೂ ನಿದರ್ಶನವಾಗಿದೆ

ಅಭಿಲಾಷೆಯು ನಿನಗಿರುವ ಪಕ್ಷಕ್ಕೆ ದೀರ್ಘಬಾಹುವಾದ ಪ್ರತೀಪರಾಜನನ್ನು ವರಿಸಿ ಅವನ ಅಂಕಲಕ್ಷ್ಮಿಯಾಗು ಎಂದು ಸೂಚಿಸಿದಳು ಆ ಕ್ಷಿತೀಶನು ಸುಂದರನಾಗಿದ್ದೂ ಕೂಡ—ಮೇಘಾವರಣರಹಿತನಾದ ಶರದೃತುವಿನ ಪೂರ್ಣ ಚಂದ್ರನು ನಳಿನಿಗೆ ಹೇಗೆ ಪ್ರಿಯಕರನಾಗುವುದು ಸಾಧ್ಯವಿಲ್ಲವೋ ಹಾಗೆ —ಇಂದುಮತಿಯ ಪ್ರೀತಿಗೆ ಪಾತ್ರನಾಗಲಿಲ್ಲ ಆ ಬಳಿಕ ಸುನಂದೆಯು ಶೂರ ಸೇನಾಧಿಪತಿಯಾದ ಸುಷೇಣರಾಜನನ್ನು ಇಂದುಮತಿಗೆ ತೋರಿಸಿದಳು, ಅಲ್ಲದೆ ಆಚಾರಶುದ್ಧನಾಗಿ, ಉಭಯವಂಶದೀಪನಾಗಿ, ಲೋಕಾಂತರಗಳಲ್ಲಿ ಕೂಡ ಕೀರ್ತಿಪ್ರಶಂಸೆಯು ನಡೆಯುತ್ತಿದ್ದ ಆ ಸುಷೇಣರಾಜನ ವಿಷಯವಾಗಿ ರಾಜ ಕುಮಾರಿ ಇಂದುಮತಿಯೊಡನೆ, "ಈತನು ನೀಪವಂಶದ ರಾಜನು ಅನೇಕ ಯಜ್ಞಗಳನ್ನಾಚರಿಸಿ ತನ್ನ ಸೌಶೀಲ್ಯವನ್ನು ವೃದ್ಧಿಗೊಳಿಸಿಕೊಂಡಿದ್ದಾನೆ ಇವನಲ್ಲಿ ನೆಲಸಿರುವ ಗುಣಗಳು—ಸಿದ್ಧಾಶ್ರಮವನ್ನು ಪ್ರವೇಶಿಸಿದ ಹುಲಿ ಜಿಂಕೆ ಆನೆ ಸಿಂಹ ಮುಂತಾದ ಪ್ರಾಣಿಗಳು ನೈಸರ್ಗಿಕವಾಗಿ ತಮ್ಮಲ್ಲಿ ನೆಲಸಿರುವ ಪರಸ್ಪರ ವೈರವನ್ನು ಮರೆಯುವಂತೆ – ಪರಸ್ಪರ ವಿರೋಧವನ್ನೇ ಕಳೆದು ಕೊಳ್ಳುವ ಮಟ್ಟಿಗೆ ಇವನು ಶಾಂತನಾಗಿ ಅರಿಷಡ್ವರ್ಗಗಳ ದಾಂಧಲೆಯನ್ನಡಗಿಸಿದ್ದಾನೆ ಆದರೂ, ಇವನು ರಾಜಧರ್ಮವನ್ನು ಉಪೇಕ್ಷಿಸಿಲ್ಲ, ಇವನ ಅರಮನೆಯು ಚಂದ್ರಕಾಂತಿಯಂತಹ ಪ್ರಶಾಂತವಾದ ತೆ ಜಸ್ಸಿನಿಂದ ಕೂಡಿ ನಯನಾಭಿರಾಮವಾಗಿ ಕಂಗೊಳಿಸುತ್ತಿದೆ, ಇವನ ಬಂಧುಗಳು ಅಲ್ಲಿ ಸುಖ ಸಂತೋಷಗಳಿಂದ ನಲಿಯುತ್ತಿದ್ದಾರೆ ಇವನ ಶತ್ರುಗಳಿಗೆ ಮಾತ್ರ ಇವನ ಪ್ರತಾಪವನ್ನು ಸಹಿಸುವುದು ಕಷ್ಟವಾಗಿದೆ, ಅವರ ಹರ್ಮ್ಯಾಗ್ರಗಳಲ್ಲಿ–ಒಬ್ಬರೂ ವಾಸವಾಗಿಲ್ಲದೆ ಪಾಳುಬಿದ್ದಿರುವ ಕಾರಣ–ತೃಣಾಂಕುರಗಳು ಬೆಳೆದುಕೊಂಡಿವೆ ಇವನು ತನ್ನ ಪತ್ನಿಯರೊಡನೆ ನನ್ನ ರಾಜಧಾನಿಯಾದ ಮಧುರಾನಗರದ ಬಳಿಯಲ್ಲಿ ಯಮುನಾ ನದಿಯಲ್ಲಿ ಜಲಕ್ರೀಡೆಯಾಡುವಾಗ ಅವರು ಪೂಸಿಕೊಂಡಿದ್ದ ಧವಲಚಂದನವು ನೀರಿಗೆ ಕದಡಿ ಯಮುನಾ ನದಿಯ ಕಪ್ಪುನೀರು ಬಿಳಿಯ ಬಣ್ಣಕ್ಕೆ ತಿರುಗುತ್ತದೆ ಆದರ ಫಲಿತಾಂಶವಾಗಿ ಪ್ರಯಾಗದ ಬಳಿಯಲ್ಲ ಯಮುನಾ ನದಿಯು ಗಂಗಾನದಿಯೊಡನೆ ಸಂಗಮ ಹೊಂದುವುದಕ್ಕೆ ಪ್ರತಿಯಾಗಿ ಮಧುರಾನಗರದ ಬಳಿಯಲ್ಲೇ ಸಂಗಮ ಹೊಂದಿದಂತೆ ತೋರುತ್ತದೆ ವಿಷ್ಣುವಾಹನನಾದ ಗರುಡನ

ಬಾಧೆಗೆ ನಡುಗಿ ಕಾಲಿಯನೆಂಬ ಸರ್ಪವು ಯಮುನಾ ನದಿಯ ಆಶ್ರಯ:ವನ್ನು ಪಡೆಯಲು ಹೊರಟುಹೋಗುವಾಗ ಬಿಟ್ಟು ಹೋದ ನಾಗರತ್ನವು ಈ ಸುಷೇಣರಾಜನ ವಂಶಾನುಗತವಾದ ಆಭರಣದಲ್ಲಿ ಖಚಿತವಾಗಿದೆ ಅದನ್ನು ಅವನು ಧರಿಸಿದನೆಂದರೆ ವಿಷ್ಣುವಿನ ಕೌಸ್ತುಭವನ್ನು ಏಳಿಸಿದಂತಿರುತ್ತದೆ- ಸುಂದರಿ! ಈ ಯುವಕನನ್ನು ವರಿಸು. ಕುಬೇರನ ಚೈತ್ರರಥೋದ್ಯಾನ ಕ್ಕಿಂತ ಕಡಮೆಯಿಲ್ಲದ ವೃಂದಾವನದಲ್ಲಿ ಮೃದುವಾದ ಚಿಗುರುಗಳ ಮೇಲೆ ರಚಿತವಾದ ಪುಷ್ಪಶಯ್ಯೆಯಲ್ಲಿ ಮಲಗಿ ಯೌವನಶ್ರೀಯನ್ನು ಆರಾಧಿಸಿ ಸೌಖ್ಯಪಡು ಮಳೆಗಾಲದಲ್ಲಿ ಗೋವರ್ಧನಗಿರಿಯ ಸುಂದರವಾದ ಕಂದರಗಳ ಶೈಲೇಯ ಗಂಧದಿಂದ ಪರಿಮಳಿಸುವ ಶಿಲಾತಲಗಳಲ್ಲಿ ಕುಳಿತು ನವಿಲುಗಳ ನೃತ್ಯವನ್ನು ನೋಡಿ ಹರ್ಷಿಸು ಎಂದು ಹೇಳಿದಳು. ಆದರೆ ಮತ್ತೊಬ್ಬನ ವಧುವಾಗಬೇಕಾಗಿದ್ದವಳಾದ ಇಂದುಮತಿಯು – ಸಾಗರಗಾಮಿನಿಯಾದ ನದಿಯು ಮಾರ್ಗ ಮಧ್ಯದಲ್ಲಿ ಸಿಕ್ಕಿದ ಬೆಟ್ಟವನ್ನು ಬಳಸಿಕೊಂಡು ಮುಂದೆ ಸಾಗುವಂತೆ– ಸುಷೇಣ ರಾಜನನ್ನು ಬಿಟ್ಟು ಮುಂದೆ ನಡೆದಳು ಅನಂತರ ಸುನಂದೆಯು ಶತ್ರುನಿಗ್ರಹ ಮಾಡಿದವನೂ, ಕೇಯೂರವನ್ನು ಧರಿಸಿದ ತೋಳಿನಿಂದ ಶೋಭಿಸುತ್ತಿದ್ದವನೂ ಆದ ಕಳಿಂಗದೊಡೆಯನಾದ ಹೇಮಾಂಗದ ರಾಜನನ್ನು ಬಾಲೇಂದು ಮುಖಿಯಾದ ಆ ಬಾಲೆಗೆ ತೋರಿಸಿ, ಈ ಹೇಮರಾಜನು ಕುಲ ಪರ್ವತಗಳಲ್ಲೊಂದಾದ ಮಹೇಂದ್ರ ಪರ್ವತಸಾರವಂಬಷ್ಟು ಬಲಿಷ್ಠನು ಮಹೇಂದ್ರ ಪರ್ವತವೂ ಮತ್ತು ಮಹೋದಧಿಯೂ ಇವನಿಗೆ ಸೇರಿವೆ ಇವನು ವಿಜಯ ಯಾತ್ರೆ ಹೊರಟರೆ ಮದಧಾರೆಯಿಂದ ಮೆರೆಯುತ್ತ ಮುಂದೆ ನಡೆಯುವ ಇವನ ಗಜದಳವು ಮಹೇಂದ್ರ ಪರ್ವತ ಪಂಕ್ತಿಯೇ ಹೊರ ಟಂತೆ ಶೋಭಿಸುತ್ತದೆ ಎರಡು ಕೈಗಳಲ್ಲಿಯೂ ಬಾಣ ಪ್ರಯೋಗ ಮಾಡುವ ಸವ್ಯಸಾಚಿಯಾಗಿರುವ ಈತನಿಗೆ ಹದೆಯು ರಭಸದಿಂದ ತಾಗಿ ತಾಗಿ ಎರಡು ಭುಜಗಳ ಮೇಲೂ ಚರ್ಮವು ಜಡ್ಡುಗಟ್ಟಿದ ಎರಡು ರೇಖೆಗಳಿವೆ ಈತನ ಅರಮನೆಯ ಕಿಟಕಿಯಿಂದ ನೋಡಿದರೆ ಸಮುದ್ರದ ಅಲೆಗಳು ಕಾಣುತ್ತವೆ ಪ್ರಾತಃಕಾಲದಲ್ಲಿ ಅರಮನೆಗೆ ಸಮೀಪದಲ್ಲಿರುವ ಸಮುದ್ರದ ಮಂದ್ರ ಗಂಭೀರ

ಘೋಷವೇ ಇವನನ್ನು ಎಚ್ಚರಗೊಳಿಸುತ್ತದೆ ಇವನನ್ನು ಎಬ್ಬಿಸಲು ತೂರ್ಯಸ್ವನದ ಆವಶ್ಯಕತೆಯೇ ಇಲ್ಲ ಈತನನ್ನು ವರಿಸಿ ತಾಲೀವನಗಳ ಮರ್ಮರಶಬ್ದದಿಂದ ಕೂಡಿದ ಸಮುದ್ರತೀರದಲ್ಲಿ ವಿಹರಿಸು ಆಗ ದ್ವೀಪಾಂತರಗಳಿಂದ ಬರುವ ಲವಂಗ ಪುಷ್ಪಗಳ ಮೇಲಿನ ತಂಗಾಳಿಯು ವನವಿಹಾರದ ಆಯಾಸದಿಂದುಂಟಾದ ಬೆವರಿನ ಹನಿಗಳನ್ನು ಹೋಗಲಾಡಿಸಿ ನಿನಗೆ ಸೌಖ್ಯವನ್ನುಂಟುಮಾಡುವುದು" ಎಂದು ತಿಳಿಸಿದಳು ಇಂದುಮತಿಯು ನಿಜವಾದ ರೂಪದಿಂದ ಆಕರ್ಷಿಸಲ್ಪಡತಕ್ಕವಳಾಗಿದ್ದಳು. ಸುನಂದೆಯು ತನ್ನನ್ನು ಪ್ರಚೋದನಗೊಳಿಸುತ್ತಿದ್ದರೂ ಅವಳ ಚಿತ್ತಾಕರ್ಷಕವಾದ ಮಾತುಗಳಿಂದ ಮನಸೋಲದೆ—ಪ್ರತಿಕೂಲ ದೈವನಾದ ಮನುಷ್ಯನು ಎಷ್ಟೇ ದೂರದವರೆಗೆ ಆಕರ್ಷಿಸಲ್ಪಟ್ಟಿದ್ದರೂ ಅವನಲ್ಲಿ ನಲಸದೆ ದೂರ ಸರಿಯುವ ಲಕ್ಷ್ಮಿಯಂತೆ – ಮುಂದಕ್ಕೆ ಹೊರಟಳು ಸುನಂದೆಯು ದೇವಸಮರೂಪನಾಗಿ ಶೋಭಿಸುತ್ತಿದ್ದ ನಾಗಪಟ್ಟಣದೊಡೆಯನಾದ ಪಾಂಡ್ಯರಾಜನ ಸಮ್ಮುಖದಲ್ಲಿ ಇಂದುಮತಿಯನ್ನು ನಿಲ್ಲಿಸಿ, "ಚಕೋರಾಕ್ಷಿ! ಇತ್ತ ನೋಡು ಉದ್ದವಾದ ಹಾರವನ್ನು ಧರಿಸಿ ಹರಿಚಂದನದ ಅಂಗರಾಗವನ್ನು ಲೇಪಿಸಿಕೊಂಡಿರುವ ಈತನು ಪಾಂಡ್ಯರಾಜನು ಎಳೆಬಿಸಿಲಿನ ಛಾಯೆಯಿಂದ ಸಾನುಪ್ರದೇಶವು ಕೆಂಪಾಗಿರುವ ಮತ್ತು ಪಾರ್ಶ್ವಗಳಿಂದ ನಿರ್ಝರಗಳು ಹರಿಯುತ್ತಿರುವ ಅದ್ರಿರಾಜನಂತೆ ಈತನು ಶೋಭಿಸುತ್ತಿದ್ದಾನೆ ಅಗಸ್ತ್ಯ ಮಹರ್ಷಿಯು ಈತನ ಪುರೋಹಿತನಾಗಿದ್ದಾನೆ ಆತನು ಸೂರ್ಯನ ಮಾರ್ಗಕ್ಕೆ ಅಡಚಣೆಯನ್ನುಂಟುಮಾಡುವುದಕ್ಕಾಗಿ ವಿಂಧ್ಯಪರ್ವತವು ಬೆಳೆಯುತ್ತಿದ್ದುದನ್ನು ತಪ್ಪಿಸಿದವನು, ಒಟ್ಟು ಸಮುದ್ರಜಲವನ್ನೇ ನಿಶ್ಶೇಷವಾಗಿ ಕುಡಿದು ಮತ್ತೆ ವಿಸರ್ಜಿಸಿದವನು * ಅಶ್ವಮೇಧಯಜ್ಞವನ್ನು

* ಈ ಬಗೆಯ ಪವಾಡಕೃತ್ಯಗಳ ವರ್ಣನೆಯು ವಿಜ್ಞಾನ ದೃಷ್ಟಿಯಿಂದ ಅಸಂಗತವಾಗಿದ್ದರೂ ಕಾವ್ಯ ದೃಷ್ಟಿಯಿಂದಲೂ ಮತ್ತು ಕಲಾದೃಷ್ಟಿಯಿಂದಲೂ ರಮಣೀಯವಾಗಿರುತ್ತದೆ ತನ್ನ ಶಕ್ತಿ ಸಾಮರ್ಥ್ಯಗಳನ್ನು ವೃದ್ಧಿಪಡಿಸಿಕೊಳ್ಳಲು ಮಾನವನ ಆಕಾಂಕ್ಷೆಯ ಆದರ್ಶವು ಎಲ್ಲಿಯವರೆಗೆ ಹೋಗಬಹುದೆಂಬ ಹೊಂಗನಸೆಂದು ಗ್ರಹಿಸಿ ಪರಿಶೀಲಿಸಿದರೂ ಇದರಿಂದ ಆಹ್ಲಾದವೇ ಆಗಬಹುದು

ನೆರವೇರಿಸಿ ಅವಭೃತಸ್ನಾನ ಮಾಡಿದ ಈ ಪಾಂಡ್ಯರಾಜನನ್ನು ಯಜ್ಞವಿಧಿಯು ಸಾಂಗವಾಗಿ ಪೂರೈಸಿದ ವಿಚಾರವಾಗಿ ಪ್ರೀತಿಯಿಂದ ಪ್ರಶ್ನಿಸುವವನು. ಆಗಸ್ತ್ಯನ ಪ್ರೀತಿಗೆ ಪಾತ್ರನಾಗಿರುವ ಈ ಪಾಂಡ್ಯರಾಜನು ಶಿವನನ್ನು ಮೆಚ್ಚಿಸಿ ದುರ್ಲಭವಾದ ಅಸ್ತ್ರವನ್ನು ಮಹಾದೇವನಾದ ಆತನಿಂದ ಪಡೆದುದನ್ನು ಕಂಡು, ಖರನ ನಿವಾಸವಾದ ಜನಸ್ಥಾನಕ್ಕೆಲ್ಲಿ ಉಪಟಳವಾದಿತೋ ಎಂದು ಲಂಕಾಧಿಪತಿಯಾದ ರಾವಣನು ಶಂಕಿಸಿದನು ಹಾಗೆ ಶಂಕಿಸಿದ ರಾವಣನು ಈ ಪಾಂಡ್ಯರಾಜನೊಡನೆ ಸಂಧಾನ ಮಾಡಿಕೊಂಡನು ಉದ್ಧತನಾದ ಆತನು ಅನಂತರ ಇಂದ್ರಲೋಕವನ್ನು ಜಯಿಸುವುದಕ್ಕಾಗಿ ವಿಜಯಯಾತ್ರೆಗೆ ಹೊರಟನು ಮಹಾಕುಲೀನನಾದ ಈತನನ್ನು ನೀನು ವರಿಸಿ, ಈತನು ವಿಧಿವತ್ತಾಗಿ ನಿನ್ನನ್ನು ಪಾಣಿಗ್ರಹಣ ಮಾಡಿಕೊಂಡರೆ, ನೀನೂ ಈತನಿಗೆ ರತ್ನಾನುವಿದ್ಧವಾದ ಸಮುದ್ರಮೇಖಲೆಯಾದ ಭೂಮಿಯಂತೆಯೇ ಮುಖ್ಯಳೇ ಆಗುವೆ, ನೀನು ಈತನನ್ನು ವರಿಸಿ ದಕ್ಷಿಣದಿಗ್ದೇವಿಗೆ ಸವತಿಯಾಗು ನಾಗವಲ್ಲಿಗಳು (ವೀಳೆಯದೆಲೆಯ ಬಳ್ಳಿಗಳು) ಹಬ್ಬಿರುವ ಅಡಿಕೆ ಮರಗಳಿಂದಲೂ, ಏಲಕ್ಕಿಯ ಲತೆಗಳಿಂದ ಆಲಿಂಗಿತವಾದ ಚಂದನ ವೃಕ್ಷಗಳಿಂದಲೂ, ಕಮಲಪತ್ರಗಳ ಹಾಸುಗಳಿಂದಲೂ ಶೋಭಿಸುವ ಮಲಯ ಪರ್ವತದ ತಪ್ಪಲುಗಳ ಸಾನುಪ್ರದೇಶಗಳಲ್ಲಿ ಸರ್ವದಾ ವಿಹರಿಸುವವಳಾಗು ಈ ಪಾಂಡ್ಯರಾಜನ- ಕನ್ನೈದಿಲೆಯಂತೆ ಶ್ಯಾಮಾಂಗನಾಗಿದ್ದಾನೆ, ನೀನು ಗೋರೋಚನ(ಗೌರ)ಕಾಂತಿಯುಳ್ಳವಳಾಗಿರುವೆ ನಿಮ್ಮೀರ್ವರಿಗೂ ವಿವಾಹವಾದರೆ ಮೇಘವೂ ಮಿಂಚೂ ಸೇರಿದಂತೆ ಅನ್ಯೋನ್ಯ ಶೋಭಾ ಪರಿವೃದ್ಧಿಯುಂಟಾಗಿ ಪರಸ್ಪರವಾಗಿ ಒಬ್ಬರಿಂದ ಮತ್ತೊಬ್ಬರಿಗೆ ಭೂಷಣವುಂಟಾಗಲನುಕೂಲಿಸುತ್ತದೆ'' ಎಂದು ಬೋಧಿಸಿದಳು ಸೂರ್ಯನು ಗೋಚರಿಸದಂತಾದ ಮೇಲೆ ಮುಚ್ಚಿಕೊಂಡ ಅರವಿಂದ ಕೋಶದೊಳಕ್ಕೆ ನಕ್ಷತ್ರನಾಥನಾದ ಚಂದ್ರನ ಕಿರಣಗಳು ಹೇಗೆ ವ್ಯಾಪಿಸಲಾರವೋ ಹಾಗೆ—ಸುನಂದೆಯು ಬೋಧಿಸಿದ ವಾಕ್ಯಗಳು ಇಂದುಮತಿಯ ಮನಸ್ಸಿಗೆ ಲೇಶಮಾತ್ರವೂ ತಟ್ಟಲಾರದೆ ಹೋದುವು ಸ್ವಯಂವರ ಮಂಟಪದಲ್ಲಿ ತನ್ನ ಮೆಚ್ಚಿಕೆಗೆ ಪಾತ್ರ

ನಾಗುವ ವರನನ್ನು ಆರಿಸಲುದ್ಯುಕ್ತಳಾಗಿದ್ದ (ಪತಿಂವರೆಯಾಗಿದ್ದ) ಆ ಇಂದುಮತಿಯು ರಾತ್ರಿಯ ಕಾಲದಲ್ಲಿ ಮುಂದುವರಿಯುವ ದೀಪಶಿಖೆಯಂತಿದ್ದಳು ಅವಳು ವರಣಮಾಲೆಯನ್ನು ಕೈಯಲ್ಲಿ ಹಿಡಿದು ಆವಾವ ಭೂಮಿಪಾಲನನ್ನು ಬಿಟ್ಟು ಮುಂದೆ ಹೋದಳೋ ಆ ಆ ಭೂಮಿಪಾಲನು—ರಾಜಮಾರ್ಗದಲ್ಲಿರುವ ಸೌಧಗಳ ಸಾಲಿನ ಪಕ್ಕದಲ್ಲಿ ರಾತ್ರಿಯ ವೇಳೆ ದೀಪವು ಮುಂದೆ ಹೋದಾಗ ಕಪ್ಪಿಡಿದು ಹಿಂದೆ ಉಳಿಯುವ ಆ ಆ ಸೌಧದಂತೆ-ವಿವರ್ಣಭಾವವನ್ನು ತಳೆದನು ಇಂದುಮತಿಯು ರಘುಚಕ್ರೇಶ್ವರನ ಪುತ್ರನಾದ ಅಜ

*ಈ ಉಪಮೆಯು ಕಾಲಿದಾಸನ ಅದ್ಭುತ ಪ್ರತಿಭೆಗೆ ಅನುರೂಪವಾಗಿದೆ ಇದರ ದೆಸೆಯಿಂದ ಕಾಲಿದಾಸ ಮಹಾಕವಿಗೆ ದೀಪಶಿಖಾ ಕಾಲಿದಾಸನೆಂಬ ಖ್ಯಾತಿಯು ಲಭಿಸಿತು ಈ ಉಪಮೆಯು ಬರುವ “ಸಂಚಾರಿಣೀ ದೀಪಶಿಖೇವ ರಾತ್ರೌ ಯಂ ಯಂ ವ್ಯತೀಯಾಯ ಪತಿಂವರಾ ಸಾ । ನರೇಂದ್ರಮಾರ್ಗಾಟ್ಟ ಇವ ಪ್ರಪೇದೇ ವಿವರ್ಣಭಾವಂ ಸ ಸ ಭೂಮಿಪಾಲಃ॥” ಎಂಬ ಶ್ಲೋಕದಲ್ಲಿ ಧ್ವನಿಯೂ ನೈಸರ್ಗಿಕ ರಮಣೀಯತೆಯೂ ತುಂಬಿ ತುಳುಕುತ್ತಿವೆ ರಾಜಸಭೆಯಲ್ಲಿ ಸಂಚರಿಸುತ್ತಿದ್ದ ಇಂದುಮತಿಯು ರಾತ್ರಿಯಕಾಲದ ದೀಪಶಿಖೆಯಂತಿದ್ದಳೆಂದು ಹೇಳುವುದರ ಮೂಲಕ ಅವಳೆಷ್ಟು ಸುಂದರಿಯೆಂಬುದನ್ನು ಅನನ್ಯ ಸುಲಭರೀತಿಯಲ್ಲಿ ಕವಿಯು ವರ್ಣಿಸಿದ್ದಾನೆ ಸುಂದರರಾದ ಅಸಂಖ್ಯಾತ ಮಂದಿ ರಾಜರುಗಳೂ ಮತ್ತು ರಾಜಕುಮಾರರೂ ಸಭೆಯಲ್ಲಿದ್ದೂ ಇಂದುಮತಿಯ ರೂಪಕ್ಕೆ ಹೋಲಿಸಿದರೆ ಸಭೆಯು ಅಂಧಕಾರಮಯವಾಗಿದ್ದಿತೆಂದೂ, ಇಂದುಮತಿಯು (ಅವರಿಗೆ ಹೋಲಿಸಿದರೆ) ರಾತ್ರಿಯ ವೇಳೆಯ ಸಂಚಾರಣೀ ದೀಪಶಿಖೆಯಂತಿದ್ದಳೆಂದೂ ಧ್ವನಿಯಿಂದ ಸೂಚಿಸಿದ್ದಾನೆ ಸಾಲುಸೌಧಗಳಿರುವ ರಾಜಮಾರ್ಗದಲ್ಲಿ ದೀಪವು ಹೋಗುವಾಗ, ಮೊದಲನೆಯ ಸೌಧದ ಮೇಲೆ ಬೆಳಕು ಬೀಳುತ್ತದೆ; ದೀಪವು ಅದನ್ನು ಸಮೀಪಿಸಿದಂತೆಲ್ಲ ಕ್ರಮಕ್ರಮವಾಗಿ ಅದರಮೇಲೆ ಬೆಳಕು ಹೆಚ್ಚಿ, ದೀಪವು ಅದರ ಸಮ್ಮುಖಕ್ಕೆ ಬಂದಾಗ ಅದು ಅತ್ಯಂತ ಹೆಚ್ಚಾಗಿ ಬೆಳಕಿನಿಂದ ತೊಳಗುತ್ತದೆ. ದೀಪವು ಮುಂದೆ ಹೋದಾಗ ಅದರ ಮೇಲಿನ ಬೆಳಕು ಕ್ರಮಕ್ರಮವಾಗಿ ಕಡಮೆಯಾಗಿ ಕೊನೆಗೆ ವಿವರ್ಣಭಾವವುಂಟಾಗುತ್ತದೆ ಅನಂತರ ಮುಂದಿನ ಸೌಧದ ಮೇಲೆ ಬೆಳಕು ಪಸರಿಸಿ ಕ್ರಮಕ್ರಮವಾಗಿ ಹೆಚ್ಚಿ, ದೀಪವು ಅದರ ಮುಂಭಾಗಕ್ಕೆ ಬಂದಾಗ ಅದು ಅತ್ಯಂತ ಹೆಚ್ಚಾಗಿ ತೊಳಗುತ್ತದೆ ದೀಪವು ಮುಂದೆ ಹೋದಾಗ ಬೆಳಕು ಕ್ರಮಕ್ರಮವಾಗಿ ಕಡಮೆಯಾಗಿ ಕೊನೆಗೆ ಅದಕ್ಕೆ ಕಪ್ಪು ಮುಚ್ಚಿಕೊಂಡು ವಿವರ್ಣಭಾವವುಂಟಾಗು

ಕುಮಾರನ ಸಮೀಪಕ್ಕೆ ಹೋದಾಗ ಅವನಿಗೆ ರಾಜಕುಮಾರಿಯು ತನ್ನನ್ನು ವರಿಸುವಳೋ ಇಲ್ಲವೋ ಎಂದು ಸಂಶಯವುಂಟಾಗಿ ಕಳವಳವಾಯಿತು ಆದರೆ, ಅವನ ಬಲತೋಳಿನ ಮೇಲ್ಭಾಗವು ಸ್ಫುರಿಸಿದುದರಿಂದ ಅವನ ಸಂಶಯವು ಪರಿಹಾರವಾಯಿತು ಕೇಯೂರವನ್ನು ಧರಿಸುವ ಬಲಗೈಯು ಹಾಗೆ ಸ್ಫುರಿಸಿದ ಶುಭಶಕುನದಿಂದ ಅವನ ಸಂದೇಹವು ಮಾಯವಾಗಿ ತನ್ನನ್ನು ಇಂದುಮತಿಯು ವರಿಸುವಳೆಂಬ ಧೈರ್ಯವುಂಟಾಯಿತು ನಿರ್ದೋಷವಾದ ಅವಯವಗಳನ್ನು ಪಡೆದಿದ್ದ ಅಜಕುಮಾರನನ್ನು ಸಮೀಪಿಸಿದ ಮೇಲೆ, ಆ ರಾಜಕುಮಾರಿಯು ಮತ್ತಾವ ರಾಜಕುಮಾರನ ಬಳಿಗೆ ಸಾರುವುದಕ್ಕೂ ಇಷ್ಟಪಡದೆ ಅಲ್ಲಿಯೇ ನಿಂತಳು ಅದು ಯುಕ್ತವೇ ಸರಿ ಪ್ರಫುಲ್ಲವಾದ ಸಹಕಾರ ವೃಕ್ಷವನ್ನು ಸೇರಿದ ದುಂಬಿಗಳ ಸಮೂಹವು ಮತ್ತಾವ ವೃಕ್ಷದ ಬಳಿಗೆ ಹೋಗುವುದಕ್ಕೂ ಸರ್ವಥಾ ಇಷ್ಟಪಡುವುದೇ ಇಲ್ಲ. ಇಂದುಮತಿಯ ದೇಹಕಾಂತಿಯು ಇಂದುಪ್ರಭೆಯಂತೆ ಆಹ್ಲಾದಕರವಾಗಿದ್ದಿತು ಅವಳ ಚಿತ್ತವೃತ್ತಿಯು ಅಜಕುಮಾರನಲ್ಲಿ ಸಮಾವೇಶಿತವಾದುದನ್ನು ಕಂಡ ಸುನಂದೆಯು ಅವನ ವಿಚಾರವನ್ನು

ತ್ತದೆ ದೀಪವು ಮುಂದೆ ಹೋದಂತೆ ಮುಂದಿನ ಸೌಧಗಳಿಗೂ ಅದೇಗತಿ ಇದೇ ರೀತಿಯಲ್ಲಿ ಇಂದುಮತಿಯು ಮೊದಲನೆಯ ರಾಜನನ್ನು ಸಮೀಪಿಸಿದಂತೆಲ್ಲ ಅವಳು ತನಗೇ ಮಾಲೆಹಾಕಲು ಬರುತ್ತಿದ್ದಳೆಂದು ಅವನ ಸಂತೋಷವು ಹೆಚ್ಚಿ ಅವಳು ತನ್ನ ಸಮ್ಮುಖದಲ್ಲಿ ನಿಂತಾಗ ಅವನ ಮುಖವು ಅತ್ಯಂತ ಸಂತೋಷದಿಂದ ಅರಳಿತು ಅವಳು ಮುಂದಕ್ಕೆ ಹೆಜ್ಜೆಯಿಟ್ಟಾಗ ಆ ಸಂತೋಷವು ಕೊಂಚ ಕಡಮೆಯಾದರೂ ಪಾರ್ಶ್ವದಿಂದ ಮಾಲೆಹಾಕಿದರೂ ಹಾಕಬಹುದೆಂಬ ಹಾರೈಕೆಯಿಂದ ಹುಟ್ಟಿದ ಸಂತೋಷ ಅನಂತರ ಮೊದಲನೆಯವನ ಸಂತೋಷ ಕಡಮೆಯಾದಹಾಗೆಲ್ಲ, ಎರಡನೆಯವನಿಗೆ ಅವಳು ತನಗೆ ಮಾಲೆಹಾಕುವಳೆಂಬ ಸಂತೋಷವು ಹೆಚ್ಚಾಯಿತು. ಅವಳು ಎರಡನೆಯವನ ಮುಂದೆ ನಿಂತಾಗ ಮೊದಲನೆಯವನಿಗೆ ಮುಖವು ವಿವರ್ಣವಾಯಿತು. ಮುಂದಿನವರ ಗತಿಯೂ ಅಷ್ಟೆ ಅವಳು ಒಬ್ಬೊಬ್ಬ ರಾಜನ ಮುಂದೆ ಹೋದಾಗಲೂ ಅವನ ಮುಖವು ಬೆಳಗಿತು, ಹಿಂದಿನವರು ವಿವರ್ಣಭಾವವನ್ನು ತಳೆದರು.

ಸವಿಸ್ತಾರವಾಗಿ ಹೇಳತೊಡಗಿದಳು, "ಇಕ್ಷ್ವಾಕು ವಂಶದವನೂ ಮತ್ತು ನೃಪಶ್ರೇಷ್ಠನೂ ಆದ ಕಕುತ್ಸ್ಥನೆಂಬ ರಾಜನಿದ್ದನು ಅವನು ಬಹಳ ಪ್ರಖ್ಯಾತನಾಗಿದ್ದನು ಅವನ ಸಂತತಿಯವರಾದ ಉನ್ನತೇಚ್ಛೆಯುಳ್ಳ ಉತ್ತರ ಕೋಸಲೇಂದ್ರರೆಲ್ಲರಿಗೂ ಕಾಕುತ್ಸ್ಥರೆಂಬ ಶ್ಲಾಘ್ಯವಾದ ಹೆಸರು ಬಂದಿದೆ ಕಕುತ್ಸ್ಥನು ವೃಷಭರೂಪವನ್ನು ತಳೆದ ಮಹೇಂದ್ರನ ಮೇಲೆ ಕುಳಿತು, ರಾಕ್ಷಸರನ್ನು ಯುದ್ಧದಲ್ಲಿ ಸೋಲಿಸಿ ಪಿನಾಕಿ ಲೀಲೆಯನ್ನು ತೋರಿದನು * ಹಾಗೆ ಯುದ್ಧಮಾಡಿ ಅನೇಕ ರಾಕ್ಷಸರನ್ನು ಅವನು ಕೊಂದು ಅವರ ಪತ್ನಿಯರಾದ ಅಸುರಾಂಗನೆಯರು ತಮ್ಮ ಕೆನ್ನೆಗಳ ಮೇಲೆ ಪತ್ರಲೇಖಾಲಂಕಾರ ಮಾಡುವುದು ನಿವೃತ್ತಿಯಾಗುವಂತೆ ಮಾಡಿದನು † ಇಂದ್ರನು ಅಸುರ

* ದೇವಾಸುರ ಸಂಗ್ರಾಮದಲ್ಲಿ ಒಂದುಸಾರಿ ದೇವತೆಗಳಿಗೆ ಸೋಲಾಯಿತು ಒಡನೆಯೇ ಅವರು ವಾಡಿಕೆಯಂತೆ ವಿಷ್ಣುವನ್ನು ಮರೆಹೊಕ್ಕರು ವಿಷ್ಣುವು ಅವರು ಅಯೋಧ್ಯಾನಾಥನಾದ ಪುರಂಜಯನ ಸಹಾಯವನ್ನು ಪಡೆದರೆ ಶುಭವಾಗುವುದೆಂದು ಹೇಳಿದನು. ದೇವತೆಗಳು ಪುರಂಜಯನ ಬಳಿಗೆ ಹೋಗಿ ಅವನು ತಮ್ಮೆಲ್ಲರಿಗೂ ನಾಯಕನಾಗಿ ನಿಂತು ಯುದ್ಧಮಾಡಿ ಅಸುರರನ್ನು ಗೆದ್ದು ಸಹಾಯಮಾಡಬೇಕೆಂದು ಬಿನ್ನೈಸಿದರು ಇಂದ್ರನು ತನ್ನನ್ನು ಭುಜದ ಮೇಲೆ ಕುಳ್ಳಿರಿಸಿಕೊಂಡರೆ ತಾನು ಯುದ್ಧಮಾಡುವುದಾಗಿ ಪುರಂಜಯನು ತಿಳಿಸಿದನು ಇಂದ್ರನು ಅದಕ್ಕೆ ಸಮ್ಮತಿಸಿ ವೃಷಭಾಕೃತಿಯನ್ನು ಧರಿಸಿದನು ಪುರಂಜಯನು ಆ ವೃಷಭದ ಮೇಲೆ ಕುಳಿತು, ಪಿನಾಕ ಧನುಸ್ಸನ್ನು ಹಿಡಿದ ವೃಷಭವಾಹನನಾದ ಪಿನಾಕಿಯೋ ಎಂಬಂತೆ ಯುದ್ಧಮಾಡಿ ರಾಕ್ಷಸರನ್ನು ಸೋಲಿಸಿದನು ವೃಷಭಾರೂಢನಾಗಿ ಹಿಳಿಲಿನ ಬಳಿಯಲ್ಲಿ ಕುಳಿತವನಾದಕಾರಣ ಪುರಂಜಯನಿಗೆ ಕಕುತ್ಸ್ಥನೆಂಬ ಹೆಸರುಬಂದಿತು ಅವನ ಪರಾಕ್ರಮವನ್ನು ದೇವತೆಗಳೂ ಮಾನವರೂ ಕೊಂಡಾಡಿದರು

† ಕಾಲಿದಾಸನು ವೀರರ ಯುಗದಲ್ಲಿ ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದವನಾಗಿದ್ದರೂ, ವೀರಶ್ರೇಷ್ಠರಾದ ಸೂರ್ಯವಂಶ ಪ್ರಭುಗಳ ಚರಿತ್ರೆಯನ್ನೇ ಬರೆಯಲುದ್ಯುಕ್ತನಾಗಿದ್ದರೂ, ಇವನಿಗೆ ಯುದ್ಧದ ವಿಷಯದಲ್ಲಿ ಅಸಹ್ಯಭಾವನೆ ಆದುದರಿಂದ ಯುದ್ಧವನ್ನು ವರ್ಣಿಸುವ ಸನ್ನಿವೇಶದಲ್ಲೆಲ್ಲ ಅವನು ಸ್ತ್ರೀಯರ ವೈಧವ್ಯ ದುಃಖ ಮುಂತಾದುವನ್ನು ಹೃದಯವೇಧಕವಾಗುವಂತೆ ವರ್ಣಿಸಿ, ತನ್ನ ಕಾಲದ ಯುದ್ಧಪ್ರೇಮಿಗಳಿಗೆ ಬುದ್ಧಿಕಲಿಸುವ ಪ್ರಯತ್ನಮಾಡಿದ್ದಾನೆ ಗಂಡಸರ ದುಃಖವನ್ನು

ರಿಗೆ ಪ್ರಾಭವವಾದ ಮೇಲೆ ಸಂತೋಷಭರಿತನಾಗಿ ವೃಷಭರೂಪವನ್ನು ಬಿಟ್ಟು ನಿಜರೂಪವನ್ನು ಧರಿಸಿದ ಮೇಲೆ ಕೂಡ, ಕಕುತ್ಸ್ಥನು ಅವನಿಂದ ಸನ್ಮಾನಿತನಾಗಿ ಅವನಿಗೆ ಸಮಾನನಾಗಿ ಅವನೊಡನೆ ಅರ್ಧಾಸನದಲ್ಲಿ ಮಂಡಿಸಿದ್ದನು ಮಹತ್ತರ ಕೀರ್ತಿಯನ್ನು ಗಳಿಸಿ ಕುಲಪ್ರದೀಪನೆನಿಸಿದ ದಿಲೀಪ ನರಪತಿಯು ಕಕುತ್ಸ್ಥನ ಕುಲದಲ್ಲಿ ಜನಿಸಿದನು ಅವನು ತೊಂಬತ್ತೊಂಬತ್ತು ಯಜ್ಞಗಳನ್ನಾಚರಿಸಿ ಶತಕ್ರತುವಾದ ಇಂದ್ರನಿಗೆ ಅಸೂಯೆಯುಂಟಾಗದಿರಲೆಂಬ ಭಾವನೆಯಿಂದ ನೂರನೆಯ ಯಜ್ಞವನ್ನಾಚರಿಸದೆ ನಿಲ್ಲಿಸಿದನು ದಿಲೀಪ ಚಕ್ರವರ್ತಿಯ ರಾಜ್ಯಭಾರದಲ್ಲಿ ಕಳ್ಳಕಾಕರ ಭಯವೆಂಬುದೇ ಇರಲಿಲ್ಲ, ರಾತ್ರಿಯ ವೇಳೆಯಲ್ಲಿ ಕೂಡ, ಜನರು ನಿರ್ಭಯವಾಗಿ ಸಂಚರಿಸುತ್ತಿದ್ದರು ವಿಹಾರ ಸ್ಥಾನಗಳಿಗೆ ಹೊರಟು ಮದ್ಯಪಾನಮತ್ತರಾಗಿ ಅರ್ಧದಾರಿಯಲ್ಲೇ ಮಲಗಿ ನಿದ್ರಿಸುತ್ತಿದ್ದ ನರ್ತಕಿಯರ ಬೆಲೆಬಾಳುವ ವಸ್ತ್ರಗಳನ್ನು–ಎಂದರ ಅಚೇತನರಾಗಿ ಮಲಗಿದ್ದ ಅಬಲೆಯರ ವಸ್ತ್ರಗಳನ್ನು–ವಾಯುವು ಕೂಡ ಅಲುಗಿಸುತ್ತಿರಲಿಲ್ಲ. ಹಾಗೆಂದ ಮೇಲೆ ದಿಲೀಪನು ಶಾಸಕನಾಗಿದ್ದಾಗ್ಗೆ ಪರಸ್ವತ್ತನ್ನು ಅಪಹರಿಸುವುದಕ್ಕಾರೂ ಕೈನೀಡುವಹಾಗಿರಲಿಲ್ಲ ಆ ದಿಲೀಪ ಚಕ್ರವರ್ತಿಯ ಮಗನಾದ ರಘುಚಕ್ರೇಶ್ವರನೇ ಈಗ ಪ್ರಭುತ್ವಮಾಡುತ್ತಿದ್ದಾನೆ ಆತನು ವಿಶ್ವಜಿದ್ಯಜ್ಞವೆಂಬ ಮಹಾಕ್ರತುವನ್ನು ನೆರವೇರಿಸಿ, ತಾನು ನಾಲ್ಕುದಿಕ್ಕುಗಳ ವಿಜಯಯಾತ್ರೆಯಿಂದ ಸಂಗ್ರಹಿಸಿ ತಂದು ಆ ಮೂಲಕ ಅಭಿವೃದ್ಧಿಗೊಳಿಸಿದ್ದ ಸಂಪತ್ತನ್ನೆಲ್ಲ ನಿಶ್ಶೇಷವಾಗಿ ದಾನಮಾಡಿದ್ದಾನೆ ತನ್ನ ಆ ವಿಪುಲ ಸಂಪತ್ತನ್ನೂ ಹಾಗೆ ವಿನಿಯೋಗಿಸಿ ಈಗ ಮಣ್ಣಿನ ಪಾತ್ರೆಗಳನ್ನುಪಯೋಗಿಸುತ್ತಿದ್ದಾನೆ. ರಘುಚಕ್ರೇಶ್ವರನ ಯಶಸ್ಸು ಅದ್ರಿಗಳನ್ನಾರೋಹಿಸಿದೆ, ಉದಧಿಗಳನ್ನಾವರಿಸಿದೆ, ನಾಗಲೋಕವನ್ನು ಪ್ರವೇಶಿಸಿ ಅಲ್ಲಿಯೂ ಹರಡಿದೆ ಅಷ್ಟೇ ಅಲ್ಲ ಅವನ ಯಶಸ್ಸು ಮೇಲಮೇಲಕ್ಕೇರಿ ಸ್ವರ್ಗಲೋಕವೇ ಮುಂತಾಗಿ

**ವರ್ಣಿಸುವುದಕ್ಕಿಂತ ಹೆಂಗಸರ ದುಃಖವನ್ನು ವರ್ಣಿಸಿದರೇ ಓದುವವರಮನಸ್ಸಿನ ಮೇಲೆಹೆಚ್ಚಿನ ಪರಿಣಾಮವುಂಟಾಗುತ್ತದೆಂಬುದನ್ನೂ ಅವನು ಗ್ರಹಿಸಿದ್ದನು. ಹಿಂದೆ ಶತ್ರುಸೈನಿಕರ ನಡಿಗೆಯಿಂದೆದ್ದ ಕೆಂಧೂಳು ಮಹಿಳೆಯರ ಬೈತಲೆಯ ಚೂರ್ಣವಾಯಿತೆಂದು ವರ್ಣಿಸಿದ್ದಾನೆ ಇಲ್ಲಿ ಹೀಗೆ ವರ್ಣಿಸಿದ್ದಾನೆ.**

ಎಲ್ಲೆಡೆಗಳನ್ನೂ ಇನ್ನೂ ವ್ಯಾಪಿಸುತ್ತಲೇ ಇದೆ ದೇಶಕಾಲಗಳ ಪರಿಮಿತಿಯಿಲ್ಲದೆ ಸರ್ವವ್ಯಾಪಿಯಾಗಿರುವ ಆತನ ಯಶಸ್ಸು ಅಳತೆಗೇ ಸಿಕ್ಕದೆ ತ್ರಿಕಾಲಾಬಾಧಿತವಾಗಿರುತ್ತದೆ ರಘುಚಕ್ರೇಶ್ವರನ ಪುತ್ರನಾದ ಈ ಅಜಕುಮಾರನು ಇಂದ್ರನಿಗೆ ಜಯಂತನು ಹೇಗೋ ಹಾಗೆ ತನ್ನ ತಂದೆಯಾದ ರಘುವಿಗೆ ಅನುರೂಪನಾಗಿದ್ದಾನೆ ಈತನು ಇನ್ನೂ ಕುಮಾರದಶೆಯಲ್ಲಿದ್ದು ರಾಜ್ಯಭಾರಕಲೆಯಲ್ಲಿ ಶಿಕ್ಷಣಹೊಂದುತ್ತಿರುವನು ಹೀಗಿದ್ದೂ, ರಾಜ್ಯಧುರಂಧರನಾದ ತನ್ನ ತಂದೆಯಂತೆಯೇ ಗುರುತರವಾದ ರಾಜ್ಯಭಾರವನ್ನು(ತಂದೆಯ ಜೊತೆಗೆ)ತಾನೂ ನಿರ್ವಹಿಸುತ್ತಿದ್ದಾನೆ ಕುಲದಿಂದಲೂ, ಕಾಂತಿಯಿಂದಲೂ, ವಯಸ್ಸಿನಿಂದಲೂ, ವಿನಯಪ್ರಧಾನವಾದ ಸಮಸ್ತ ಸದ್ಗುಣಗಳಿಂದಲೂ ಈ ಅಜಕುಮಾರನೇ ನಿನಗೆ ಅನುರೂಪನಾಗಿದ್ದಾನೆ ನೀನು ಈತನನ್ನು ವರಿಸು ರತ್ನವು ಕಾಂಚನದೊಡನೆ ಒಟ್ಟುಗೂಡಿ * ಸಂಶೋಭಿಸಲಿ !"

ಸುನಂದೆಯ ಮಾತುಗಳು ಮುಗಿದ ಮೇಲೆ ಹೊರಹೊಮ್ಮುತ್ತಿದ್ದ ಲಜ್ಜೆಯನ್ನು ಅಡಗಿಸಿಕೊಂಡು, ನರೇಂದ್ರ ಕನ್ಯೆಯಾದ ಇಂದುಮತಿಯು ಮನಃಪ್ರಸಾದದಿಂದ ಕೂಡಿದ ಅಮಲ ದೃಷ್ಟಿಯಿಂದ ನೋಡಿದುದರಿಂದಲೇ ಅವನಿಗೆ ವರಮಾಲೆಯನ್ನು ಹಾಕಿದಂತೆಯೇ ಅವನನ್ನು ವರಿಸಿ ಸ್ವೀಕರಿಸಿದಳು ತನಗೆ ಅಜಕುಮಾರನಲ್ಲಿ ಅನುರಾಗ ಹುಟ್ಟಿದುದನ್ನು ತಿಳಿಸುವ ಧಾರ್ಷ್ಟ್ಯವು ಅವಳಿಗಿರಲಿಲ್ಲ, ಲಜ್ಜಾಭರದಿಂದ ಅವಳು ಅದನ್ನು ತಿಳಿಸಲು ಶಕ್ಯವಿರಲಿಲ್ಲ ಆದರೆ ಅವಳ ಅನುರಾಗವು ಅವಳ ದೇಹದಿಂದ ಹೊರದೂರಿ ರೋಮಾಂಚನ ರೂಪದಿಂದ ಅಭಿವ್ಯಕ್ತವಾಯಿತು ವೇತ್ರಧಾರಿಣಿಯಾದ ಸಖೀ ಸುನಂದೆಯು ಅವಳ ಸ್ಥಿತಿಯನ್ನು ಗ್ರಹಿಸಿದಳು ಅಲ್ಲದೆ ರಾಜಕುಮಾರಿಯಾದ ಇಂದುಮತಿಯನ್ನು ಪರಿಹಾಸಮಾಡುವುದಕ್ಕಾಗಿ, ಆರ್ಯಳೆ! ಇಲ್ಲಿ ನಿಂತುದು ಇನ್ನು ಸಾಕು ಮುಂದೆ ಹೋಗೋಣ

* ಈ ಸಂದರ್ಭದಲ್ಲಿ ಬಂದಿರುವ "ರತ್ನಂ ಸಮಾಗಚ್ಛತು ಕಾಂಚನೇನ" ಎಂಬ ವಾಕ್ಯವೂ, ಇತರ ಸಂದರ್ಭಗಳಲ್ಲಿ ಬರುವ "ಭಿನ್ನ ರುಚಿರ್ಹಿ ಲೋಕಃ" ಎಂಬಂದೇ ಮುಂತಾದ ವಾಕ್ಯಗಳೂ ಜನಪ್ರಿಯವಾದ ಸಂಸ್ಕೃತ ಲೋಕೋಕ್ತಿಗಳಾಗಿ ಪರಿಣಮಿಸಿವೆ

ಎಂದಳು ಆಗ ವಧೂ ಇಂದುಮತಿಯು ಹುಬ್ಬುಗಂಟಿಕ್ಕಿ ಕುಟಿಲದೃಷ್ಟಿಯಿಂದ ಸುನಂದೆಯನ್ನು ದುರುಗುಟ್ಟಿ ನೋಡಿದಳು ಮಂಗಲ ಚೂರ್ಣದಿಂದ ಗೌರವರ್ಣವಾಗಿದ್ದ ಪುಷ್ಪಮಾಲಿಕೆಯನ್ನು ಇಂದುಮತಿಯು ಧಾತ್ರಿಯ ಸಹಾಯದಿಂದ ಅಜಕುಮಾರನ ಕಂಠದಲ್ಲಿ ಯಥಾಸ್ಥಾನದಲ್ಲಿ ಸರಿಯಾಗಿ ಬೀಳುವಂತೆ ಸಮರ್ಪಿಸಿದಳು ಅವನಲ್ಲಿ ಇಂದುಮತಿಗಿದ್ದ ಅನುರಾಗದ ಮೂರ್ತಸ್ವರೂಪವೋ—ಎಂಬಂತೆ ಆ ಹೂವಿನ ಹಾರವು ಶೋಭಿಸಿತು ಮಂಗಲ ಪುಷ್ಪಮಯವಾದ ಆ ಮಾಲಿಕೆಯು ಅವನ ಕೊರಳನ್ನು ಬಳಸಿ ಅವನ ವಿಶಾಲ ವಕ್ಷಸ್ಥಲದಲ್ಲಿ ವಿರಾಜಿಸಿತು. ಅಜಕುಮಾರನು ವಿದರ್ಭ ರಾಜಕುಮಾರಿಯಾದ ಇಂದುಮತಿಯ ಬಾಹುಗಳೇ ತನ್ನ ಕೊರಳನ್ನು ಬಳಸಿ ಆಲಿಂಗಿಸಿದ್ದಂತೆ ಭಾವಿಸಿಕೊಂಡು ಹರ್ಷಿಸಿದನು ಪುರಜನರು ಅನುರೂಪ ವಧೂವರರಾದ ಇಂದುಮತೀ ರಘುನಂದನರ ಸಂಬಂಧವನ್ನು ಶ್ಲಾಘಿಸಿದರು, ಅಲ್ಲದೆ, ಮೇಘದಿಂದ ಬಿಡುಗಡೆಹೊಂದಿದ ಬೆಳದಿಂಗಳು ಚಂದ್ರನನ್ನು ನೇರಿದಂತಾಯಿತೆಂದೂ, ಜಾಹ್ನವಿಯು ತನಗನುರೂಪನಾದ ಸಮುದ್ರ ರಾಜನನ್ನು ಸೇರಿದಂತಾಯಿತೆಂದೂ ಅವರು ಏಕವಾಕ್ಯದಿಂದ ಹೇಳಿದರು. ಆ ಮಾತುಗಳು [illegible] ಆಸೆಯಿಂದ ಬಂದಿದ್ದ ಇತರ ರಾಜರುಗಳಿಗೆ ಕರ್ಣಕಠೋರವಾಗಿದ್ದುವು ಒಂದು ಕಡೆ ಅಜಕುಮಾರನ ಮತ್ತು ಅವನ ಪರಿವಾರದವರ ಮುಖಗಳು ಉಲ್ಲಾಸದಿಂದ ಅರಳಿದ್ದುವು. ಮತ್ತೊಂದು ಕಡೆ ಸಭೆಯಲ್ಲಿದ್ದ ರಾಜಮಂಡಲದವರ ಮುಖಗಳು ದುಗುಡದಿಂದ ಕಳೆಗುಂದಿದ್ದುವು, ಸಭೆಯು ಉಷಃಕಾಲದಲ್ಲಿ ಪ್ರಫುಲ್ಲವಾದ ಪದ್ಮಗಳಿಂದಲೂ, ಕಳೆಗುಂದಿ ಮುದುಡಿಕೊಂಡಿದ್ದ ಕುಮುದಗಳಿಂದಲೂ ತುಂಬಿದ ಸರೋವರದಂತಿದ್ದಿತು

## ಏಳನೆಯ ಪರಿಚ್ಛೇದ

### ಇಂದುಮತೀ ಪಾಣಿಗ್ರಹಣ

ಕುಮಾರಸ್ವಾಮಿಯನ್ನು ಪಡೆದ ದೇವಸೇನಾದೇವಿಯಂತೆ ಅನುರೂಪ ನಾದ ವರನನ್ನು ಪಡೆದಿದ್ದ ತನ್ನ ಸೋದರಿಯಾದ ಇಂದುಮತಿಯನ್ನು ವಿದರ್ಭನಾಥನಾದ ಭೋಜರಾಜನು ಪುರಪ್ರವೇಶ ಮಾಡಿಸಲು ಸಿದ್ಧನಾಗಿ ರುವಲ್ಲಿ, ಸ್ವಯಂವರ ಮಂಟಪದಲ್ಲಿ ನೆರೆದಿದ್ದ ಇತರ ರಾಜರುಗಳೂ ರಾಜ ಕುಮಾರರೂ ಪ್ರಭಾತಕಾಲದ ಚಂದ್ರನಂತೆಯೂ, ನಕ್ಷತ್ರಗಳಂತೆಯೂ ಕಳೆಗುಂದಿದ್ದರು ವ್ಯರ್ಥ ಮನೋರಥರಾಗಿದ್ದ ಅವರೆಲ್ಲರೂ ಇಂದು ಮತಿಯು ತಮ್ಮನ್ನು ವರಿಸದೆ ಹೋದುದಕ್ಕಾಗಿ ತಮ್ಮ ರೂಪವನ್ನೂ, ಅಲಂ ಕಾರವನ್ನೂ ನಿಂದಿಸಿಕೊಳ್ಳುತ್ತ ತಮ್ಮ ತಮ್ಮ ಬಿಡಿಗಳಿಗೆ ಹಿಂದಿರುಗಿದರು. ಅವರೆಲ್ಲರೂ ಅಜಕುಮಾರನಲ್ಲಿ ಮತ್ಸರವು ಮೂಡಿದ್ದರೂ ಅವರು ಅವನ ಮೇಲೆ ಕೈ ಮಾಡಲಿಲ್ಲ ಸೌಮಂಗಲ್ಯ ದೇವತೆಯಾದ ಇಂದ್ರಾಣಿಯ ಸಾನ್ನಿಧ್ಯವಿದ್ದುದರಿಂದ ಸ್ವಯಂವರ ಮಂಟಪದಲ್ಲಿ ಅವರು ಕ್ಷೋಭೆ ಹೊಂದಿ ಅಜಕುಮಾರನ ಮೇಲೆ ಕೈಮಾಡಲಿಲ್ಲ ಅವರೆಲ್ಲರೂ ತಮ್ಮ ತಮ್ಮ ಶಿಬಿರಾಭಿಮುಖವಾಗಿ ಹೊರಡುತ್ತಿರುವಲ್ಲಿ, ನೂತನ ವಧೂವರರು ಪುಷ್ಪಾದ್ರಿ ಗಳಿಂದ ಪ್ರಸಾರಿತವಾಗಿದ್ದ ರಾಜ ಮಾರ್ಗದ ಬಳಿಗೆ ಸೇರಿದರು ರಾಜ ಮಾರ್ಗದುದ್ದಕ್ಕೂ ಅಲ್ಲಲ್ಲಿ ನೂತನ ವಧೂವರರ ಗೌರವಾರ್ಥವಾಗಿ ಕಲಿ ತವಾಗಿದ್ದ ತೋರಣಾಂಕಗಳು * ವಿವಿಧ ವರ್ಣಗಳಿಂದ ಕೂಡಿ ಕಾಮನ ಬಿಲ್ಲಿನಂತೆ ಕಂಗೊಳಿಸುತ್ತಿದ್ದವು ಧ್ವಜಗಳ ನೆರಳು ಬಿಸಿಲಿನ ಕಾವನ್ನು ಕಡಮೆಮಾಡುತ್ತಿದ್ದಿತು ರಾಜಮಾರ್ಗದ ಉಭಯ ಪಾರ್ಶ್ವಗಳಲ್ಲಿಯೂ ದೊಡ್ಡ ದೊಡ್ಡ ಸೌಧಗಳಿದ್ದುವು ಅವುಗಳ ಕಿಟಕಿಗಳು ಸುವರ್ಣ ನಿರ್ಮಿತ ವಾಗಿದ್ದುವು, ಪುರಾಂಗನೆಯರು ಜಡೆ ಹಾಕಿಕೊಳ್ಳುತ್ತಿದ್ದುದೇ ಮುಂತಾದ ಇತರ

---

* ದೊಡ್ಡವರು ಪುರಪ್ರವೇಶಮಾಡುವ ಕಾಲದಲ್ಲಿ ಈಗ ತೋರಣಾಂಕಗಳನ್ನು ( Triumphal Arches ) ಏರ್ಪಡಿಸುವಂತೆಯೇ ಕಾಲಿದಾಸ ಕವಿಯ ಕಾಲದ ಲ್ಲಿಯೂ ಏರ್ಪಡಿಸುತ್ತಿದ್ದುದನ್ನು ಅವನು ಅಜನ ಕಾಲಕ್ಕೆ ಹೊಂದಿಸಿ ವರ್ಣಿಸಿದ್ದಾನೆ.

ಕಾರ್ಯಗಳನ್ನು ಬಿಟ್ಟು ನೂತನ ವಧೂವರರ ಮೆರೆವಣಿಗೆಯನ್ನು ನೋಡಲು ಕಿಟಕಿಯ ಬಳಿಗೆ ತ್ವರೆಯಿಂದ ಬಂದರು. ಒಬ್ಬಾಕೆಯು ಓಡಿಬಂದ ರಭಸಕ್ಕೆ ತಲೆ ಗಂಟುಬಿಚ್ಚಿ ಹೋಗಿ ಅವಳು ತನ್ನ ಕೂದಲನ್ನು ಕೈಯಲ್ಲಿ ಹಿಡಿದು ಮತ್ತೆ ಗಂಟು ಹಾಕಿಕೊಳ್ಳುವುದಕ್ಕೆ ಮುಂಚಿತವಾಗಿಯೇ ಮೆರೆವಣಿಗೆಯನ್ನು ನೋಡುವ ಉತ್ಸಾಹದಿಂದಲೂ ಆತುರದಿಂದಲೂ ಕಿಟಕಿಯ ಬಳಿಗೆ ಬಂದಳು. ಮತ್ತೊಬ್ಬಳು ತನ್ನ ಅಂಗಾಲಿಗೆ ಲಾಕ್ಷಾರಸ ಲೇಪನಮಾಡಿಸಿಕೊಳ್ಳುವುದಕ್ಕಾಗಿ ತನಗೆ ಅಲಂಕಾರ ಮಾಡುತ್ತಿದ್ದ ಪ್ರಸಾಧಿಕೆಯೆಂಬ ಚಾರಕಳ ಕಡೆಗೆ ಕಾಲನ್ನು ನೀಡಿದ್ದಳು. ಅವಳು ತನ್ನ ಅಂಗಾಲಿಗೆ ಅದರ ಲೇಪನವು ನಡೆಯುತ್ತಿರುವಾಗಲೇ ಕಾಲನ್ನು ಹಿಂದಕ್ಕೆಳೆದುಕೊಂಡು ಓಡಿದಳು. ಅವಳ ಅಂಗಾಲಿನ ಲಾಕ್ಷಾರಸವು ಇನ್ನೂ ಒಣಗಿರಲಿಲ್ಲ. ಅವಳು ಕಿಟಕಿಯ ವರೆಗೂ ಹೆಜ್ಜೆಗಳನ್ನೂರಿದ ಕಡೆಗಳಲ್ಲೆಲ್ಲ ನೆಲದಮೇಲೆ ಲಾಕ್ಷಾರಸದ ಗುರುತುಬಿದ್ದಿತು. ಮತ್ತೊಬ್ಬಳು ಬಲಗಣ್ಣಿಗೆ ಕಾಡಿಗೆಯನ್ನು ಲೇಪಿಸಿಕೊಂಡಿದ್ದಳು. ಅವಳು ಎಡಗಣ್ಣಿಗೆ ಕಾಡಿಗೆಯನ್ನು ಲೇಪಿಸಿಕೊಳ್ಳದೆಯೇ ಕಾಡಿಗೆಯ ಶಲಾಕೆಯನ್ನೂ ಕೈಯಲ್ಲಿ ಹಿಡಿದು ಕಿಟಕಿಯ ಬಳಿಗೆ ಓಡಿಬಂದಳು. ಮತ್ತೊಬ್ಬಳು ಪೂರ್ತಿಯಾಗಿ ಇನ್ನೂ ಸೀರೆಯನ್ನುಟ್ಟಿರಲಿಲ್ಲ. ಅವಳು ಅಂದವಾಗಿ ಸೀರೆಯನ್ನುಡುವ ಕೆಲಸವನ್ನೇ ಪೂರೈಸದೆ, ಮನಸ್ಸಿಗೆಯಾಗಿ ಸೀರೆಯನ್ನು ತನ್ನ ಮೈಗೆ ಸುತ್ತಿಕೊಂಡು ಅದರ ಕೊನೆಯನ್ನು ಕೈಯಲ್ಲಿ ಹಿಡಿದುಕೊಂಡು ಕಿಟಕಿಯ ಕಡೆಗೆ ನೆಟ್ಟ ದೃಷ್ಟಿಯಿಂದ ಓಡಿಬಂದಳು. ಅವಳ ಆಭರಣಗಳ ಕಾಂತಿಯು ಅವಳ ಉದರ ಪ್ರದೇಶವನ್ನು ಬೆಳಗುತ್ತಿದ್ದಿತು. ಮತ್ತೊಬ್ಬಳು ಮೇಖಲೆಯನ್ನು ಧರಿಸುವ ಉದ್ದೇಶದಿಂದ ರತ್ನಮಣಿಗಳನ್ನು ಪೋಣಿಸುತ್ತಿದ್ದಳು. ವಧೂವರರ ಮೆರೆವಣಿಗೆಯನ್ನು ನೋಡಲು ಓಡಿಬಂದ ಸಂಭ್ರಮದಲ್ಲಿ ರತ್ನ ಮಣಿಗಳೆಲ್ಲ ಹೆಜ್ಜೆ ಹೆಜ್ಜೆಗೂ ಕೆಳಕ್ಕೆ ಬಿದ್ದುಹೋಗಿ ಸೂತ್ರವು ಮಾತ್ರ ತನ್ನ ಕೈಯ ಹೆಬ್ಬೆರಳಿಗೆ ತಗುಲಿಕೊಂಡಿದ್ದುದರ ಪರಿಜ್ಞಾನವೇ ಅವಳಿಗಿರಲಿಲ್ಲ. ಸೌಧಗಳ ಕಿಟಕಿಗಳ ಬಳಿಯಲ್ಲಿ ಆ ಆ ಸೌಧದ ಸ್ತ್ರೀಯರು ತುಂಬಿಕೊಂಡಿದ್ದರು. ದೇಹಪುಷ್ಟಿಗಾಗಿ ಆಸವವನ್ನು ಸೇವಿಸಿದ್ದ ಮಹಿಳೆಯರ ಬಾಯಿಗಳು ಆಸವಗಂಧದಿಂದ ಕೂಡಿದ್ದುವು.

ವಿಲೋಲನೇತ್ರೆಯರಾಗಿದ್ದ ಅವರು ಭ್ರಮರಗಳಂತಿದ್ದ ತಮ್ಮ ಕಣ್ಣುಗುಡ್ಡೆಗಳನ್ನು ತಿರುಗಿಸಿ ದೃಷ್ಟಿಯನ್ನು ಪಸರಿಸುತ್ತ ವಧೂವರರನ್ನು ನೋಡುವ ಕುತೂಹಲದಿಂದ ಮುಗ್ಧರಾಗಿ ಕಿಟಕಿಗಳ ಬಳಿಯಲ್ಲಿ ನಿಂತಿದ್ದರು. ಕಿಟಕಿಗಳಿಗೆ ಕಮಲಗಳಿಂದ ಅಲಂಕಾರ ಮಾಡಿದ್ದಂತೆ ಆಗಿನ ದೃಶ್ಯವು ಶೋಭಿಸಿತು.

ಕಿಟಕಿಗಳ ಬಳಿ ಹಾಗೆ ತುಂಬಿಕೊಂಡಿದ್ದ ಸ್ತ್ರೀಯರು ಮತ್ತಾವ ವಿಷಯಾಂತರಗಳೂ ಇಲ್ಲದೆ ಆ ಅಜಕುಮಾರನ ರೂಪವನ್ನು ತಮ್ಮ ದೃಷ್ಟಿಯಿಂದ ಹೀರುವರೋ ಎಂಬಂತೆ ಅವನನ್ನು ನೋಡುತ್ತಿದ್ದರು. ಶ್ರವಣೇಂದ್ರಿಯವೇ ಮುಂತಾದ ಇತರ ಇಂದ್ರಿಯಗಳ ವೃತ್ತಿಗಳೆಲ್ಲ ನೇತ್ರೇಂದ್ರಿಯವನ್ನು ಪ್ರವೇಶಿಸಿ ನೇತ್ರೇಂದ್ರಿಯದಲ್ಲಿ ಮಾತ್ರವೇ ಕೇಂದ್ರೀಕೃತವಾಗಿದ್ದುವೋ ಎಂದು ತೋರುವಂತೆ ಅವರು ರಘುವಿನ ಮಗನಾದ ಅಜಕುಮಾರನನ್ನು ದೃಷ್ಟಿಸಿ ನೋಡುತ್ತಿದ್ದರು. ಅವರೆಲ್ಲರೂ, "ಇತರ ಅನೇಕ ಭೂಪತಿಗಳು ತನ್ನನ್ನು ವರಿಸಲಿಚ್ಛಿಸಿದರೂ, ಇಂದುಮತಿಯು ಅವರಲ್ಲಾರನ್ನೂ ವರಿಸದೆ -- ಲಕ್ಷ್ಮೀದೇವಿಯು ನಾರಾಯಣನನ್ನು ವರಿಸಿದಂತೆ-ಅಜನನ್ನು ವರಿಸಿದುದು ಯುಕ್ತವೇ ಸರಿ. ಇವಳು ಮತ್ತಾರನ್ನು ವರಿಸಿದ್ದರೂ ಇವಳಿಗೆ ಅನುರೂಪನಾದ ವರನು ಲಭಿಸಿದಂತಾಗುತ್ತಿರಲಿಲ್ಲ. ಈ ದಂಪತಿಗಳು ಪರಸ್ಪರವಾಗಿ ಒಬ್ಬರ ರೂಪವನ್ನು ಮತ್ತೊಬ್ಬರು ಬಯಸುವಷ್ಟು ಸೌಂದರ್ಯದಿಂದ ಶೋಭಿಸುತ್ತಿದ್ದಾರೆ. ಹಾಗೆ ಪರಸ್ಪರ ಸ್ಪೃಹಣೀಯ ಸೌಂದರ್ಯವುಳ್ಳವರಾದ ಇವರಿಬ್ಬರನ್ನೂ ದಂಪತಿಗಳಾಗಿ ಒಟ್ಟುಗೂಡಿಸದೆ ಹೋಗಿದ್ದರೆ, ವಿಧಾತನು ಇವರಿಬ್ಬರಿಗೂ ಇಷ್ಟು ಸ್ಫುರದ್ರೂಪವನ್ನು ಕೊಟ್ಟು ಸೃಷ್ಟಿಸಿದುದೇ ವ್ಯರ್ಥವಾಗುತ್ತಿದ್ದಿತು. ನಿತ್ಯ ದಂಪತಿಗಳಾದ ರತಿ ಮನ್ಮಥರೇ ಈಗ ಮನುಷ್ಯದೇಹಗಳನ್ನು ಧರಿಸಿ ಈ ರೂಪದಲ್ಲಿ ಬಂದಿರಬೇಕು. ಆದುದರಿಂದಲೇ ಸಾವಿರಾರು ಮಂದಿ ರಾಜರುಗಳು ಸೇರಿದ್ದ ಸ್ವಯಂವರ ಸಭೆಯಲ್ಲಿ ಉಳಿದವರೆಲ್ಲರನ್ನೂ ಬಿಟ್ಟು ಈ ಬಾಲೆಯು ತನಗೆ ಅನುರೂಪನಾದ ಅಜಕುಮಾರನನ್ನೇ ಆರಿಸಿದ್ದಾಳೆ. ಜನ್ಮಾಂತರ ಸಂಗತಿಯನ್ನು ಅರಿಯುವ ಶಕ್ತಿಯು ಮನಸ್ಸಿಗುಂಟೆಂದು ತೋರುತ್ತದೆ. ಆದುದರಿಂದಲೇ

ಜನ್ಮಾಂತರದ ತನ್ನ ಸಾಹಚರ್ಯವನ್ನು ಸ್ಮರಿಸಿಕೊಂಡು ಇವಳು ಅಜಕುಮಾರನನ್ನು ಆರಿಸಿರಬೇಕು" ಎಂದು ಮಾತನಾಡಿಕೊಳ್ಳುತ್ತಿದ್ದರು

ಪುರವಧುಗಳು ಆಡಿಕೊಳ್ಳುತ್ತಿದ್ದ ಕಿವಿಗಿಂಪಾಗಿದ್ದ ಮಾತುಗಳನ್ನು ಕೇಳುತ್ತ ಅಜಕುಮಾರನು ಮುಂದುವರಿದು ಮಂಗಳಕರವಾದ ಅಲಂಕಾರಗಳಿಂದ ಶೋಭಿಸುತ್ತಿದ್ದ (ವಿದರ್ಭರಾಜನ) ಅರಮನೆಯ ಸಮೀಪಕ್ಕೆ ಸೇರಿದನು. ಒಡನೆಯೇ ಅವನು ತಾನು ಕುಳಿತಿದ್ದ ಹೆಣ್ಣಾನೆಯ ಮೇಲಿನ ಅಂಬಾರಿಯಿಂದಿಳಿದು ಕಾಮರೂಪದೇಶದ ರಾಜನಿತ್ತ ಹಸ್ತಲಾಘವವನ್ನು ಸ್ವೀಕರಿಸಿ ವಿದರ್ಭರಾಜನು ತೋರಿಸಿದ ವಿವಾಹ ಮಂಟಪಕ್ಕೆ ಹೋದನು ಅವನು ಸರಿಯಾದ ವರನೆಂದು ಅಲ್ಲಿ ಸೇರಿದ್ದ ನಾರಿಯರೆಲ್ಲರೂ ನಿರ್ಧರಿಸಿದುದರಿಂದ ಅವನು ಅವರ ಮನಸ್ಸನ್ನೇ ಪ್ರವೇಶಿಸಿದನೋ ಎಂಬಂತೆ ತೋರಿತು ವಿದರ್ಭರಾಜನಾದ ಭೋಜನು ಅಮೂಲ್ಯವಾದ ರತ್ನಸಿಂಹಾಸನದಲ್ಲಿ ಅಜಕುಮಾರನನ್ನು ಕುಳ್ಳಿರಿಸಿ ರತ್ನಗಳಿಂದಲೂ ಪೂಜಾಸಾಮಗ್ರಿಗಳಿಂದಲೂ ಅರ್ಘ್ಯವನ್ನಿತ್ತು ಮಧುಪರ್ಕವನ್ನು ಸಮರ್ಪಿಸಿದ ಮೇಲೆ ದುಕೂಲಯುಗ್ಮವನ್ನು ಉಡುಗೊರೆಯಾಗಿ ಕೊಟ್ಟನು ಅಲ್ಲಿದ್ದ ಮಹಿಳೆಯರೆಲ್ಲರೂ ಓರೆನೋಟದಿಂದ ಅವನನ್ನು ನೋಡುತ್ತಿದ್ದರು ಭೋಜರಾಜನು ಕೊಟ್ಟ ರೇಷ್ಮೆಯ ದುಕೂಲವನ್ನು ಧರಿಸಿದ ಅಜಕುಮಾರನನ್ನು ಅಂತಃಪುರದ ಅಧಿಕಾರವನ್ನು ವಹಿಸಿದ್ದ ವಿನೀತರು—ಸ್ಫುಟವಾದ ಬಿಳಿಯ ನೊರೆಯ ಸಮೂಹದಿಂದ ಕೂಡಿ ಉಕ್ಕುತ್ತಿರುವ ಸಮುದ್ರವನ್ನು ಚಂದ್ರಕಿರಣಗಳು ಅದರ ಸೀಮಾ ಸಮೀಪಕ್ಕೆ ಕರೆದೊಯ್ಯುವಂತೆ—ವಧುವಿನ ಸಮೀಪಕ್ಕೆ ಕರೆದೊಯ್ದರು *

ಅಗ್ನಿಯಂತೆ ತೇಜಸ್ವಿಯಾಗಿದ್ದ ಭೋಜರಾಜ ಪುರೋಹಿತನು ಆಜ್ಯಾದಿಗಳನ್ನುಪಯೋಗಿಸಿ ಹೋಮ ಮಾಡಿ ಅಗ್ನಿಯನ್ನರ್ಚಿಸಿ, ಅಗ್ನಿಸಾಕ್ಷಿಯಾಗಿ

---

* ಕಾಂತಿಮತಿಯರಾದ ಅಂತಃಪುರದ ಸ್ತ್ರೀಯರ ಕೋಮಲಕೆ, ಸಂತೋಷದಿಂದ ಉಕ್ಕಿ ಬಿಳಿಯನೊರೆಯ ರೂಪದ ಬೆಳ್ನಗೆಯಿಂದ ಕೂಡಿದ್ದ ಈ ಸಮುದ್ರದಂತೆ ಗಾಂಭೀರ್ಯದಿಂದ ತುಂಬಿದ ಅಜಕುಮಾರ, ವಧುವಿನ ಸಮೀಪದಿಂದ ಅವನು ಮುಂದಕ್ಕೆ ಹೋಗಬೇಕಾಗಿಲ್ಲದಿದ್ದುದರಿಂದ ಅದೇ ಸೀಮಾರೇಖೆಯೆಂಬ ಸೂಚನೆ ಇವೆಲ್ಲದರಿಂದ ಕೂಡಿದ ಪೂರ್ಣ ದೃಷ್ಟಾಂತ

ವಧೂವರರ ವಿವಾಹಕರ್ಮವನ್ನು ಸಾಂಗವಾಗಿ ನೆರವೇರಿಸಿದನು. ಇಂದುಮತಿ ಯನ್ನು ಪಾಣಿಗ್ರಹಣಮಾಡಿಕೊಂಡು ತನ್ನ ಕೈಯಲ್ಲಿ ಅವಳ ಕೈಯನ್ನು ಹಿಡಿದಿದ್ದ ಆ ರಾಜಕುಮಾರನು-ಚೂತವೃಕ್ಷದ ಚಿಗುರು ಅಶೋಕಲತೆಯ ಚಿಗುರಿಗೆ ಸೋಂಕಿದಂತೆ-ಶೋಭಿಸಿದನು ಇಂದುಮತಿಯ ಪಾಣಿಗ್ರಹಣದಿಂದ ಅಜಕುಮಾರನ ಮಣಿಕಟ್ಟಿನ ಮತ್ತು ಮುಂಗೈಯಿನ ಪ್ರದೇಶವು ರೋಮಾಂಚನಹೊಂದಿ ಕಂಟಕಿತವಾಯಿತು. ಅಜಕುಮಾರನು ಹಿಡಿದಿದ್ದ ಇಂದುಮತಿಯ ಬೆರಳುಗಳು ಬೆವರಿದುವು ಅವರೀರ್ವರೂ ನೋಡಬೇಕೆಂಬ ಅಭಿಲಾಷೆಯುಂಟಾಯಿತು ಅವರಿಬ್ಬರೂ ಅನ್ಯೋನ್ಯವಾಗಿ ಒಬ್ಬರ ಮುಖವು ಮತ್ತೊಬ್ಬರಿಗೆ ಕಾಣುವವರೆಗೂ ಅಪಾಂಗವನ್ನು ಪಸರಿಸಿ ಒಡನೆಯೇ ಲಜ್ಜಾಭರದಿಂದ ತಮ್ಮ ಲೋಲದೃಷ್ಟಿಯನ್ನು ಹಿಂತಿರುಗಿಸಿದರು ನೂತನವಾಗಿ ವಿವಾಹಿತರಾದ ಅವರಿಬ್ಬರೂ ಹೋಮಾಗ್ನಿಜ್ವಾಲೆಯನ್ನು ಪ್ರದಕ್ಷಿಣ ಮಾಡುತ್ತಿರುವಲ್ಲಿ ಮೇರುವಿನ ಸುತ್ತಲೂ ಚಲಿಸುತ್ತ ಅನ್ಯೋನ್ಯ ಸಂಸಕ್ತವಾದ ದಿವಾರಾತ್ರಿಗಳಂತೆ ಶೋಭಿಸಿದರು † ವಿಧಾತನ ಪ್ರತೀಕದಂತಿದ್ದ ಪುರೋಹಿತನ ಆಜ್ಞೆಯಂತೆ ಮತ್ತ ಚಕೋರನೇತ್ರೆಯೂ ಲಜ್ಜಾವತಿಯೂ ಆದ ಇಂದುಮತಿಯು ಅಗ್ನಿಯಲ್ಲಿ ಲಾಜಾಂಜಲಿಯನ್ನು ಸಮರ್ಪಿಸಿದಳು ‡ ಹವಿಸ್ಸನ್ನೂ ಶಮೀಪಲ್ಲವವನ್ನೂ ಮತ್ತು ಲಾಜವನ್ನೂ ಅಗ್ನಿಯಲ್ಲಿ ಹೋಮಮಾಡಿದಾಗ ಹೋಮಾಗ್ನಿಯಿಂದ ಮೇಲಕ್ಕೆದ್ದ ಸುಗಂಧಯುಕ್ತವಾದ ಪುಣ್ಯಧೂಮವು ಇಂದುಮತಿಯ ಕಪೋಲಗಳಲ್ಲಿ ಪಸರಿಸಿತು ಅದನ್ನು ನೋಡಿದರೆ ಅವಳು ನೀಲೋತ್ಪಲವನ್ನು ಕರ್ಣಾಭರಣಕ್ಕಾಗಿ ಉಪಯೋಗಿಸಿದಂತೆ ಕಂಡಿತು ಹೊಗೆಯಿಂದ ಅವಳು ಕಂಬನಿದುಂಬಿದಾಗ ಆ ಕಣ್ಣೀರಿನಲ್ಲಿ ಕಣ್ಣಿನ ಕಾಡಿಗೆಯು ಕದಡಿಹೋಗಿ

† ಇಂದುಮತಿಯು ಹಗಲಿನಂತೆಯೂ ಅಜಕುಮಾರನು ರಾತ್ರಿಯಂತೆಯೂ ಇದ್ದರೆಂಬ ಹೋಲಿಕೆಯಿಂದ ಅಜಕುಮಾರನು ಬಹಳ ಸುಂದರನಾಗಿದ್ದರೂ, ಇಂದುಮತಿಯು ಹಗಲಿನಂತಿದ್ದರೆ ಅವನು ರಾತ್ರಿಯಂತಿದ್ದನೆಂದು ಕವಿಯು ಸೂಚಿಸಿದ್ದಾನೆ.

* ಹೋಮಾಗ್ನಿಯ ಮಧ್ಯೆ ಕುಳಿತು ಹೊಗೆಯಿಂದ ಕಣ್ಣುಗಳು ಕೆಂಪೇರಿದ್ದ ಅವಳನ್ನು ಮತ್ತ ಚಕೋರನೇತ್ರೆಯೆಂದು ಕರೆದು (ಕಣ್ಣುಗಳು ಕೆಂಪಾಗಿರುವ) ಮುದ್ದುಹಕ್ಕಿಯ ಕಣ್ಣುಗಳಿಗೆ ಅವಳ ಕಣ್ಣುಗಳನ್ನು ಹೋಲಿಸಿರುವುದು ಮನೋಹರವಾಗಿದೆ.

ಪಸರಿಸಿತು ಯವಾಂಕುರ ಕರ್ಣಪೂರವು ಬಾಡಿದ್ದಿತು. ಧೂಮಗ್ರಹಣ ದಿಂದ ಅವಳ ಕೆನ್ನೆಗಳು ಪಾಟಲವರ್ಣಕ್ಕೆ ತಿರುಗಿ ಶೋಭಿಸುತ್ತಿದ್ದುವು. ಕನಕಾಸನದಲ್ಲಿ ಮಂಡಿಸಿದ್ದ ಆ ನೂತನವಧೂವರರ ಮೇಲೆ, ಬ್ರಾಹ್ಮಣರೂ, ರಾಜಬಂಧುಗಳೂ, ರಾಜನೂ, ಪುರಂಧ್ರಿಯರೂ ಅಕ್ಷತಾರೋಪಣವಾಡಿ ಆಶೀರ್ವದಿಸಿದರು

ಕುಲಪ್ರದೀಪನಾದ ಭೋಜರಾಜನು ತನ್ನತಂಗಿಯ ವಿವಾಹಮಹೋತ್ಸ ವವು ನೆರವೇರುವಂತೆ ಮಾಡಿದ ಬಳಿಕ, ಅಲ್ಲಿ ನೆರೆದಿದ್ದರಾಜರುಗಳಲ್ಲಿ ಪ್ರತಿ ಯೊಬ್ಬನನ್ನೂ ಸನ್ಮಾನಿಸಬೇಕೆಂದು ತನ್ನ ಅಧಿಕಾರಿಗಳಿಗೆ ಆಜ್ಞೆಮಾಡಿದನು. ಅವರೆಲ್ಲರೂ ತಮ್ಮ ಮನಸ್ಸಿನಲ್ಲಿ ಅಜಕುಮಾರನ ಮೇಲಿನ ಮತ್ಸರವು ತುಂಬಿ ದ್ದರೂ ಕೃತ್ರಿಮ ಮಂದಹಾಸವನ್ನು ನೂಸುತ್ತ ಒಳಗೆ ಕ್ರೂರವಾದ ಮೊಸಳೆ ಗಳು ತುಂಬಿದ್ದರೂ ಗಭೀರಜಲದಿಂದ ಕೂಡಿದ ಮಡುಗಳಂತಿದ್ದರು ವಿದರ್ಭ ರಾಜನಾದ ಭೋಜನು ತಮ್ಮನ್ನು ಸನ್ಮಾನಿಸಿದ್ದುದಕ್ಕೆ ಪ್ರತಿಯಾಗಿ ತಾವೂ ಅವನನ್ನು ಸನ್ಮಾನಿಸಿ ಅರಮನೆಯನ್ನು ಬಿಟ್ಟು ತೆರಳಿದರು ಅವರೆಲ್ಲರೂ, ತಮ್ಮ ಉದ್ದೇಶ ಸಾಧನೆಗಾಗಿ ಒಳಸಂಚನ್ನು ನಡೆಯಿಸಿ ಇಂದುಮತೀ ಸಮೇತವಾಗಿ ಅಜಕುಮಾರನು ತನ್ನ ರಾಜ್ಯಕ್ಕೆ ಪ್ರಯಾಣ ಮಾಡುವಾಗ್ಗೆ ಮಾರ್ಗಮಧ್ಯದಲ್ಲಿ ಅವನನ್ನು ಆಕ್ರಮಣಮಾಡಿ ಯುದ್ಧ ಮಾಡಬೇಕೆಂದು ಆಲೋಚಿಸಿದರು

ವಿವಾಹ ಮಹೋತ್ಸವವು ಸಾಂಗವಾಗಿ ಪೂರೈಸಿದ ತರುವಾಯ ವಿದ ರ್ಭಾಧಿಪತಿಯಾದ ಭೋಜರಾಜನು ಯಥಾ ಶಕ್ತಿಯಾಗಿ ತನ್ನ ತಂಗಿಗೆ ನಾನಾ ಸುವಸ್ತುಗಳನ್ನು ಕೊಟ್ಟು ರಘುಪುತ್ರನಾದ ಅಜಕುಮಾರನೊಡನೆ ಅವಳನ್ನು ಉತ್ತರ ಕೋಸಲಕ್ಕೆ ಪ್ರಯಾಣಮಾಡಿಸಿ ತಾನೂ ಅವರೊಡನೆ ಹೊರಟನು. ಕುಂಡಿನ ನಗರದ ರಾಜನಾದ ಭೋಜನು ಅವರೊಡನೆ ಮರುದಿನ ಪ್ರಯಾಣ ಮಾಡಿ ಅನಂತರ-ಪರ್ವಕಾಲವು ಕಳೆದ ಮೇಲೆ ಸೂರ್ಯನ ಬಳಿಯಿಂದ ಹಿಂತಿ ರುಗುವ ಚಂದ್ರನಂತೆ-ಹಿಂದಕ್ಕೆ ಪ್ರಯಾಣ ಮಾಡಿದನು. ನೂತನ ದಂಪತಿಗಳು ಮುಂದಕ್ಕೆ ಹೊರಟರು ಸ್ವಯಂವರಕ್ಕಾಗಿ ಬಂದಿದ್ದ ಇತರ ರಾಜರಲ್ಲಿ ಪ್ರತಿಯೊಬ್ಬನಿಗೂ ಸ್ವಲ್ಪಕಾಲಕ್ಕೆ ಹಿಂದೆ ತಮ್ಮನ್ನು ಯುದ್ಧದಲ್ಲಿ ಸೋಲಿಸಿ

ಕಪ್ಪಕಾಣಿಕೆಗಳನ್ನು ಸ್ವೀಕರಿಸಿದ್ದ ರಘುಚಕ್ರೇಶ್ವರನ ಮೇಲೆ ರೋಷವಿದ್ದಿತ್ತು. ಈಗ ಅದೇ ರಘುಚಕ್ರೇಶ್ವರನ ಮಗನಿಗೆ ಸ್ತ್ರೀರತ್ನ ಲಾಭವಾದುದಕ್ಕಾಗಿ ಅವರೆಲ್ಲರೂ ಖತಿಗೊಂಡು ಸಮಸ್ತರೂ ಒಟ್ಟುಗೂಡಿ ಮಾರ್ಗಮಧ್ಯದಲ್ಲಿ ಅವನನ್ನೆದುರಿಸಲು ಅನುವಾದರು

ಕನ್ಯೆಯಾದ ಇಂದುಮತಿಯೊಡನೆ ಪ್ರಯಾಣಮಾಡುತ್ತಿದ್ದ ಅಜಕುಮಾರನನ್ನು ಉದ್ಧತರಾದ ರಾಜ ಸಂಘಾತದವರೆಲ್ಲರೂ-ಬಲಿಚಕ್ರವರ್ತಿಯು ದಾನವನ್ನು ಸ್ವೀಕರಿಸಲುದ್ಯುಕ್ತನಾಗಿದ್ದ ತ್ರಿವಿಕ್ರಮನ ಪಾದಕ್ಕೆ ಅಡ್ಡಿಮಾಡಿದ ಇಂದ್ರ ಶತ್ರುವಾದ ರಾಕ್ಷಸರಂತೆ-ಅಡ್ಡಗಟ್ಟಿದರು ಅಜಕುಮಾರನು ಆಯೋಧ್ಯೆಯಿಂದ ತನ್ನೊಡನೆ ಬಂದಿದ್ದು ಮತ್ತೆ ತನ್ನೊಡನೆ ಹಿಂತಿರುಗುತ್ತಿದ್ದ ದೊಡ್ಡ ಸೈನ್ಯದ ಒಂದು ಭಾಗವನ್ನು ತನ್ನ ತಂದೆಯ ಸಚಿವನ ಕೈಕೆಳಗೆ ಇಂದುಮತಿಯ ರಕ್ಷಣೆಗಾಗಿ ನೇಮಿಸಿದನು ಆ ಬಳಿಕ ರಾಜರುಗಳ ಸೈನ್ಯದ ಮುಂದೆ-ಎತ್ತರದಿಂದ ಧುಮ್ಮಿಕ್ಕಿ ಉದ್ವೇಲ ಕಲ್ಲೋಲವಾದ ಶೋಣಾನದವು ಭಾಗೀರಥೀ ನದಿಯೊಡನೆ ಸೇರುವಂತೆ ಸೈನ್ಯ ಸಮೇತನಾಗಿ ಸಮರ ಸನ್ನದ್ಧನಾಗಿ ನಿಂತನು ಪದಾತಿಗಳೊಡನೆ ಪದಾತಿಗಳೂ, ರಥಿಕರೊಡನೆ ರಥಿಕರೂ, ಅಶ್ವಾರೋಹಿಗಳೊಡನೆ ಅಶ್ವಾರೋಹಿಗಳೂ, ಗಜಾರೋಹಿಗಳೊಡನೆ ಗಜಾರೋಹಿಗಳೂ ಕಾದತೊಡಗಿದರು ಸಮಾನ ಪ್ರತಿದ್ವಂದ್ವಿಗಳಿಂದ ಕೂಡಿ ಕಾಳಗವು ನಡೆಯಿತು ತೂರ್ಯಧ್ವನಿಗಳು ಮೊಳಗುತ್ತಿರುವಲ್ಲಿ ಚಾಪಧಾರಿಗಳು ತಮ್ಮ ತಮ್ಮ ಪ್ರಭುಗಳ ಕುಲನಾಮಾದಿಗಳನ್ನು ಪ್ರಶಂಸಿಸುತ್ತಿದ್ದರು, ಅವರವರ ಬಾಣಾಕ್ಷರಗಳೇ ಅವರವರ ಪ್ರಭುಗಳ ಕುಲನಾಮಾದಿಗಳನ್ನು ಪ್ರಶಂಸೆ ಮಾಡುತ್ತಿದ್ದುವು. ಆಗ ನಡೆಯುತ್ತಿದ್ದ ತುಮುಲ ಯುದ್ಧದಲ್ಲಿ ಕುದುರೆಗಳ ಗೊರಸುಗಳಿಂದ ಮೇಲಕ್ಕೆದ್ದ ಕೆಂಧೂಳು ರಥಸಮೂಹದ ಚಲನದಿಂದ ಮೇಲಕ್ಕೆದ್ದ ಕೆಂಧೂಳಿನಿಂದ ಸಾಂದ್ರೀಕೃತವಾಯಿತು, ಆನೆಗಳು ರಭಸದಿಂದ ಕಿವಿಗಳನ್ನು ಅಲುಗಿಸುತ್ತಿದ್ದುದರಿಂದ ಅದು ಸುತ್ತಲೂ ಪಸರಿಸಿ ಒಂದು ತೆರೆಯನ್ನು ಹಿಡಿದಂತೆ ಸೂರ್ಯರಶ್ಮಿಗಳನ್ನು ತಡೆಗಟ್ಟಿತು ಮೀನುಗಳ ಆಕಾರದಂತೆ ರಚಿತವಾಗಿದ್ದ ಮತ್ಸ್ಯಧ್ವಜಗಳು* ಗಾಳಿಯ ಹೊಡೆತ

* ಮೀನುಗಳ ಚಿತ್ರವನ್ನು ಧರಿಸಿದ್ದ ಧ್ವಜಗಳಲ್ಲಿ ಮೀನುಗಳಂತೆಯೇ ಕಾಣುವ ಹಾಗೆ ಬಟ್ಟೆಗಳನ್ನು ಕತ್ತರಿಸಿ ಜೋಡಿಸಿ ಹೊಲಿದಿದ್ದ ಧ್ವಜಗಳು.

ದಿಂದ ಬಾಯಿತೆರೆದು ಕೊಂಡು—ನಿಜವಾದ ಮೀನುಗಳು ಹೊಳೆಯಲ್ಲಿ ಹೊಸದಾಗಿ ಬಂದ ಕೆಂಪುಬಣ್ಣದ ಕದಡು ನೀರನ್ನು ಕುಡಿಯುವಂತೆ—ಸೈನ್ಯರಜರೂಪದ ಒಂಡು ನೀರನ್ನು ಕುಡಿಯುತ್ತಿವೆಯೋ ಎಂಬಂತೆ ತೋರುತ್ತಿದ್ದುವು ಸೂರ್ಯನ ಬೆಳಕೇ ಬೀಳದಷ್ಟು ಮಂದವಾಗಿ ಕೆಂಧೂಳಿನ ತೆರೆಯು ಬಿದ್ದಿದ್ದ ಕಾರಣ, ರಥಿಕರು ರಥಗಳ ಚಕ್ರಗಳ ಸದ್ದಿನಿಂದ ಎದುರಾಳಿಗಳ ರಥಗಳು ಬರುತ್ತಿದ್ದುದನ್ನು ಅರಿಯುತ್ತಿದ್ದರು, ಗಜಾರೋಹಿಗಳು ಆನೆಗಳ ಕೊರಳಿನ ಘಂಟೆಗಳ ಧ್ವನಿಯಿಂದ ಎದುರಾಳಿಗಳ ಆನೆಗಳು ಬರುತ್ತಿದ್ದುದನ್ನು ಅರಿಯಬೇಕಾಗಿದ್ದಿತು ಸ್ವಪಕ್ಷದ ಸೈನಿಕರಾರು ಎಂಬುದರ ಅರಿವಾಗುತ್ತಿದ್ದುದು ಸೈನಿಕರು ತಮ್ಮ ಒಡೆಯರ ಹೆಸರುಗಳನ್ನು ಹೇಳುತ್ತಿದ್ದುದರಿಂದ ಮಾತ್ರವೇ ದಟ್ಟವಾದ ಧೂಳಿನ ತೆರೆಯು ಯುದ್ಧರಂಗದಲ್ಲಿದ್ದವರ ಕಣ್ಣುಗಳನ್ನು ಅಂಧಕಾರದಂತೆ ಆವರಿಸಿರುವಲ್ಲಿ, ಆನೆ ಕುದುರೆಗಳ ಮತ್ತು ಸೈನಿಕರ ದೇಹಗಳಿಗೆ ಶಸ್ತ್ರಾಘಾತವಾಗಿ ಹರಿದ ರಕ್ತಪ್ರವಾಹವು ಬಾಲಾರುಣ ಛಾಯೆಯಂತೆ ತೋರುತ್ತಿದ್ದಿತು ರಕ್ತ ಪ್ರವಾಹವು ಹರಿಯುತ್ತಿದ್ದುದರಿಂದ ಭೂಮಿಗೆ ಸಮೀಪದಲ್ಲಿದ್ದ ಧೂಳಿನ ಭಾಗವು ಸ್ವಲ್ಪಮಟ್ಟಿಗೆ ಅಡಗಿ ಹೋಗಿದ್ದಿತು, ಮೇಲಕ್ಕೆ ಹೋದಂತೆಲ್ಲ ಧೂಳು ಗಾಳಿಯ ಹೊಡೆತದಿಂದ ಹರಡುತ್ತಿದ್ದಿತು, ಅದನ್ನು ನೋಡಿದರೆ, ಬೆಂಕಿಯು ಉರಿಯುತ್ತಿದ್ದಾಗ ಹೊರಟ ಹೊಗೆಯು ತನಿಗೆಂಡಗಳ ಮೇಲ್ಭಾಗವನ್ನು ಆವರಿಸಿ ಮೇಲಕ್ಕೇರುವಂತೆ ತೋರುತ್ತಿದ್ದಿತು ರಥಗಳಲ್ಲಿ ಕುಳಿತು ಯುದ್ಧಮಾಡುತ್ತಿದ್ದವರು ಎದುರು ಕಡೆಯುವರ ಪ್ರಹಾರದಿಂದ ಮೂರ್ಛಿತರಾದಾಗ ಸಾರಥ್ಯ ಧರ್ಮವನ್ನರಿತ ಸಾರಥಿಗಳು ರಥಗಳನ್ನು ಯುದ್ಧರಂಗದಿಂದ ಹಿಂತಿರುಗಿಸಿ ಬೇರೆ ಸ್ಥಳಗಳಿಗೆ ಹೊಡೆದುಕೊಂಡು ಹೋಗಿ ನಿಲ್ಲಿಸುತ್ತಿದ್ದರು ಮೂರ್ಛೆತಿಳಿದೆದ್ದ ವೀರರು ಸಾರಥಿಗಳು ಹಾಗೆ ಮಾಡಿದುದು ಅನುಚಿತವೆಂದು ಅವರ ಮೇಲೆ ಕನಲಿ, ಮತ್ತೆ ರಣರಂಗಕ್ಕೆ ತಮ್ಮ ರಥವನ್ನು ಬಿಡಿಸಿ, ತಮ್ಮನ್ನು ಘಾತಿಸಿದವರನ್ನು (ತಾವು ಮೊದಲು ನೋಡಿದ್ದ) ಧ್ವಜಗಳಿಂದಲೇ ಗುರುತಿಸಿ ಅವರನ್ನು ಮಹಾರಭಸದಿಂದ ತುಡುಕುತ್ತಿದ್ದರು ವೀರಾಗ್ರಣಿಗಳಾದ ಧನುರ್ಧಾರಿ

ಗಳು ರಭಸದಿಂದ ಪ್ರಯೋಗಿಸಿದ ಬಾಣಗಳು ಪರಬಾಣಗಳಿಂದ ಅರ್ಧಮಾರ್ಗದಲ್ಲಿ ಛಿನ್ನವಾದಾಗ್ಯೂ ಕೂಡ, ಅವುಗಳ ವೇಗ ಪ್ರಭಾವದಿಂದ ಪ್ರೂತಿಸಯಾಗಿ ಕೆಳಕ್ಕೆ ಬಿದ್ದು ಹೋಗದೆ, ಅವುಗಳ ಪೂರ್ವಾರ್ಧಭಾಗಗಳಿಂದಲೇ ಹಾರಿ ಬಂದು ಗುರಿಯನ್ನು ಮುಟ್ಟಿ ಘಾತಿಸುತ್ತಿದ್ದುವು ಆನೆಗಳ ಯುದ್ಧದಲ್ಲಿ, ಕ್ಷೌರದ ಕತ್ತಿಗಳಿಗಿಂತಲೂ ಹರಿತವಾಗಿದ್ದ ಚಕ್ರಾಯುಧಗಳಿಂದ ಹಾರಿಸಲ್ಪಟ್ಟ ಮಾವಟಿಗರ ತಲೆಗೂದಲುಗಳು ಮೇಲೆ ಹಾರುತ್ತಿದ್ದ ಗಿಡಗಗಳ ನಖಾಗ್ರಗಳಿಗೆ ಕೊಂಚ ಹೊತ್ತು ತಗುಲಿಕೊಂಡಿದ್ದು ಅನಂತರ ಕೆಳಕ್ಕುರುಳುತ್ತಿದ್ದುವು ಎದುರು ಪಕ್ಷದ ಅಶ್ವಾರೋಹಿಯನ್ನು ಮೊದಲು ಘಾತಿಸಿ ಮೂರ್ಛೆಗೊಳಿಸಿದ ಅಶ್ವಾರೋಹಿ ವೀರನು ತನ್ನ ಪೆಟ್ಟಿನಿಂದ ಮೂರ್ಛಿತನಾಗಿ (ಕುದುರೆಯ ಕತ್ತಿನ ಮೇಲೆ) ಬಿದ್ದವನು ಎಚ್ಚರಗೊಳ್ಳುವವರೆಗೂ ಅವನನ್ನು ಮತ್ತೆ ಘಾತಿಸುತ್ತಿರಲಿಲ್ಲ * ತಮ್ಮ ಪ್ರಾಣಗಳ ಮೇಲಿನ ಆಶೆಯನ್ನೇ ತೊರೆದು ಯುದ್ಧ ಮಾಡುತ್ತಿದ್ದ ಲೋಹ ಕವಚಧಾರಿಗಳಾಗಿದ್ದ ವೀರರು ಒರೆಗಳಿಂದ ಹಿರಿದೆಸೆದ ಕತ್ತಿಗಳು ದಂತಗಳಿಗೆ ತಗುಲಿ ಘಾಯವಾಗಿ ಉರಿಯೆದ್ದಾಗ ಆನೆಗಳು ಸೊಂಡಿಲಿನ ಕೊನೆಯಲ್ಲಿದ್ದ ಹೊಳ್ಳೆಗಳಿಂದ ಶೀತಕರವಾದ ಗಾಳಿಯನ್ನೂದಿ ಕೊಂಡು ಉಪಶಮನವಮಾಡಿಕೊಂಡುವು. ಶಿಲೀಮುಖಗಳಿಂದ ಕತ್ತರಿಸಿ ಹೋಗಿ ನೆಲಕ್ಕುರುಳಿದ್ದ ತಲೆಗಳ ರೂಪದ ಫಲಗಳಿಂದಲೂ, ರಕ್ತ ಪ್ರವಾಹ ರೂಪದ ಮದ್ಯದಿಂದಲೂ ತುಂಬಿದ್ದ ರಣಭೂಮಿಯು ಮೃತ್ಯುವಿನ ಪಾನ ಭೂಮಿಯಂತಿದ್ದಿತು † ಒಬ್ಬ ವೀರನ ಕಡಿದುಹೋದ ಭುಜದಂಡವನ್ನು ಪಕ್ಷಿ

---

* ಮೂರ್ಛಿತರಾದವರನ್ನೂ, ಶರಣಾಗತರಾದವರನ್ನೂ, ಸಮರಭೂಮಿಯಿಂದ ಹಿಂತಿರುಗುತ್ತಿರುವವರೇ ಮುಂತಾದವರನ್ನೂ ಘಾತಿಸಕೂಡದೆಂಬುದು ಹಿಂದಿನ ಕಾಲದ ಯುದ್ಧನಿಯಮಗಳಲ್ಲೊಂದು

† ಹಿಂದೆಯೇ ಮತ್ತೊಂದು ಸಂದರ್ಭದಲ್ಲಿ ಅಡಿಟಿಪ್ಪಣಿಯಲ್ಲಿ ಸೂಚಿಸಿರುವಂತೆ ಕಾಲಿದಾಸ ಮಹಾಕವಿಯು ವೀರಯುಗದಲ್ಲಿದ್ದವನಾದರೂ ಯುದ್ಧವು ಕ್ರೂರಕರ್ಮಿಗಳ ಕಾರ್ಯವೆಂಬುದೇ ಅವನ ಭಾವನೆ ಯುದ್ಧದಲ್ಲಿ ಅಸಹ್ಯಭಾವನೆಯನ್ನುಂಟು ಮಾಡುವುದಕ್ಕಾಗಿ ಅಹಿಂಸಾಪ್ರೇಮಿಯು ಹೀಗೆ ವರ್ಣನೆಮಾಡಿದ್ದಾನೆ ಯುದ್ಧ ಮಾಡಲಿಚ್ಛಿಸುವ ಮದೋನ್ಮತ್ತರು ಮೃತ್ಯುವಿನ ಪಾನಭೂಮಿಗೆ ಆಹ್ವಾನಕೊಡುವವರು–ಎಂದು ಅವನು ಸೂಚಿಸಿದ್ದಾನೆ. ಮುಂದಿನ ವರ್ಣನೆಯೂ ಹೊಗಳಿಕೆಯ ರೂಪದ ವಿಡಂಬನ

ಗಳು ತಿನ್ನುತ್ತಿದ್ದವು ಮಾಂಸಲೋಲುಪವಾದ ಹೆಣ್ಣುನರಿಯೊಂದು ಅವು ಗಳನ್ನೋಡಿಸಿ ಅದನ್ನು ಕಸಿದುಕೊಂಡಿತು ಅದನ್ನು ಆ ನರಿಯು ತಿನ್ನಲು ಪ್ರಾರಂಭಿಸಿದಾಗ ಆ ಭುಜದಲ್ಲಿದ್ದ ಕೇಯೂರದ ಮೊನೆಯಾದ ಅಂಚಿನಿಂದ ಅದರ ಅಂಗುಳು ತರಚಿ ಹೋಯಿತು ಮಾಂಸದ ಮೇಲೆ ತನಗೆ ಆಶೆಯಿದ್ದೂ ಆ ನರಿಯು ನೋವಿನಿಂದ ನರಳುತ್ತ ಭುಜಖಂಡವನ್ನು ತಿನ್ನದೆ ಹೊರಟು ಹೋಯಿತು ಶತ್ರುವಿನ ಖಡ್ಗದಿಂದ ತನ್ನ ಶಿರಸ್ಸನ್ನು ಕಳೆದುಕೊಂಡ ವೀರ ನೊಬ್ಬನು ವೀರಸ್ವರ್ಗದ ದಿವ್ಯ ದೇಹವನ್ನು ಧರಿಸಿ ಸುರಾಂಗನೆಯನ್ನು ತನ್ನ ವಾಮಭಾಗದಲ್ಲಿ ಕುಳ್ಳಿರಿಸಿಕೊಂಡಿದ್ದ ವಿಮಾನದಿಂದ ರಣ ರಂಗವನ್ನು ನೋಡುತ್ತ, ರುಂಡವಿಲ್ಲದ ತನ್ನ ಮುಂಡವು ನರ್ತಿಸುತ್ತಿ ದ್ದುದನ್ನು ಕಂಡನು ಇಬ್ಬರು ರಥಿಕರು ಪರಸ್ಪರವಾಗಿ ಒಬ್ಬನ ಸಾರಥಿಯನ್ನು ಮತ್ತೊಬ್ಬನು ಕೊಂದುದರಿಂದ, ಅವರಿಬ್ಬರೂ ರಥಗಳಿಂದಿ ಳಿದು ಗದೆಗಳಿಂದ ಯುದ್ಧ ಮಾಡಿದರು ಕೊನೆಗೆ ಪರಸ್ಪರವಾಗಿ ಒಬ್ಬನ ಗದೆಯನ್ನು ಮತ್ತೊಬ್ಬನು ಒಡೆದು ಪುಡಿಮಾಡಿದುದರಿಂದ ಭಗ್ನಾಯುಧರಾಗಿ ಬಾಹು ಯುದ್ಧಮಾಡಲಾರಂಭಿಸಿದರು ಮತ್ತಿಬ್ಬರು ವೀರರು ಪರಸ್ಪರವಾಗಿ ಒಬ್ಬನನ್ನು ಮತ್ತೊಬ್ಬನು ಘಾತಿಸಿ ಇಬ್ಬರೂ ಒಟ್ಟಿಗೆ ಒಂದೇ ಕಾಲದಲ್ಲಿ ಪ್ರಾಣವನ್ನು ಬಿಟ್ಟು ದಿವ್ಯ ದೇಹಗಳನ್ನು ಧರಿಸಿದರು "ಏಕಾಪ್ಸರಃ ಪ್ರಾರ್ಥಿತ" ರಾದ* ಅವರಿಬ್ಬರಿಗೂ (ಸ್ವರ್ಗದಲ್ಲಿದ್ದು ದಿವ್ಯದೇಹಗಳನ್ನು ಧರಿಸಿದ್ದರೂ ಕೂಡ) ಹೋರಾಟ ನಡೆಯಿತು

ತುಮುಲ ಯುದ್ಧ ಮಾಡುತ್ತಿದ್ದ ಉಭಯ ಸೈನ್ಯ ವ್ಯೂಹಗಳಲ್ಲಿ ಒಂದು ಪಕ್ಷದವರಿಗೆ ಒಮ್ಮೆ ಜಯಲಾಭವಾದರೆ, ಮತ್ತೊಂದು ಪಕ್ಷದವರಿಗೆ ಒಮ್ಮೆ

*"ಏಕಾಪ್ಸರಃ ಪ್ರಾರ್ಥಿತ"ರೆಂದು ಹೇಳಿರುವುದರಲ್ಲಿ ಮೂಲದ ಪದಪ್ರಯೋಗವು ಎರಡು ಅರ್ಥಗಳನ್ನು ಕೊಡುವಂತಿರುವುದರಿಂದ, ಇಲ್ಲಿ ಅದನ್ನೇ ಉಪಯೋಗಿಸಲಾಗಿದೆ ಸ್ವರ್ಗದಲ್ಲಿ ಅಲ್ಲಿಗೆ ಏಕಕಾಲದಲ್ಲಿ ಬಂದ ಅವರಿಬ್ಬರನ್ನೂ ಒಬ್ಬಳೇ ಅಪ್ಸರೆಯು ಎದುರುಗೊಂಡು ಅವಳು ಅವರಲ್ಲಾರನ್ನು ವರಿಸಬೇಕೆಂಬುದನ್ನು ನಿರ್ಧರಿಸಲಾರದೆ ಹೋದಾಗ ಅವರಿಬ್ಬರಿಗೂ ವಿರೋಧವುಂಟಾಗಿ ಅವಳನ್ನು ವರಿಸಲು ನಾನುತಾನೆಂದು ಹೋರಾಡಿದರೆಂದಾದರೂ ಅದಕ್ಕೆ ಅರ್ಥವಾಗಬಹುದು. ಅಥವಾ ಸ್ವರ್ಗದಲ್ಲಿದ್ದ ಅನೇಕಮಂದಿ ಅಪ್ಸರೆಯರಲ್ಲಿ ಒಬ್ಬಳನ್ನೇ ಇಬ್ಬರೂ ವರಿಸಲಿ

ಜಯಲಾಭವಾಗುತ್ತಿದ್ದಿತು ಆದಕಾರಣ ಬೇರೆ ಬೇರೆ ದಿಕ್ಕುಗಳಲ್ಲಿ ಬೀಸುವ ಗಾಳಿಯಿಂದ ಪ್ರವೃದ್ಧಿ ಹೊಂದಿದ ಮಹಾರ್ಣವದ ತೆರೆಮಾಲೆಗಳು ಪರಸ್ಪರ ವಾಗಿ ಎದುರಾದಾಗ ಒಂದು ಕಡೆಯಿಂದ ಬಂದ ತೆರೆಮಾಲೆಗಳು ಎದುರು ಕಡೆಯಿಂದ ಬಂದ ತೆರೆಮಾಲೆಗಳನ್ನು ಅಪ್ಪಳಿಸಿ ಒಂದು ಸಲ ಮುಂದೆ ಹೋದರೆ ಮತ್ತೊಂದು ಸಲ ಎದುರು ಕಡೆಯಿಂದ ಬಂದ ತೆರೆಮಾಲೆಗಳೇ ತಮ್ಮನ್ನೆ ದುರಿಸಿದ ತೆರೆಮಾಲೆಗಳನ್ನು ಅಪ್ಪಳಿಸಿ ಮುಂದೆ ಹೋಗುವಂತೆ ಉಭಯ ಪಕ್ಷಗಳ ಸೈನ್ಯವ್ಯೂಹಗಳಿಗೂ ಪರ್ಯಾಯ ಕ್ರಮ ದಲ್ಲಿ ಜಯಲಾಭವಾಗುತ್ತಿದ್ದಿತು ಆದಕಾರಣ ಯಾವ ಪಕ್ಷಕ್ಕೆ. ವಿಜಯವಾಯಿತೆಂಬುದು ಅವ್ಯವಸ್ಥವಾಗಿದ್ದಿತು ಅಜಕುಮಾರನ ಸೈನ್ಯಕ್ಕೇ ನೋ ಪರ್ಯಾಯ ಕ್ರಮದಲ್ಲಿ ಒಮ್ಮೊಮ್ಮೆ ಪರಾಜಯವಾಗುತ್ತಿದ್ದುದು ನಿಜ ವಾದರೂ ಮಹಾಬಲಶಾಲಿಯಾದ ಅಜಕುಮಾರನು ಮಾತ್ರ ಯುದ್ಧರಂಗ ದಲ್ಲಿ ಅಚಲನಾಗಿ ನಿಂತು ಶತ್ರು ಸೈನ್ಯವನ್ನು ನಾಶಗೊಳಿಸುತ್ತಿದ್ದನು, ಹೊಗೆ ಯೇನೋ ಗಾಳಿ ಬೀಸಿದ ಕಡೆಗೆ ಚಲಿಸಿ ಒಮ್ಮೆ ಒಂದು ಕಡೆಗೂ, ಮತ್ತೊಮ್ಮೆ ಅದರ ಎದುರು ಕಡೆಗೂ ಹೋಗಬಹುದು ಆದರೆ ಬೆಂಕಿಯು ಮಾತ್ರ ಹುಲ್ಲಿದ್ದ ಕಡೆ ಅದನ್ನು ಸುಡುತ್ತ ಅಚಲವಾಗಿಯೇ ಇರುತ್ತದೆ ಕವಚ ಧಾರಿಯಾಗಿ ರಥದಲ್ಲಿ ಕುಳಿತಿದ್ದ ಏಕೈಕವೀರನಾದ ಅಜಕುಮಾರನು ಪರಾ ಕ್ರಮಮತ್ತನಾಗಿ ಬತ್ತಳಿಕೆಯಿಂದ ಬಾಣಗಳನ್ನು ಹಿರಿದು ಹಿರಿದು ಶತ್ರುಗಳ ಮೇಲೆ ಪ್ರಯೋಗಿಸಿ ಅವರನ್ನು-ಕಲ್ಪಕ್ಷಯಕಾಲದಲ್ಲಿ ಕ್ಷೋಭೆ ಹೊಂದಿದ ಸಾಗರದ ನೀರನ್ನು ಶ್ವೇತವರಾಹಾವತಾರಿಯಾದ ಮಹಾವಿಷ್ಣುವು ತಡೆಗಟ್ಟಿ ದಂತೆ—ತಡೆಗಟ್ಟಿ ತಲ್ಲಣಗೊಳಿಸಿದನು ಅವನು ತನ್ನ ಧನುಸ್ಸಿನ ಶಿಂಜಿನಿ

---

ಚ್ಚಿಸಿ ಪರಸ್ಪರ ದ್ವೇಷದಿಂದ ಹೋರಾಡಿದರೆಂದಾದರೂ ಅದಕ್ಕೆ ಅರ್ಥವಾಗಬಹುದು. ಹೇಗೇ ಅರ್ಥವನ್ನಿಟ್ಟುಕೊಂಡರೂ, ಕಾಳಿದಾಸ ಮಹಾಕವಿಯು ಸ್ವರ್ಗಕ್ಕೆ ಹೋದ ವರು ಅಪ್ಸರಯರನ್ನು ವರಿಸಬಹುದೆಂಬ ಪುರಾಣಗಳ ಕಲ್ಪನೆಯನ್ನು ಅಪಹಾಸ್ಯ ಮಾಡುವುದಕ್ಕಾಗಿ ಈ ಸನ್ನಿವೇಶವನ್ನು ಕಲ್ಪಿಸಿದ್ದಾನೆ 'ನೀಲಕಂಠ ವಿಜಯ' ಕಾ ವ್ಯದಲ್ಲಿಯೂ ಆ ಕಲ್ಪನೆಯ ವಿಡಂಬನೆಯಿದೆ. ಅದಕ್ಕೆ ಬಹುಶಃ ಕಾಳಿದಾಸನ ರಘುವಂಶದ ಈ ಸನ್ನಿವೇಶದಿಂದಲೇ ಪ್ರೇರಣೆಯು ದೊರೆತಿರಬೇಕು.

ಯನ್ನು ಆಕರ್ಣಾಂತವಾಗಿ ಸೆಳೆದಿದ್ದ ಕಾರಣ, ಹಾಗೆ ಅದನ್ನು ಸೆಳೆದಿದ್ದ ಬಲಗೈಯಿಂದ ಅವನು ಮನೋಹರವಾದ ರೀತಿಯಲ್ಲಿ ಬತ್ತಳಿಕೆಯ ಬಾಯಿನ ಬಳಿಯಿಂದಲೇ ಬಹು ಶೀಘ್ರ ಶೀಘ್ರವಾಗಿ ಬಾಣಗಳನ್ನು ಸೆಳೆದುಕೊಂಡು ಪ್ರಯೋಗಿಸುತ್ತಿದ್ದನು ಅದನ್ನು ನೋಡಿದರೆ, ಶಿಂಜಿನಿಯೇ ಬಾಣವರ್ಷ

ವನ್ನು ಕರೆದು ಶತ್ರುಗಳನ್ನು ಧ್ವಂಸ ಮಾಡುತ್ತಿದ್ದಂತೆ ತೋರಿತು ಅವನು ಪರ ಸೈನ್ಯವನ್ನು ಭೇದಿಸಿ ಹೊಕ್ಕು, ಔಡುಗಚ್ಚಿ ತನ್ನಮೇಲೆರಗಿ ಕೆಂಗಣ್ಣು ಬಿಡುತ್ತ ಹೂಂಕಾರಮಾಡುತ್ತಿದ್ದ ಶತ್ರುಗಳ ರುಂಡಗಳನ್ನು ಅರ್ಧಚಂದ್ರಾಕೃತಿಯ ಹರಿತವಾದ ಬಾಣಗಳಿಂದ ಉರುಳಿಸಿದನು ಔಡುಗಚ್ಚಿದ್ದ ಕಾರಣದಿಂದ ಆ ಶತ್ರುಗಳ ಓಷ್ಠಗಳು ಮತ್ತಷ್ಟು ಕೆಂಪಾಗಿದ್ದುವು ಅಜಕುಮಾರನ ಮೇಲಿನ ರೋಷದಿಂದ ಆ ವೀರರು ಹುಬ್ಬುಗಂಟಿಕ್ಕಿದ್ದರು ಚತುರಂಗ ಬಲದಲ್ಲಿ ಗಜಬಲವನ್ನು ಪ್ರಧಾನವಾಗಿಟ್ಟುಕೊಂಡು ರಾಜರೆಲ್ಲರೂ ಒಟ್ಟುಗೂಡಿ ಅವನ ಮೇಲೆ ಯುದ್ಧಮಾಡಲಾರಂಭಿಸಿದರು ಕಬ್ಬಿಣದ ಕವಚಗಳನ್ನು ಕೂಡ ಭೇದಿಸಿ ಘಾತಿಸಬಲ್ಲ ಸರ್ವಾಯುಧಗಳನ್ನೂ ಅವನ ಮೇಲೆ ಪ್ರಯೋಗಿಸಿ ಅವನನ್ನು ಪರಾಭವ ಹೊಂದಿಸಲು ಅವರು ಸರ್ವ ಪ್ರಯತ್ನಗಳನ್ನೂ ಮಾಡಿದರು ಶತ್ರುಗಳು ಪ್ರಯೋಗಿಸಿದ ಬಾಣಗಳಿಂದ ಅವನ ರಥವು ಮುಚ್ಚಿಹೋಯಿತು ಹಿಮಂತ ಋತುವಿನ ಪ್ರಾತಃಕಾಲದಲ್ಲಿ ಸಮಸ್ತವೂ ಹಿಮಾವೃತವಾಗಿ ಅವ್ಯಕ್ತವಾಗಿದ್ದು ಅಲ್ಪ ಪ್ರಕಾಶವುಳ್ಳುದಾಗಿ ತೋರುವ ಸೂರ್ಯ ಬಿಂಬವು ಮಾತ್ರವೇ ಕಾಣುತ್ತಿರುವಂತೆ, ಅವನ ರಥವು ಬಾಣಗಳಿಂದ ಮುಚ್ಚಿ ಹೋಗಿ ಕೇವಲ ಧ್ವಜಾಗ್ರಮಾತ್ರವೇ ಕಾಣುತಿದ್ದಿತು, ಧ್ವಜಾಗ್ರವೊಂದರ ಹೊರತು ಮತ್ತೇನೂ ಕಾಣುತ್ತಿರಲಿಲ್ಲ ಶತ್ರುಗಳು ಪ್ರಯೋಗಿಸಿದ ಬಾಣಗಳನ್ನೆಲ್ಲಾ ಭೇದಿಸಿದ ಮೇಲೆ ಮದನ ಸುಂದರನಾದ ಅಜಕುಮಾರನು ತನಗೆ ಪ್ರಿಯಂವದನೆಂಬ ಗಂಧರ್ವನಿಂದ ಲಭಿಸಿದ್ದ ಸಮ್ಮೋಹನಾಸ್ತ್ರವನ್ನು ಅವರೆಲ್ಲರ ಮೇಲೆ ಪ್ರಯೋಗಿಸಿದನು ಒಡನೆಯೇ ಶತ್ರು ರಾಜರುಗಳೂ ಅವರ ಸೈನಿಕರೂ ಧ್ವಜಸ್ತಂಭಗಳನ್ನೊರಗಿಕೊಂಡೂ, ಒಂದು ಹೆಗಲಿನ ಕಡೆಗೆ ತಲೆಗಳನ್ನು ವಾಲಿಸಿಕೊಂಡೂ, ನಿದ್ರಿಸಲಾರಂಭಿಸಿದರು; ಅವರ ಶಿರಸ್ತ್ರಾಣಗಳು ಕಳಚಿ

ಹೋಗಿದ್ದವು, ಅವರು ಬಾಣ ಪ್ರಯೋಗ ಸಾಮರ್ಥ್ಯವನ್ನು ಕಳೆದುಕೊಂಡಿದ್ದರು. ಅನಂತರ ... ಜಯ ಸೂಚಕವಾಗಿ ಶಂಖವನ್ನೂದಿದನು. ಅವನು ದೊಡ್ಡ ಶಂಖವನ್ನು ತುಟಿಗಳಲ್ಲಿ ಕಚ್ಚಿಕೊಂಡಿದ್ದುದು, ಏಕೈಕವೀರನಾದ ಅತನು ಸ್ವಹಸ್ತಾರ್ಜಿತವಾಗಿ ಮೂರ್ತ ಸ್ವರೂಪದಿಂದಿದ್ದ ತನ್ನ ಯಶಸ್ಸನ್ನು ಪಾನ ಮಾಡುತ್ತಿದ್ದಾನೋ– ಎಂದು ತೋರಿತು ಅವನ ಶಂಖಸ್ವನವನ್ನು ಕೇಳಿ ಅವನ ಯೋಧರೆಲ್ಲರೂ ಅವನ ಬಳಿಗೆ ಬಂದರು ನಿದ್ರಿಸುತ್ತಿದ್ದ ಶತ್ರು ರಾಜರುಗಳ ಮತ್ತು ಅವರ ಸೈನಿಕರ ಮಧ್ಯದಲ್ಲಿ – ನಿಮೀಲಿತವಾದ ಕಮಲಗಳ ಮಧ್ಯದಲ್ಲಿ ನಿಂತಿರುವ ಶಶಾಂಕ ಪ್ರತಿಮೆಯಂತೆ – ವಿರಾಜಿಸುತ್ತಿದ್ದ ತಮ್ಮ ಸ್ವಾಮಿಯಾದ ಅಜಕುಮಾರನನ್ನು ಕಂಡು ಅವರೆಲ್ಲರೂ ಹರ್ಷಿಸಿದರು ಅವನು ಬಾಣದ ಮೊನೆಗಳನ್ನು (ನೆಲದಮೇಲೆ ನಿಂತಿದ್ದ) ರಕ್ತದಲ್ಲಿ ಅದ್ದಿಸಿ " ರಘುಚಕ್ರೇಶ್ವರನ ಮಗನು ನಿಮ್ಮ ಯಶಸ್ಸನ್ನು ವಶಪಡಿಸಿಕೊಂಡಿದ್ದಾನೆ ನಿಮ್ಮಮೇಲಿನ ಕೃಪೆಯಿಂದ ನಿಮ್ಮ ಪ್ರಾಣವನ್ನುಳಿಸಿದ್ದಾನೆ" ಎಂಬ ಮಾತುಗಳನ್ನು ಸಮ್ಮೋಹನಾಸ್ತ್ರ ಪ್ರಭಾವದಿಂದ ನಿದ್ರಿಸುತ್ತ ನಿಂತಿದ್ದ ರಾಜರುಗಳ ಧ್ವಜಸ್ತಂಭಗಳ ಮೇಲೆ ಬರೆಯಿಸಿದನು

ಆ ಬಳಿಕ ಅವನು ಭೀತಾಕುಲೆಯಾಗಿದ್ದ ತನ್ನ ಪ್ರೇಯಸಿಯಾದ ಇಂದುಮತಿಯ ಬಳಿಗೆ ಬಂದು ತನ್ನ ಬಿಲ್ಲಿನ ಒಂದು ಕೊನೆಯ ಮೇಲೆ ತೋಳನ್ನೂರಿಕೊಂಡು ನಿಂತನು ಶಿರಸ್ತ್ರಾಣವನ್ನು ಅವನು ತೆಗೆದುದರಿಂದ ತಲೆಯ ಕೂದಲಿನ ಗಂಟು ಬಿಚ್ಚಿ ಹೋಯಿತು ಹಣೆಯ ಮೇಲೆ ಸ್ವೇದ ಬಿಂದುಗಳು ಮೂಡಿದ್ದುವು ಅಜಕುಮಾರನು ಇಂದುಮತಿಯನ್ನು ಕುರಿತು " ವೈದರ್ಭಿ ! ಈಗ ಶತ್ರು ರಾಜರುಗಳಿಗೊದಗಿರುವ ಅವಸ್ಥೆಯನ್ನು ನೋಡು ಅರ್ಭಕರು ಬೇಕಾದರೂ ಅವರ ಕೈಗಳಿಂದ ಶಸ್ತ್ರಗಳನ್ನು ಕಳಚಿಕೊಳ್ಳುವ ಸ್ಥಿತಿಯಲ್ಲಿದ್ದಾರೆ, ಈ ರಾಜರುಗಳು ಅವರನ್ನು ನೀನು ನೋಡಬಹುದೆಂದು ನಾನು ಅನುಮತಿಸಿದ್ದೇನೆ * ಅವರ ಸ್ಥಿತಿಯನ್ನು ನೋಡು. ನೀನು ನನ್ನ ಹಸ್ತ

* ಪರ ಪುರುಷರನ್ನು ಅವಳು ನೋಡಲಿಚ್ಛಿಸದಿರಬಹುದೆಂಬ ಶಂಕೆಯಿಂದ ಅವನು

ಗತಿಯಾಗಿ ನನ್ನವಳಾಗಿರುವೆ. ಈಗ ನಿದ್ರಾಪರವಶರಾಗಿರುವ ಇವರುಗಳು ಈ ಬಗೆಯ ಯುದ್ಧ ಚೇಷ್ಟೆಯಿಂದ ನಿನ್ನನ್ನು ಬಯಸುತ್ತಿದ್ದಾರೆ" ಎಂದು ಮಂದಹಾಸದಿಂದ ತಿಳಿಸಿದನು. ಅದುವರೆಗೂ ಶತ್ರುಗಳ ದೆಸೆಯಿಂದ ತನ್ನ ಪ್ರಿಯನಿಗೆ ವಿಪತ್ತೆಲ್ಲಿ ಸಂಭವಿಸುವುದೋ ಎಂಬ ವಿಷಾದದಿಂದ ಕಳೆಗುಂದಿದ್ದ ಅವಳ ಮುಖವು—ನಿಶ್ವಾಸದ ಆವಿಯು ತಗುಲಿ ಮಂಕಾಗಿದ್ದ ಕನ್ನಡಿಯು ಆ ಆವಿಯು ಹಾರಿ ಹೋದ ಬಳಿಕ ಆತ್ಮೀಯ ನೈರ್ಮಲ್ಯದಿಂದ ಹೊಳೆಯು ವಂತೆ—ಆ ವಿಷಾದವು ದೂರವಾದುದರಿಂದ ಆತ್ಮೀಯ ಪ್ರಸನ್ನತೆಯಿಂದ ಬೆಳಗಿತು ಅವಳಿಗೆ ಹರ್ಷವೇನೋ ಆಯಿತು ಆದರೂ, ಲಜ್ಜಾಪರವಶೆ ಯಾಗಿದ್ದ ಕಾರಣ, ಅವಳು ತಾನೇ ಮಾತನಾಡಿ ತನ್ನ ಪ್ರಿಯನ ಪರಾಕ್ರಮ ವನ್ನು ಶ್ಲಾಘಿಸಿ ಅಭಿನಂದಿಸಲಿಲ್ಲ, ಪ್ರತ್ಯಕ್ಷವಾಗಿ ತಾನೇ ಆ ಕೆಲಸಮಾಡದೆ ತನ್ನ ಸಖಿಯರು ಅಭಿನಂದಿಸುವಂತೆ ಮಾಡಿ ಪರೋಕ್ಷವಾಗಿ ಆ ಕೆಲಸವನ್ನು ನೆರವೇರಿಸಿ ಆನಂದಿಸಿದಳು ಸುವೃಷ್ಟಿಯಿಂದ ಅಭಿಷಿಕ್ತವಾದ ಹುಲ್ಲುಗಾವಲು ಮೇಘ ವೃಂದವನ್ನು ತಾನು ಅಭಿನಂದಿಸದೆ ನವಿಲುಗಳ ಕೇಕಾ ಧ್ವನಿಗಳಿಂದ ಅಭಿನಂದನ ಮಾಡಿಸುವಂತೆ ಅವಳೂ ವರ್ತಿಸಿ ತನ್ನ ಸಖಿಯರ ಮೂಲಕ ತನ್ನ ಅಭಿನಂದನವನ್ನೂ ಹರ್ಷವನ್ನೂ ಸೂಚಿಸಿದಳು ತನ್ನ ಮೇಲೆ ಕೈ ಮಾಡಿದ ರಾಜರುಗಳನ್ನೆಲ್ಲಾ ಹೀಗೆ ಸೋಲಿಸಿ ಇಂದುಮತಿಯನ್ನು ತನ್ನವಳಾಗಿ ಮಾಡಿ ಕೊಂಡ ಅಜಕುಮಾರನು ಅವಳನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಕರೆದೊಯ್ದನು. ಅವನ ರಥಕ್ಕೆ ಹೂಡಿದ್ದ ಕುದುರೆಗಳ ಪದಾಘಾತದಿಂದೆದ್ದ ಕೆಂಧೂಳು ಮುಸುಕಿ, ಇಂದುಮತಿಯ ಮುಂಗುರುಳುಗಳು ಋಕ್ಷವಾಗಿದ್ದುವು ಅವಳು ಸಮರ ವಿಜಯಲಕ್ಷ್ಮಿಯ ಮೂರ್ತರೂಪವೋ— ಎಂಬಂತೆ ಶೋಭಿಸು ತ್ತಿದ್ದಳು ರಘುಚಕ್ರೇಶ್ವರನು ತನ್ನ ಪುತ್ರನ ಆಗಮನಕ್ಕೆ ಮುಂಚಿತವಾಗಿಯೇ ವಿಚಾರಗಳನ್ನೆಲ್ಲ ದೂತರಿಂದ ತಿಳಿದುಕೊಂಡಿದ್ದನು ಶ್ಲಾಘ್ಯಜಾಯಾ ಸಮೇತ ನಾಗಿ ಅಯೋಧ್ಯೆಗೆ ಹಿಂತಿರುಗಿದ ವಿಜಯಿಯಾದ ತನ್ನ ಪುತ್ರನನ್ನು ಅವನು

(ಬಹುಶಃ ಅವಳು ತೋರಿಸಿದ ಉದಾಸೀನ ಭಾವದಿಂದ ಅವಳ ಇಂಗಿತವನ್ನು ಗ್ರಹಿಸಿ) ಹೀಗೆ ಹೇಳಿರಬೇಕು.

ಅಭಿನಂದಿಸಿ ಹರ್ಷಿಸಿದನು ಅನಂತರ ಕುಟುಂಬ ಭಾರವನ್ನು ಅವನು ಅಜನಿಗೆ ವಹಿಸಿ ತಾನು ವಾನಪ್ರಸ್ಥಾಶ್ರಮದ ಶಾಂತಿಮಾರ್ಗವನ್ನನುಸರಿಸಲು ಉತ್ಸುಕನಾದನು ಕುಲಧುರಂಧರನು ಸಿದ್ಧವಾದ ಮೇಲೆ, ಗೃಹಸ್ಥಾಶ್ರಮವನ್ನು ಬಿಟ್ಟು ವಾನಪ್ರಸ್ಥಾಶ್ರಮಕ್ಕೆ ತೆರಳುವುದು ಸೂರ್ಯವಂಶದ ರಾಜರ ಸತ್ಸಂಪ್ರದಾಯ ಅದೇ ಸಂಪ್ರದಾಯವನ್ನು ಅನುಸರಿಸಲು ರಘುಚಕ್ರೇಶ್ವರನೂ ಸಿದ್ಧವಾದನು

# ಎಂಟನೆಯ ಪರಿಚ್ಛೇದ

## ಅಜವಿಲಾಪ

ಅಜಕುಮಾರನು ಮನೋಹರವಾದ ವಿವಾಹ ಮಂಗಲಸೂತ್ರವನ್ನು ತನ್ನ ಕೈಯಿಂದ ಬಿಚ್ಚದೆ ಇನ್ನೂ ಅದನ್ನು ಧರಿಸಿರುವಾಗಲೇ ರಘು ಚಕ್ರೇಶ್ವರನು ರಾಜ್ಯಭಾರವನ್ನೂ ಅವನಿಗೆ ವಹಿಸಿ ಎರಡನೆಯ ಇಂದುಮತಿ ಯೋ ಎಂಬಂತೆ ಭೂಮಿಯನ್ನೊಪ್ಪಿಸಿದನು ನೃಪಸೂನುಗಳಲ್ಲಿ ಬಹುಮಂದಿಗಳು ವಿಷಪ್ರಯೋಗ ಮುಂತಾದ ದುರಿತಗಳನ್ನಾದರೂ ಆಚರಿಸಿ ಭೋಗ, ತೃಷ್ಣೆಯಿಂದ ರಾಜ್ಯಲಾಭಮಾಡಿಕೊಳ್ಳಲು ಪ್ರಯತ್ನಿಸುತ್ತಾರೆ ಹಾಗಿದ್ದೂ ಶ ಅಜಕುಮಾರನು ತಂದೆಯೇ ತನಗೆ ರಾಜ್ಯವನ್ನು ಒಪ್ಪಿಸಲಿಚ್ಛಿಸಿದರೂ ಲೇಶ ಮಾತ್ರವೂ ಭೋಗತೃಷ್ಣೆಯಿಲ್ಲದೆ, ತಂದೆಯ ಆಜ್ಞೆಗೆ ವಿಧೇಯನಾಗಿ ನಡೆಯುವ ಕರ್ತವ್ಯ ಬುದ್ಧಿಯಿಂದ ಮಾತ್ರವೇ ರಾಜ್ಯವನ್ನು ಸ್ವೀಕರಿಸಿದನು ಅನಂತರ ಕುಲಗುರುವಾದ ವಸಿಷ್ಠ ಮಹರ್ಷಿಯು ತಂದು ಸಿದ್ಧಗೊಳಿಸಿದ ತೀರ್ಥೋದಕಗಳಿಂದ ಅಜಕುಮಾರನು ಪಟ್ಟಮಹಿಷಿಯಾದ ಇಂದುಮತೀ ಸಮೇತನಾಗಿ ರಾಜ್ಯಾಭಿಷೇಕದ ಆನಂದವನ್ನನುಭವಿಸಿದನು ಅಭಿಷೇಕ ಜಲವು ಭೂಮಿಯ ಮೇಲೆ ಬಿದ್ದಾಗ ಹೊರಟ ಸುಗಂಧರೂಪದ ಆನಂದ ನಿರ್ಮಲೋಚ್ಛ್ವಾಸದ ಮೂಲಕ ಮೇದಿನಿಯೂ ಕೃತಾರ್ಥತೆಯನ್ನು ಸೂಚಿಸುವಂತೆ ತೋರಿತು ಅಥರ್ವಣ ವೇದಾಭಿಜ್ಞನಾದ ವಸಿಷ್ಠ ಗುರುವಿನಿಂದ ಅಥರ್ವಣ ವೇದೋಕ್ತವಿಧಿಗಳಿಗನುಸಾರವಾಗಿ ಅಭಿಷೇಕ ಸಂಸ್ಕಾರವನ್ನು ಪಡೆದ ಅಜಕುಮಾರನು ಶತ್ರುಗಳಿಂದ ಅಜೇಯನಾದ ಚಕ್ರೇಶ್ವರನಾದನು ಬ್ರಹ್ಮತೇಜವೂ ಕ್ಷಾತ್ರತೇಜವೂ ಒಟ್ಟುಗೂಡಿದರೆ ಶತ್ರುಗಳ ಭಾಗಕ್ಕೆ ಪವನಾಗ್ನಿಗಳ ಸಮಾಗಮವಾದಂತೆಯೇ ಸರಿ

---

+ಹಿಂದೆ ಈಗಿನಂತೆ ವಿವಾಹವಾದ ಮೂರನೆಯ ದಿನ ದಂಪತಿಗಳು ಕಂಕಣ ವಿಸರ್ಜನ ಮಾಡುತ್ತಿರಲಿಲ್ಲ, ಅವರು ಬ್ರಹ್ಮಚರ್ಯದಲ್ಲಿರಬೇಕಾದ ಅವಧಿಯು ಕಳೆಯುವವರೆಗೂ ಕಂಕಣವನ್ನು ಧರಿಸಿರುತ್ತಿದ್ದರು

ನೂತನವಾಗಿ ರಾಜ್ಯಾಭಿಷಿಕ್ತನಾದ ಅಜನ ಅದ್ಭುತವಾದ ರಾಜ್ಯಭಾರ ವಿಚಕ್ಷಣೆಯನ್ನು ಕಂಡು ಹರ್ಷಿಸಿದ ಪ್ರಜಗಳು ಅವನ ತಂದೆಯಾದ ರಘು ಚಕ್ರೇಶ್ವರನೇ ಮತ್ತೆ ಯುವಕನಾಗಿ ರಾಜ್ಯವನ್ನಾಳುತ್ತಿದ್ದಂತೆ ಭಾವಿಸಿದರು ಅಜನು ರಘುವಿನ ರೂಪವನ್ನೂ ಮತ್ತು ದೇಹಕಾಂತಿಯನ್ನೂ ಮಾತ್ರವೇ ಅಲ್ಲದೆ ಅವನ ಸಕಲ ಸದ್ಗುಣಗಳನ್ನೂ ಪಡೆದಿದ್ದನು ಅಭ್ಯುದಯ ಸಮೃದ್ಧ ವಾಗಿದ್ದ ರಘುವಿನ ರಾಜ್ಯವು ಅವನ ಮಗನಾದ ಅಜನಿಗೆ ಸೇರಿದುದೂ, ಅಜನ ನವಯೌವನದೊಡನೆ ವಿನಯವು ಸಂಗತವಾದುದೂ ಅತ್ಯಧಿಕವಾಗಿ ಶೋಭಿ ಸಿದುವು ಅಜನು ತೀರ ಚಿಕ್ಕವಯಸ್ಸಿನವನಾಗಿದ್ದಾಗಲೇ ಅವನು ರಾಜ್ಯಭಾ ರವನ್ನು ವಹಿಸಬೇಕಾಯಿತು ಆದಕಾರಣ ತಾನು ಅಲ್ಪ ಸ್ವಲ್ಪ ಕಾಠಿನ್ಯ ವನ್ನು ತೋರಿದರೂ ಪ್ರಜೆಗಳು ಉದ್ವೇಗ ಹೊಂದಿಯಾರೆಂದು ಅವನು ಆತಂ ಕಪಡುತ್ತಿದ್ದನು ಆದುದರಿಂದ ಮುಹಾ ಭಜನೆನಿಸಿ ಬಲಿಷ್ಠನಾಗಿದ್ದ ಅಜನು ಹೊಸದಾಗಿ ತನಗೆ ಲಭಿಸಿದ ರಾಜ್ಯವನ್ನು ಪರಿಪಾಲಿಸುವುದರಲ್ಲಿ ಹೊಸದಾಗಿ ಪಾಣಿಗ್ರಹಣ ಮಾಡಿಕೊಂಡ ನವ ವಧುವಿನೊಡನೆ ನಡೆದುಕೊಳ್ಳುವಂತೆ ಸದಯನಾಗಿ ‡ ವರ್ತಿಸಿದನು ಅವನಿಗೆ ಪರಿಚಿತರಾದ ಪ್ರಜೆಗಳಲ್ಲಿ ಪ್ರತಿಯೊಬ್ಬನೂ 'ನಾನೇ ಅಜಮಹಾರಾಜನ ಸನ್ಮಾನಕ್ಕೆ ಪಾತ್ರನಾಗಿರತಕ್ಕ ವನು ಮಹಾರಾಜನಿಗೆ ನನ್ನೊಬ್ಬನಲ್ಲೇ ಅತ್ಯಂತ ಪ್ರೀತಿ" ಎಂದು ಭಾವಿ ಸಿಕೊಳ್ಳುವಂತೆ ಅವನು ಎಲ್ಲರಲ್ಲಿಯೂ ಪ್ರೀತಿ ಗೌರವಗಳನ್ನು ತೋರಿಸುತ್ತಿ ದ್ದನು ಸಮುದ್ರವು ತನ್ನಲ್ಲಿಗೆ ಬರತಕ್ಕ ನೂರಾರು ನದಿಗಳಲ್ಲಾವುದಕ್ಕೂ ಅವಗಣನೆಯನ್ನು ತೋರಿಸದಿರುವಂತೆ, ಅಜಮಹೀಪತಿಯೂ ಪ್ರಜೆಗಳಲ್ಲಾರ ಲ್ಲಿಯೂ ತಿರಸ್ಕಾರ ಬುದ್ಧಿಯಿಂದ ವರ್ತಿಸದೆ ಸಮಸ್ತರಲ್ಲಿಯೂ ಪ್ರೀತಿಗೌರ ವಗಳನ್ನು ತೋರಿಸುತ್ತಿದ್ದನು ಇತರ ರಾಜರುಗಳಲ್ಲಿ ಅತಿತೀಕ್ಷ್ಣವಾಗಿಯೂ ಅಥವಾ ಅತಿ ಮೃದುವಾಗಿಯೂ ವರ್ತಿಸದೆ, ಇವೆರಡಕ್ಕೂ, ಅವಕಾಶ ಕೊಡದ ಮಧ್ಯಮ ಕ್ರಮವನ್ನನುಸರಿಸಿದನು, ವೃಕ್ಷಗಳನ್ನು ಉರುಳಿಸಿ ನಾಶಗೊಳಿ

‡ ಅಜನ ವಿಷಯದಲ್ಲಿ ಇವೆರಡೂ ನಿಜ ಅವನಿಗೆ ರಾಜ್ಯಭಾರವು ಹೊಸದು, ಇಂದುಮತಿಯೂ ಹೊಸದಾಗಿ ವಿವಾಹಿತಳಾದ ನವೋಢೆ

ಸುವಷ್ಟು ಬಲವಾಗಿಬೀಸದೆ ಅವುಗಳು ಬಾಗುವುದಕ್ಕೆಷ್ಟು ಬಲವು ಅವಶ್ಯವೋ ಅಷ್ಟು ಬಲವಾಗಿ ಮಾತ್ರವೇ ಬೀಸುವ ಗಾಳಿಯಂತೆ, ರಾಜರುಗಳನ್ನು ನೆಗ್ಗಿ ನಾಶಗೊಳಿಸದೆ ಅವರು ಶಿರಬಾಗಿ ವಿಧೇಯರಾಗಿ ವರ್ತಿಸುವಂತೆ ಮಾಡುವು ದಕ್ಕೆ ಅಗತ್ಯವಾದಷ್ಟು ಮಟ್ಟಿಗೆ ಮಾತ್ರವೇ ಅವನು ಬಲಪ್ರಕಾಶ ಮಾಡಿ ಅವ ರೆಲ್ಲರನ್ನೂ ಸ್ವಾಧೀನ ಪಡಿಸಿಕೊಂಡನು

ತನ್ನ ಪುತ್ರನಾದ ಅಜನು ತನ್ನಂತೆಯೇ ಪ್ರಜೆಗಳಿಗೆ ಪ್ರಿಯನಾಗಿ ರಾ ಜ್ಯದಲ್ಲಿ ಪ್ರತಿಷ್ಠಿತನಾದುದನ್ನು ಕಂಡ ಬಳಿಕ ರಘುವು ನಿತ್ಯಾನಿತ್ಯ ವಿವೇಚನೆ ಯಿಂದ ಭೋಗವು ಭೂಲೋಕದಲ್ಲಾಗಲಿ ಅಥವಾ ಸ್ವರ್ಗಲೋಕದಲ್ಲಾಗಲಿ ನಶ್ವರವೆಂದು ಭಾವಿಸಿ ವಿಷಯ ಸುಖಕ್ಕೆ ಮನಗೊಡದೆ ನಿಸ್ಪೃಹನಾದನು ಗುಣವಂತರಾದ ಮಕ್ಕಳಿಗೆ ಅವರು ಪ್ರಬುದ್ಧರಾಗಿ ಪ್ರಾಪ್ತವಯಸ್ಕರಾದ ಮೇಲೆ ರಾಜ್ಯಭಾರವನ್ನೂ ಸಂಪತ್ತನ್ನೂ ಒಪ್ಪಿಸಿ ವಾರ್ಧಕ್ಯದಲ್ಲಿ ನಾರುಡೆಯನ್ನು ಧರಿಸಿ ಸಂಯಮಿಗಳಾಗಿ ಮುನಿವೃತ್ತಿಯನ್ನು ಅವಲಂಬಿಸಿ ಆಶ್ರಮವಾಸಿಗಳಾ ಗುತ್ತಿದ್ದುದು ದಿಲೀಪವಂಶಜರ ಪದ್ಧತಿ ಅದರಂತೆ(ರಾಜಧಾನಿಯನ್ನು ಬಿಟ್ಟು) ಅರಣ್ಯವಾಸಕ್ಕೆ ತೆರಳಲುದ್ಯುಕ್ತನಾದ ರಘುವಿನ ಪಾದಗಳ ಮೇಲೆ ಉಷ್ಣೀಷ ಶೋಭಿತವಾದ ತನ್ನ ಶಿರವನ್ನಿಟ್ಟು ತನ್ನನ್ನು ಬಿಟ್ಟು ಹೋಗಕೂಡದೆಂದು ಅಜನು ಅವನನ್ನು ಬೇಡಿಕೊಂಡನು ಅಜನಲ್ಲಿ ವಾತ್ಸಲ್ಯವನ್ನಿಟ್ಟುಕೊಂಡಿದ್ದ ರಘುವಿನ ಮೃದು ಮನಸ್ಸು ಅವನು ಕಣ್ಣೀರು ಸುರಿಸುತ್ತ ಬೇಡಿ ಕೊಂಡುದನ್ನು ಕಂಡು ಕರಗಿಹೋಯಿತು ಆಗ ರಘುವು ತನ್ನ ವನವಾಸ ಪ್ರಯತ್ನವನ್ನು ಬಿಡುವುದಾಗಿ ತಿಳಿಸಿದನು

ಆದರೆ, ಪರೆಯನ್ನು ಬಿಟ್ಟ ಹಾವಿನಂತೆ ತಾನು ತೊರೆದಿದ್ದ ಐಶ್ವರ್ಯ ದಲ್ಲಾಗಲಿ ಅಥವಾ ವಿಷಯೋಪಭೋಗದಲ್ಲಾಗಲಿ ಭಾಗಿಯಾಗಲು ಮಾತ್ರ ಅವನು ಸಮ್ಮತಿಸಲಿಲ್ಲ ಅವನು ಸಂನ್ಯಾಸಾಶ್ರಮ ಸ್ವೀಕಾರಮಾಡಿ †ಅಯೋ ಧ್ಯಾನಗರದ ಹೊರಗೆ ಆಶ್ರಮವನ್ನು ಕಟ್ಟಿಸಿಕೊಂಡು ಜಿತೇಂದ್ರಿಯನಾಗಿ

---

†"ತ್ರಯಾಣಾಂ ವರ್ಣಾನಾಂ ವೇದಮಧೀತ್ಯ ಚತ್ವಾರ ಆಶ್ರಮಾಃ"– ಸೂತ್ರವಾಕ್ಯ

ಅಲ್ಲಿ ವಾಸಮಾಡುತ್ತಿದ್ದನು ಮನೋನಿಗ್ರಹಮಾಡಿ ಪ್ರಶಾಂತನಾಗಿದ್ದ ಪೂರ್ವಪಾರ್ಥಿವನಾದ ರಘುವಿನಿಂದಲೂ, ವರ್ಧಿಷ್ಣುವಾಗಿ ಅಭ್ಯುದಯ ಹೊಂದುತ್ತಿದ್ದ ನೂತನೇಶ್ವರನಾದ ಅಜನಿಂದಲೂ ವಿರಾಜಿಸುತ್ತಿದ್ದ ಸುಪ್ರಸಿದ್ಧವಾದ ಆ ದಿಲೀಪವಂಶವು ಅಸ್ತಮಯಕಾಲವು ಸನ್ನಿಹಿತವಾಗಿರುವ ಚಂದ್ರನಿಂದಲೂ, ಉದಯಿಸಿ ಮೇಲಕ್ಕೇರುತ್ತಿರುವ ಸೂರ್ಯನಿಂದಲೂ ಬೆಳಗುವ ಆಕಾಶವನ್ನು ಹೋಲುತ್ತಿದ್ದಿತು ಯತಿವೇಷವನ್ನು ಧರಿಸಿ ಕಾಷಾಯವನ್ನುಟ್ಟಿದ್ದ ರಘುವನ್ನೂ, ರಾಜಪದವಿಗೆ ತಕ್ಕ ಅನರ್ಘ್ಯವಸ್ತ್ರಾಭರಣಗಳಿಂದ ಅಲಂಕೃತನಾಗಿದ್ದ ಅಜನನ್ನೂ ಕಂಡ ಪ್ರಜೆಗಳು ಮೋಕ್ಷವೇ ಅಂತಿಮಧ್ಯೇಯವಾದ ನಿವೃತ್ತಿಧರ್ಮವೂ, ಅಭ್ಯುದಯವೇ ಮುಖ್ಯಧ್ಯೇಯವಾದ ಪ್ರವೃತ್ತಿಧರ್ಮವೂ ದೇಹವನ್ನು ಧರಿಸಿ ಧರೆಗಿಳಿದು ಬಂದಿದ್ದುವೆಂದು ಭಾವಿಸಿದರು ‡ ಅಜನು ಇನ್ನೂ ತಾನು ಜಯಿಸದ್ದ ಪರರಾಜರನ್ನು ವಶಪಡಿಸಿಕೊಳ್ಳುವುದಕ್ಕಾಗಿ ರಾಜನೀತಿ ವಿಶಾರದರಾದ ಮಂತ್ರಿಗಳೊಡನೆ ಮಂತ್ರಾಲೋಚನೆ ಮಾಡುತ್ತಿದ್ದನು., ಅನಪಾಯಿಯೆನಿಸಿರುವ ಸ್ಥಿರವಾದ ಪರಮ ಪದವನ್ನು ಪಡೆಯುವುದಕ್ಕಾಗಿ ರಘುವು ಆಪ್ತರಾದ ಯೋಗಿಗಳೊಡನೆ ಸಮಾಲೋಚನೆ ಮಾಡುತ್ತಿದ್ದನು. ಯುವಕ ರಾಜನಾದ ಅಜನು ಕಾರ್ಯಾರ್ಥಿಗಳಾದ ಪ್ರಜೆಗಳನ್ನು ನೋಡಿ ನ್ಯಾಯ ಶಾಸನ ಮಾಡಲು ಸಭೆಯಲ್ಲಿ ಧರ್ಮಾಸನವನ್ನೇರುತ್ತಿದ್ದನು. ವೃದ್ಧ ರಾಜನಾದ ರಘುವಾದರೋ ಯೋಗಾಭ್ಯಾಸನಿರತನಾಗಿ ಏಕಾಗ್ರಚಿತ್ತದ ಧಾರಣಾವಸ್ಥೆಯನ್ನು ಅಭ್ಯಾಸ ಮಾಡಲು ಏಕಾಂತವಾಗಿ ಪವಿತ್ರವಾದ ಕುಶಾಸನದಲ್ಲಿ ಮಂಡಿಸುತ್ತಿದ್ದನು ಅಜನು ಅನನ್ಯವಾದ ಪ್ರಭು ಶಕ್ತಿ ಸಂಪತ್ತಿನಿಂದ ನೆರ ಹೊರೆಯ ರಾಜರನ್ನೆಲ್ಲಾ ಜಯಿಸಿ ಸ್ವಾಧೀನಪಡಿಸಿ

‡ ಇದನ್ನು ನೋಡಿದಾಗ "ಜಗತ್ತಿನ ಸ್ಥಿತಿಕಾರಣವಾದ ವೇದೋಕ್ತ ಧರ್ಮವು ಪ್ರವೃತ್ತಿ ಲಕ್ಷಣವೆಂದೂ, ನಿವೃತ್ತಿ ಲಕ್ಷಣವೆಂದೂ ಎರಡು ವಿಧಗಳಷ್ಟೆ" ("ದ್ವಿವಿಧೋ ಹಿ ವೇದೋಕ್ತ ಧರ್ಮಃ ಪ್ರವೃತ್ತಿ ಲಕ್ಷಣೋ ನಿವೃತ್ತಿ ಲಕ್ಷಣಶ್ಚೇತಿ ಜಗತಃ ಸ್ಥಿತಿ ಕಾರಣಮ್") ಎಂಬ ಶ್ರೀಮಚ್ಛಂಕರ ಭಗವತ್ಪಾದಾಚಾರ್ಯರ ಅಮೋಘವಾಣಿಗಳೂ ನೆನಪಿಗೆ ಬರುತ್ತವೆ, ಮನಸ್ಸಿಗೆ ಅನಿರ್ವಚನೀಯವಾದ ಆನಂದವುಂಟಾಗುತ್ತದೆ

ಕೊಂಡನು. ರಘುವು ಯೋಗಸಮಾಧಿ ಬಲದಿಂದ ತನ್ನ ದೇಹದೊಳಗಿನ ಪಂಚ ಪ್ರಾಣ ವಾಯುಗಳನ್ನೂ ಸ್ವಾಧೀನ ಪಡಿಸಿಕೊಂಡನು ಯುವಕ ರಾಜನಾದ ಅಜನು ತನಗೆ ವಿರೋಧವಾಗಿ ನಡೆದ ಶತ್ರುಗಳ ಪ್ರಯತ್ನಗಳ ಫಲಗಳನ್ನೆಲ್ಲ ತನ್ನ ಪ್ರತಾಪಾಗ್ನಿಯಿಂದ ಭಸ್ಮಮಾಡಿದನು ವೃದ್ಧ ರಾಜನಾದ ರಘುವು ಭವಬೀಜದಂತಿದ್ದ ಸ್ವಕರ್ಮ ಫಲಗಳನ್ನೆಲ್ಲ ಜ್ಞಾನಾಗ್ನಿಯಿಂದ ಭಸ್ಮ ಮಾಡಿದನು ಯುವಕ ರಾಜನಾದ ಅಜನು ಶತ್ರುರಾಜರ ವಿಷಯವಾಗಿ ಸಂಧಿ, ವಿಗ್ರಹ ಮುಂತಾದ ಷಡ್ಗುಣಗಳಲ್ಲಿ* ತಾನಾವುದನ್ನು ಪ್ರಯೋಗ ಮಾಡುವುದು ಯುಕ್ತವೆಂಬುದನ್ನು ಪರ್ಯಾಲೋಚಿಸಿ ಅದರ ಫಲವನ್ನು ಸಮೀಕ್ಷಿಸುತ್ತಿದ್ದನ ವೃದ್ಧ ರಾಜನಾದ ರಘುವು ಆಶೆಯನ್ನು ತೊರೆದು, ಸಮಲೋಷ್ಟ ಕಾಂಚನನಾಗಿ, ಪ್ರಕೃತಿಸ್ಥನಾದ ಗುಣತ್ರಯಗಳನ್ನು† ಸ್ವಾಧೀನ ಪಡಿಸಿಕೊಂಡನು ಯುವಕ ರಾಜನಾದ ಅಜನು ತನ್ನ ಪ್ರಯತ್ನಗಳನ್ನು ನಿಲ್ಲಿಸದೆ ಏಕ ಪ್ರಕಾರವಾಗಿ ಅವುಗಳನ್ನು ಫಲಸಿದ್ಧಿ ಪರ್ಯಂತವಾಗಿ ನಡೆಯಿಸುತ್ತಿದ್ದ ಸ್ಥಿರ ಕರ್ಮನಾಗಿದ್ದನು ವೃದ್ಧ ರಾಜನಾದ ರಘುವು ಪರಮಾತ್ಮ ದರ್ಶನದವರೆಗೂ ತನ್ನ ಯೋಗ ವಿಧಿಗಳನ್ನು ನಿಲ್ಲಿಸದ ಏಕ ಪ್ರಕಾರವಾಗಿ ಅವುಗಳನ್ನು ಮುಂದುವರಿಸುತ್ತಿದ್ದ ಸ್ಥಿರ ಧೀರನಾಗಿದ್ದನು ಯುವಕ ರಾಜನಾದ ಅಜನು ಸ್ವಾರ್ಥ ಪ್ರವೃತ್ತಿಯುಳ್ಳ ಶತ್ರುಗಳ ಅಗಸುತನವನ್ನು ಅಡಗುಮೆಟ್ಟಲು ಜಾಗರೂಕತೆಯಿಂದ ಸಂತತವಾಗಿ ಪ್ರಯತ್ನಿಸಿ ಅಭ್ಯುದಯ ಸಿದ್ಧಿಯನ್ನು ಪಡೆದನು, ವೃದ್ಧ ರಾಜನಾದ ರಘುವು ಕೂಡ ಸ್ವಾರ್ಥ ಪ್ರವೃತ್ತಿಯುಳ್ಳ ಇಂದ್ರಿಯಗಳನ್ನು ನಿಗ್ರಹಿಸಲು ಜಾಗರೂಕತೆಯಿಂದ ಸಂತತವಾಗಿ ಪ್ರಯತ್ನಿಸಿ ಅಪವರ್ಗ ಸಿದ್ಧಿಯನ್ನು ಪಡೆದು ಜೀವನ್ಮುಕ್ತನಾದನು

ಸರ್ವ ಭೂತಗಳಲ್ಲಿ ಸಮದರ್ಶಿಯಾಗಿದ್ದ ರಘುವು ತನ್ನ ಪುತ್ರನಾದ ಅಜನ ಆಕಾಂಕ್ಷೆಯ ನಿರ್ಬಂಧದಿಂದ ಕೆಲವು ವರ್ಷಗಳ ಕಾಲ ಆಶ್ರವು

---

* ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ, ಆಶ್ರಯ-ಇವು ಷಡ್ಗುಣಗಳು

† ಸತ್ವಗುಣ, ರಜೋಗುಣ, ತಮೋಗುಣ-ಇವು ಗುಣತ್ರಯಗಳು ಗೀತೆಯಲ್ಲಿ ಹೇಳಿರುವಂತೆ

ನ್ಯಾಸಿಯಾಗಿ ಐಹಿಕ ಜೀವನವನ್ನು ನಿರ್ವಹಿಸಿದನು ಆ ಬಳಿಕ ಅವನು ಯೋಗ ಸಮಾಧಿಯಿಂದ ಮಾಯಾತೀತನಾದ ಮತ್ತು ಅವ್ಯಯನಾದ ಪರಮ ಪುರುಷನ ಸಾಕ್ಷಾತ್ಕಾರವನ್ನು ಪಡೆದ * ದೇಹತ್ಯಾಗ ಮಾಡಿದನು ತಂದೆಯು ದೇಹತ್ಯಾಗ ಮಾಡಿದುದನ್ನು ಕೇಳಿ ಅಜನು ದುಃಖ ವಿಹ್ವಲವಾಗಿ ಬಹಳ ಹೊತ್ತು ಕಂಬನಿಯನ್ನು ಸುರಿಸಿದನು ಅನಂತರ, ಯತಿಗಳೊಡನೆ ಕೂಡಿ ತನ್ನ ತಂದೆಯ ದೇಹಕ್ಕೆ ( ಸಂನ್ಯಾಸಿಯ ದೇಹಕ್ಕೆ ದಹನ ಸಂಸ್ಕಾರವಿಲ್ಲದ ಕಾರಣ ) ಅನಗ್ನಿ ವಿಧಿಗಳಿಂದ ನೈಷ್ಠಿಕ ಸಂಸ್ಕಾರವನ್ನು ಮಾಡಿದನು ಪಿತೃ ಕಾರ್ಯ ವಿಧಿಜ್ಞನಾದ ಅಜನು ಔರ್ಧ್ವ ದೈಹಿಕ ವಿಧಿಗಳನ್ನೆಲ್ಲಾ ಪಿತೃಭಕ್ತಿ ಯಿಂದ ಸಾಂಗವಾಗಿ ನೆರವೇರಿಸಿದನು ಆದರೆ, ಯೋಗ ಸಮಾಧಿಯಿಂದ ದೇಹತ್ಯಾಗ ಮಾಡಿದ ರಘುವಿನಂತಹ ಜ್ಞಾನಿಗಳಿಗೆ ತನಯದತ್ತವಾದ ಪಿಂಡಾ ದಿಗಳ ಆಕಾಂಕ್ಷೆಯಿರುವುದಿಲ್ಲ ಜ್ಞಾನಸಾಧನೆ ಮಾಡಿ ಯೋಗ ಸಮಾಧಿಯಿಂದ ಪರಮಪುರುಷನ ಸಾಕ್ಷಾತ್ಕಾರ ಹೊಂದಿ ದೇಹವನ್ನು ತ್ಯಜಿಸಿದ ರಘುವಿನ ಮರಣಕ್ಕಾಗಿ ಶೋಕಿಸುವುದು ಯುಕ್ತವಲ್ಲವೆಂದು ಪ್ರಾಜ್ಞರು ಅಜನಿಗೆ ಸಮಾ ಧಾನ ವಚನಗಳನ್ನು ಹೇಳಿದ ಮೇಲೆ ಅವನ ಶೋಕವು ಕಡಮೆಯಾಯಿತು

ತನ್ನ ಮನೋವ್ಯಥೆಯು ಪರಿಹಾರವಾದ ಮೇಲೆ ಅಜನು ಶತ್ರುಗಳ ನ್ನೆಲ್ಲ ಜಯಿಸಿ ಅಖಿಲ ರಾಜ ಮಂಡಲವೇ ತನ್ನ ಸ್ವಾಧೀನವಾಗಿ ತನ್ನ ಆಜ್ಞೆಗೆ ಪ್ರತಿಯೇ ಇಲ್ಲದಂತೆ ಪೌರುಷವನ್ನು ಮೆರೆದನು ಕ್ಷಿತೀಶನಾದ ಅವನಿಗೆ ಭೂಮಿಯು ಶ್ರೇಷ್ಠ ವಸ್ತುಗಳನ್ನು ಕೊಟ್ಟು ರಾಜ್ಯಾಭ್ಯುದಯಕ್ಕೆ ಸಹಾಯ ಮಾಡಿದಂತೆಯೇ ಅವನ ಭಾಮಿನಿಯಾದ ಇಂದುಮತಿಯು ವೀರನಾದ ಪುತ್ರ ರತ್ನವನ್ನು ಕೊಟ್ಟು ವಂಶಾಭ್ಯುದಯಕ್ಕೆ ಸಹಾಯಮಾಡಿದಳು ದಶರಶ್ಮಿ ಯಾದ ಸೂರ್ಯನಂತೆ ತೇಜಸ್ವಿಯೂ, ದಶದಿಕ್ಕುಗಳಲ್ಲಿಯೂ ಯಶಸ್ವಿಯಾಗಿ ದಶಕಂಠಾರಿಯಾದ ಶ್ರೀರಾಮಚಂದ್ರನಿಗೆ ತಂದೆಯಾಗತಕ್ಕವನೂ, ದಶದಿಕ್ಕು

---

* "ಸಂಯೋಗೋ ಯೋಗ ಇತ್ಯುಕ್ತೋ ಜೀವಾತ್ಮಪರಮಾತ್ಮನೋಃ" (ಜೀವಾತ್ಮ ಪರಮಾತ್ಮರ ಸಂಯೋಗವೇ ಯೋಗವೆನಿಸಿಕೊಳ್ಳುತ್ತದೆ) ವಸಿಷ್ಠವಾಣಿ

ಗಳಿಗೂ ತನ್ನರಥದಲ್ಲಿ ದಿಗ್ವಿಜಯ ಯಾತ್ರೆ ಹೊರಡುವವನಾಗಿದ್ದ ಆ ಅಜ ಪುತ್ರನಿಗೆ ದಶರಥನೆಂದು ಹೆಸರಿಡಲು ಜ್ಞಾನಿಗಳಾದ ವಿದ್ವಾಂಸರು ನಿಶ್ಚೈಸಿದರು ವೇದ ವೇದಾಂಗಗಳ ಅಧ್ಯಯನ ಮಾಡಿ ಋಷಿರುಣದಿಂದಲೂ, ಯಜ್ಞಾದಿಗಳನ್ನು ಮಾಡಿ ದೇವರುಣದಿಂದಲೂ ಮುಕ್ತನಾಗಿದ್ದ ಅಜಚಕ್ರೇಶ್ವರನು ಪುತ್ರನನ್ನು ಪಡೆದು ಪಿತೃರುಣದಿಂದಲೂ ಬಿಡುಗಡೆ ಹೊಂದಿದನು ಹೀಗೆ ಋಣತ್ರಯ ವಿಮುಕ್ತನಾಗಿದ್ದ ಅಜಚಕ್ರೇಶ್ವರನು ಪರಿವೇಷ ಮುಕ್ತನಾದ ಸೂರ್ಯನಂತೆ ವಿರಾಜಿಸಿದನು ಅವನ ಬಲವು ಆರ್ತರ ಭಯೋಪಶಾಂತಿಗಾಗಿ ವಿನಿಯೋಗಿಸಲಾಯಿತು, ಸ್ವಾರ್ಥಸಾಧನೆಯ ಉದ್ದೇಶದಿಂದ ಪರಪೀಡನಗಾಗಿ ಅದು ವಿನಿಯೋಗವಾಗಲಿಲ್ಲ ಅವನ ವಿಪುಲವಾದ ವಿದ್ಯಾಸಂಪತ್ತು ಮಾತ್ರವೇ ಪರ ಪ್ರಯೋಜನಕ್ಕಾಗಿ ವಿನಿಯೋಗವಾಗಿರಲಿಲ್ಲ ಅವನ ಸಂಪತ್ತು ಮಾತ್ರವೇ ಪರಪ್ರಯೋಜನಕ್ಕಾಗಿ ವಿನಿಯೋಗವಾಗಿರಲಿಲ್ಲ ಅವನ ಸಕಲ ಸದ್ಗುಣಗಳೂ ಪರ ಪ್ರಯೋಜನ ಸಾಧಕವಾಗಿದ್ದುವು

ಅಜಚಕ್ರೇಶ್ವರನ ಪ್ರಜೆಗಳೆಲ್ಲರೂ ನಿರ್ಭೀತರಾಗಿ ನೆಮ್ಮದಿಯಿಂದಿದ್ದರ ಹೀಗ ಪ್ರಜಾಹಿತಸಾಧಕನಾಗಿ ಕರ್ತವ್ಯ ನಿಷ್ಠನಾಗಿದ್ದುದರ ಜೊತೆಗೆ ಸುಪುತ್ರನನ್ನೂ ಪಡೆದಿದ್ದ ಅಜನೃಪನು ಒಂದುದಿನ ಸುರೇಂದ್ರನು ಶಚೀ ಸಮೇತನಾಗಿ ನಂದನವನದಲ್ಲಿ ವಿಹರಿಸುವಂತೆ—ಇಂದುಮತೀದೇವಿಯೊಡನೆ ನಗರೋಪವನದಲ್ಲಿ ವಿಹರಿಸುತ್ತಿದ್ದನು[1] ಆಗ ನಾರದನು ದಕ್ಷಿಣ ಸಮುದ್ರ ತೀರದಲ್ಲಿ ( ಈಗಿನ ಮಲೆಯಾಳ ದೇಶದ ಸಮುದ್ರ ತೀರದಲ್ಲಿ) ಗೋಕರ್ಣೇಶ್ವರನ ಮುಂದೆ ವೀಣಾವಾದನ ಮಾಡಿ ಸೇವೆ ಸಲ್ಲಿಸುವ ಅಭಿಲಾಷೆಯಿಂದ ಆಕಾಶ ಮಾರ್ಗದಲ್ಲಿ ಹೋಗುತ್ತಿದ್ದನು ಸ್ವರ್ಗಲೋಕದ ಹೂಗಳಿಂದ ಕಟ್ಟಿದ ಮಾಲೆಯೊಂದು ವೀಣೆಯ ಕಿವಿಗಳಿಂದ ಕಳಚಿಕೊಂಡಿತು ಅದರ ಸುಗಂಧಕ್ಕಾಗಿ ಆಸೆಪಟ್ಟು ವಾಯುವು ಅತಿ ಶೀಘ್ರವಾಗಿ ಸಾಗಿಸಿಕೊಂಡು ಬಂದಂತೆ ತೋರುತ್ತಿದ್ದ ಆ ಸುಮಮಾಲೆಯು ಕೆಳಕ್ಕೆ ಬೀಳುತ್ತಿದ್ದಿತು ಆ

[1] ಅಜಚಕ್ರೇಶ್ವರನು ಸ್ವಸುಖಕ್ಕಿಂತ ಮೊದಲು ಪ್ರಜಾ ಸೌಖ್ಯಕ್ಕೆ ಕರ್ತವ್ಯನಿಷ್ಠೆಯಿಂದ ಗಮನಕೊಟ್ಟು ಆ ಬಳಿಕ ತನ್ನ ಸುಖ ಸಂತೋಷಗಳಿಗೆ ಮನಸ್ಸು ಮಾಡುತ್ತಿದ್ದನೆಂಬುದು ಇದರ ಆಶಯ

ಸುಮಮಾಲೆಯ ಸುತ್ತಲೂ ಕವಿದಿದ್ದ ಭ್ರಮರಗಳೂ ಒಂದೊಂದಾಗಿ ಅದನ್ನನುಸರಿಸಿ ಕೆಳಕ್ಕೆ ಬರುತ್ತಿದ್ದುವು ಅದನ್ನು ನೋಡಿದರೆ, ವಾಯುವು ಬಲಾತ್ಕಾರದಿಂದ ಸುಮಮಾಲೆಯನ್ನು ಕೆಡಹಿ ಹಿಂಸಿಸಿದುದಕ್ಕಾಗಿ ವೀಣೆಯು ಕಾಡಿಗೆ ಕದಡಿ ಕಪ್ಪಾದ ಅಶ್ರುಬಿಂದುಗಳನ್ನು ಸುರಿಸಿ ದುಃಖಿಸುತ್ತಿದೆಯೋ ಎಂಬಂತೆ ತೋರುತ್ತಿದ್ದಿತು ಆ ಋತುವಿನಲ್ಲಿದ್ದ ನಾನಾ ಲತೆಗಳ ಪುಷ್ಪಗಳಿಗಿಂತ ಹೆಚ್ಚು ಮಕರಂದದಿಂದಲೂ ಮತ್ತು ಸುವಾಸನೆಯಿಂದಲೂ ತುಂಬಿದ್ದ ಸ್ವರ್ಗಲೋಕದ ಆ ಪುಷ್ಪಮಾಲಿಕೆಯು ಇಂದುಮತಿಯ ಎದೆಯ ಮೇಲೆ ಬಿದ್ದಿತು ಅವಳು ಆ ಪುಷ್ಪಮಾಲಿಕೆಯನ್ನು ನೋಡಿದೊಡನೆಯೇ ವಿಹ್ವಲೆಯಾಗಿ-ಚಂದ್ರನು ರಾಹುಗ್ರಸ್ತನಾದ ಮೇಲೆ ಬೆಳದಿಂಗಳನ್ನು ಆವರಿಸಿದ ಕತ್ತಲೆಯಂತೆ-ಮುಖವು ಕಪ್ಪಿಟ್ಟು ಮೃತಳಾದಳು ದೇಹಸ್ವಾಧೀನವಿಲ್ಲದ ಆಗಿನ ಅವಸ್ಥೆಯಲ್ಲಿ ತಾನು ಮೃತಳಾಗುವುದಕ್ಕೆ ಮುಂಚೆ ತನ್ನ ಪತಿಯಾದ ಅಜನನ್ನೂ ಸೆಳದುಕೊಂಡು ನೆಲಕ್ಕುರುಳಿದಳು ಇಬ್ಬರೂ ಜೀವ ಸಹಿತವಾಗಿ ಕೆಳಕ್ಕುರುಳಿದರು, ಇಂದುಮತಿಯ ಪ್ರಾಣವು ಹಾರಿಹೋಯಿತು ಅಜನು ಮಾತ್ರ ಜೀವಂತನಾಗಿದ್ದನು ದೀಪದ ಕುಡಿಯಿಂದ ಜ್ವಾಲೆಯೊಡನೆ ಎಣ್ಣೆಯೂ ನೆಲಕ್ಕೆ ಬೀಳುವುದಿಲ್ಲವೆ?* ದಂಪತಿಗಳ ಪಾರ್ಶ್ವದಲ್ಲಿದ್ದ ಪರಿಜನರು ಅವರಿಬ್ಬರೂ ಕೆಳಕ್ಕುರುಳಿದುದನ್ನು ಕಂಡು ಆರ್ತಸ್ವರದಿಂದ ಕೂಗಿದನ್ನು ಕೇಳಿ ಸಮೀಪದ ಸರೋವರದಲ್ಲಿದ್ದ ಜಲಪಕ್ಷಿಗಳಿಗೆ ಭಯವಾಯಿತು ಪರಿಜನರೊಡನೆ ತಾವೂ ಸಮದುಃಖಿಗಳೋ ಎಂಬಂತೆ ಅವೂ ಚೀರತೊಡಗಿದುವು ಪರಿಜನರು ಬೀಸಣಿಗೆಯಿಂದ ಬೀಸುವುದೇ ಮುಂತಾದ ಶೈತ್ಯೋಪಚಾರ ಮಾಡಿದ ಮೇಲೆ ಅಜನಿಗೆ ಮೂರ್ಛೆ ತಿಳಿದು ಜ್ಞಾನಬಂದಿತು

---

* ಇಬ್ಬರೂ ಒಟ್ಟಿಗೆ ಕೆಳಕ್ಕುರುಳಿ, ಇಂದುಮತಿಯು ಮಾತ್ರ ಮೃತಳಾಗಿ ಅಜನು ಜೀವದಿಂದ ಉಳಿದುದಕ್ಕೆ ಕೊಟ್ಟಿರುವ ಈ ಹೋಲಿಕೆಯು ಅದ್ಭುತವಾಗಿಯೂ ಮನೋಹರವಾಗಿಯೂ ಇದೆ ಎಣ್ಣೆಯು ಹಾಗೆಯೇ ಉಳಿದು ದೀಪಜ್ವಾಲೆಯು ಮಾತ್ರ ಮಾಯವಾಗುತ್ತದೆ ಇಂದುಮತಿಯನ್ನು ದೀಪಜ್ವಾಲೆಗೂ ಅಜನನ್ನು ಎಣ್ಣೆಗೂ ಹೋಲಿಸಿ, ಹೆಂಗಸೇ ಗಂಡಸಿನ ಜೀವನವನ್ನು ಬೆಳಗುವ ತೇಜಸ್ಸೆಂದು ಕವಿಯು ಧ್ವನಿಯಿಂದ ಸೂಚಿಸಿರುವನು

ಮೃತಳಾಗಿದ್ದ ಇಂದುಮತಿಯ ದೇಹದ ಮೇಲೆ ಯಾವ ಪರಿಣಾಮವೂ ಆಗ ಲಿಲ್ಲ ಆಯುಃ ಪರಿಮಿತಿಯು ಉಳಿದಿದ್ದರೆ ಮಾತ್ರವೇ ಪ್ರತಿಕಾರ ವಿಧಾನ ದಿಂದ ಫಲವಾಗುತ್ತದೆ ಆಯುಸ್ಸಿಲ್ಲದವರಿಗೆ ನಡೆಯುವ ಪ್ರತಿಕಾರ ವಿಧಾನ ಗಳು ನಿಷ್ಫಲವಾಗುತ್ತವೆ ಚೈತನ್ಯವನ್ನು ಕಳೆದುಕೊಂಡ ಇಂದುಮತಿಯು ತಂತಿಗಳಿಲ್ಲದ ವೀಣೆಯಂತಿದ್ದಳು ಅವಳಲ್ಲಿ ಅತ್ಯಂತ ವಾತ್ಸಲ್ಯದಿಂದಿದ್ದ ಅಜನು ಅವಳ ದೇಹವನ್ನು ಎತ್ತಿ ಅವಳಿಗೆ ಚಿರಪರಿಚಿತವಾಗಿದ್ದ ತನ್ನ ತೊಡೆಯ ಮೇಲೆ ಮಲಗಿಸಿಕೊಂಡನು ಕರಣವ್ಯಾಪಾರಗಳನ್ನು ಕಳೆದು ಕೊಂಡ ಕಾರಣದಿಂದ ವಿಭಿನ್ನವರ್ಣವುಳ್ಳವಳಾಗಿದ್ದ ಇಂದುಮತಿಯು, ಪ್ರಾತಃ ಕಾಲದಲ್ಲಿ ಚಂದ್ರಮಂಡಲದ ಮೇಲಿನ ಮಲಿನ ಮೃಗಲೇಖೆಯಂತಿದ್ದಳು

ಪತ್ನೀವಿಯೋಗ ದುಃಖದಿಂದ ಕೂಡಿದ ಅಜನು ತನ್ನ ಸಹಜವಾದ ಧೀರತೆಯನ್ನು ಕಳೆದುಕೊಂಡು ಬಾಷ್ಪಗದ್ಗದನಾಗಿ ಪ್ರಲಾಪಿಸಿದನು ಅಚೇತನವಾದ ಕಬ್ಬಿಣವು ಕೂಡ ಅಭಿತಪ್ತವಾದಾಗ ಮಾರ್ದವವನ್ನು ಪಡ ಯುತ್ತದೆ ಹೀಗಿರುವಲ್ಲಿ ಶರೀರಧಾರಿಗಳು ಶೋಕ ಸಂತಪ್ತರಾದಾಗಿನ ಸ್ಥಿತಿ ಯನ್ನು ಹೇಳತಕ್ಕುದೇನು ? ಅಜನು ಮೃತಳಾದ ತನ್ನ ಪತ್ನಿಯನ್ನು ಸಂಬೋಧಿಸಿ ಪ್ರಲಾಪಿಸಿದ ವಿವರವೇನೆಂದರೆ "ಅಯ್ಯೋ ! ದೇಹ ಸಂಸರ್ಗ ದಿಂದ ಕುಸುಮಗಳು ಕೂಡ ಆಯುಸ್ಸನ್ನು ಅಪಹರಿಸುವುದು ಸಾಧ್ಯವಾದ ಮೇಲೆ ವಿಧಿಯು ಪ್ರಹರಿಸಲು ಮತ್ತಾವ ವಸ್ತುವು ತಾನೇ ಸಾಧನವಾಗಲಾ ರದು ? ಅಥವಾ ಪ್ರಜಾಂತಕನು ಮೃದುವಸ್ತುಗಳನ್ನು ಹಿಂಸಿಸಲು ಮೃದು ವಾದ ಸಾಧನಗಳನ್ನೇ ಪ್ರಯೋಗಿಸುತ್ತಾನೆಂದು ತೋರುತ್ತದೆ ಮೃದು ವಾದ ನಳಿನಿಗು ವಿಪತ್ತಿಗೆ ಮೃದುವಾದ ಹಿಮಸೇಕವೇ ಕಾರಣವಾಗುವ ಪೂರ್ವನಿದರ್ಶನವಿದ್ದೇ ಇದೆ ಕೋಮಲವಾದ ಈ ಕುಸುಮಗಳು ಜೀವವನ್ನ ಪಹರಿಸಬಲ್ಲುವಾದರೆ, ನನ್ನ ಎದೆಯಮೇಲಿಟ್ಟುಕೊಂಡರೂ ನನ್ನನ್ನೇಕೆ ಅವು ಕೊಲ್ಲುವುದಿಲ್ಲ ? ಈಶ್ವರೇಚ್ಛೆಯಿಂದ ಕೆಲವು ಸಂದರ್ಭಗಳಲ್ಲಿ ವಿಷವು ಕೂಡ ಅಮೃತವಾಗುವುದು ಅಮೃತವು ಕೂಡ ವಿಷವಾಗುವುದು ಅಥವಾ ನನ್ನ ಭಾಗ್ಯವಿಪ್ಲವದಿಂದ ವಿಧಿಯು ಈ ಸುಮಮಾಲೆಯ ರೂಪದ ಸಿಡಿಲನ್ನು

ಪ್ರಯೋಗಿಸಿ ತರುವನ್ನುಳಿಸಿ ಅದನ್ನು ಆಶ್ರಯಿಸಿದ್ದ ಲತೆಯನ್ನು ಮಾತ್ರ ನಾಶಗೊಳಿಸಿದೆ ಪ್ರಿಯಳೆ! ನಾನು ನಿನ್ನಲ್ಲಿ ಅಪರಾಧಿಯಾಗಿದ್ದಾಗಲೂ ನನ್ನಲ್ಲಿ ತಿರಸ್ಕಾರ ಭಾವವನ್ನು ತೋರಿಸದೆ ಪ್ರೀತಿಯಿಂದ ಮಾತನಾಡಿಸುತ್ತಿದ್ದೆ ಹೀಗಿದ್ದೂ ಈಗ ನಿರಪರಾಧಿಯಾಗಿರುವ ನಾನು ಒತ್ತದವೆಗೇ ಸಂಭಾಷಣ ಯೋಗ್ಯನಲ್ಲವೆಂದು ಭಾವಿಸಿ ಸುಮ್ಮನಾಗಿರುವೆಯೇಕೆ ? ಶುಚಿಸ್ಮಿತದಿಂದ ಬೆಳಗುತ್ತಿದ್ದ ಇಂದುಮತಿ! ನಾನು ನಿನ್ನಲ್ಲಿ ಕೃತಕ ಪ್ರೇಮವನ್ನು ತೋರಿಸುತ್ತಿದ್ದ ಶಠನೆಂದೇ ನೀನು ಭಾವಿಸಿದ್ದೆಯೆಂದು ತೋರುತ್ತದೆ. ಆದಕಾರಣವೇ ನೀನು ನನಗೆ ತಿಳಿಸದೆಯೇ ಪರಲೋಕಕ್ಕೆ ತೆರಳಿ ಮತ್ತೆ ನನ್ನಲ್ಲಿಗೆ ಬಾರದಂತಹ ಪರಿಸ್ಥಿತಿಯನ್ನು ಕಲ್ಪಿಸಿಕೊಂಡಿರುವೆ ನಾನು ಮೂರ್ಛಿತನಾದಾಗ ನನ್ನ ಹತ ಜೀವಿತವು ಇಂದುಮತಿಯನ್ನೇ ಅನುಸರಿಸಿತು ಆದರೆ ಅವಳನ್ನು ಬಿಟ್ಟು ಹಿಂತಿರುಗಿತು ಇದೇಕೆ ಹೀಗೆಮಾಡಿತೋ ಕಾಣೆ ಈ ರೀತಿ ಆತ್ಮಕೃತವಾದ ಪ್ರಬಲ ವೇದನೆಯನ್ನು ನನ್ನ ಹತಜೀವಿತವು ಅನುಭವಿಸಲಿ! ವನದಲ್ಲಿ ವಿಹರಿಸಿದ ಶ್ರಮದಿಂದ ಹುಟ್ಟಿದ ಬೆವರಿನ ಹನಿಗಳು ಕೂಡ ಇನ್ನೂ ಹಾಗೆಯೇ ಉಳಿದಿವೆ. ಆದರೆ ನಿನ್ನ ಚೇತನವು ಮಾತ್ರ ಅಸ್ತಮಿತವಾಯಿತು ಅಸ್ಥಿರವಾದ ಈ ಜೀವನಕ್ಕೇ ಧಿಕ್ಕಾರವಿರಲಿ! ನಾನು ಮನಸ್ಸಿನಲ್ಲಿ ಕೂಡ ನಿನಗೆ ಅಪ್ರಿಯವಾದುದನ್ನು ಮಾಡಲಿಚ್ಛಿಸಿದುದಿಲ್ಲ ಹೀಗಿದ್ದೂ ನೀನು ನನ್ನನ್ನು ಬಿಟ್ಟು ಹೋದುದೇಕೆ? ನಾನು ಹೆಸರಿಗೆ ಕ್ಷಿತಿಪತಿ ನೀನೊಬ್ಬಳೇ ನನ್ನ ಮಡದಿ ನನ್ನ ಪ್ರೀತಿಯು ನಿನ್ನಲ್ಲಿ ಮಾತ್ರವೇ ನೆಲಸಿದೆ ಹೀಗಿದ್ದೂ ನನ್ನನ್ನು ಬಿಟ್ಟುಹೋಗುವುದು ಉಚಿತವೆ? ಕುಸುಮಗಳಿಂದ ಖಚಿತವಾಗಿ ದುಂಬಿಯಂತೆ ಅಚ್ಚುಕಪ್ಪಾಗಿರುವ ನಿನ್ನ ಗಂಗುರು ಮುಂಗು

* ಮೂಲದಲ್ಲಿ "ಶುಚಿಸ್ಮಿತೇ" ಎಂಬ ಪದವಿದೆ ಮಲ್ಲಿನಾಥರ ವ್ಯಾಖ್ಯಾನದಲ್ಲಿ ಅದಕ್ಕೆ "ಧವಲ ಹಸಿತೇ" ಎಂಬ ಅರ್ಥವು ಉಚಿತವಾಗಿದೆ ಶುಭ್ರದಂತ ಪಂಕ್ತಿಗಳಿದ್ದುದರಿಂದ ಬೆಳುನಗೆಯುಳ್ಳವಳೆಂಬುದು ಆದರ ಆಶಯ "ಶುಚಿಸ್ಮಿತೇ" ಎಂದರೆ ನಿಷ್ಕಪಟವಾದ ನಗುವಿನಿಂದ ಕೂಡಿದ್ದವಳೆಂದೂ ಅರ್ಥವಾಗುತ್ತದೆ ಈ ಅರ್ಥವೂ ಹೊಂದಿಕೆಯಿಂದ ಕೂಡಿ ಸರಿಹೋಗುತ್ತದೆ

ಗಳು ಗಾಳಿಗೆ ಅಲುಗುತ್ತಿದೆ ಅದನ್ನು ನೋಡಿ ನನ್ನ ಮನಸ್ಸು ನಿನ್ನ ಪುನರಾಗಮನವನ್ನು ಶಂಕಿಸುತ್ತದೆ. ಹಿಮವತ್ಪರ್ವತದ ಗುಹೆಯಲ್ಲಿ ತೃಣ ಜ್ಯೋತಿಯೆಂಬ ಹೆಸರಿನ ಲತೆಯು ರಾತ್ರಿಯ ವೇಳೆ ಬೆಳಗಿದರೆ ಅಂಧಕಾರ ವೆಲ್ಲ ತೊಲಗುವಂತೆ, ನೀನು ಮತ್ತೆ ಜೀವಂತಳಾದರೆ ನನ್ನ ವಿಷಾದವು ಪರಿಹಾರವಾಗುತ್ತದೆ ಅಲಕ ಪಂಕ್ತಿಯಿಂದ ಆವೃತವಾಗಿ ಮಾತು ನಿಂತು ಹೋಗಿರುವ ನಿನ್ನ ಮುಖಮಂಡಲವು-ರಾತ್ರಿಯ ವೇಳೆ ಕಮಲ ಪುಷ್ಪವು ಮುಗಿದುಕೊಂಡಮೇಲೆ ಅದರಲ್ಲಿ ಝೇಂಕರಿಸುತ್ತಿದ್ದ ದುಂಬಿಯ ಸ್ವನವು ನಿಂತು ಹೋದಾಗಿನ ಆ ಕಮಲ ಪುಷ್ಪದಂತೆ- ನನ್ನ ಪರಿತಾಪಕ್ಕೆ ಕಾರಣವಾಗಿದೆ ರಜನಿಯು ಮತ್ತೆ ಚಂದ್ರಮನನ್ನು ಸೇರುತ್ತದೆ, ಚಕ್ರವಾಕಿಯು ಮತ್ತೆ ಚಕ್ರವಾಕ ಪಕ್ಷಿಯನ್ನು ಸೇರುತ್ತದೆ, ಆದುದರಿಂದ ಚಂದ್ರನೂ ಮತ್ತು ಚಕ್ರವಾಕಪಕ್ಷಿಯೂ ವಿರಹವನ್ನು ಸಹಿಸುವುದು ಶಕ್ಯ ಆದರೆ, ನೀನು ಮಾತ್ರ ನನ್ನಲ್ಲಿಗೆ ಮತ್ತೆ ಬರುವಂತೆಯೇ ಇಲ್ಲ ಹೀಗೆ ಚಿರವಿರಹಿಯಾದ ನನ್ನನ್ನು ನೀನು ಶೋಕಾಗ್ನಿಯಿಂದ ದಹಿಸುತ್ತೀಯೆ ಸುಕುಮಾರಿಯಾದ ನೀನು ನವಪಲ್ಲವದ ಮೃದುಶಯ್ಯೆಯಲ್ಲಿ ಮಲಗಿದ್ದಾಗ ಆ ಚಿಗುರುಗಳು ಕೂಡ ನಿನ್ನ ಅವಯವಗ ಗಳಿಗೆ ನೋವನ್ನುಂಟುಮಾಡುತ್ತಿದ್ದುವು ಹೀಗಿರುವಲ್ಲಿ, ನಿನ್ನ ದೇಹವು ಚಿತಾ ರೋಪಣವನ್ನು ಸಹಿಸುವ ಬಗೆ ಹೇಗೆ? ಇನ್ನು ಮೇಲಕ್ಕೇಳುವ ಸಂಭವವೇ ಇಲ್ಲದ (ಅಪ್ರತಿಬೋಧ ಶಾಯಿನಿಯಾಗಿರುವ) ನಿನ್ನ ವಿಲಾಸದ ನಡೆಯು ನಿಂತುಹೋಗಿದೆ ಆದರಿಂದ ನಿನ್ನ ಮೇಖಲೆಯು ಕೂಡ ನೀರವವಾಗಿದೆ ನಿನ್ನ ಆದ್ಯ ರಹ ಸ್ಸಖಿಯಾಗಿರುವ * ಈ ನಿನ್ನ ಮೇಖಲೆಯು, ನಿನ್ನ ಮೇಲಿನ ಅನುತಾಪದಿಂದ ತಾನೂ ಮೃತಪಟ್ಟಂತೆ ತೋರುತ್ತಿದೆ ಸ್ವರ್ಗಲೋಕಕ್ಕೆ ತೆರಳಲು ಉತ್ಸುಕಳಾಗಿದ್ದರೂ ನನಗೆ ಮಹತ್ತರವಾದ ಶೋಕವೇ ಒದಗುವಂತಿದ್ದುದನ್ನ ರಿತು ನನ್ನ ಸಮಾಧಾನಕ್ಕಾಗಿ, ನಿನ್ನ ಕಲಕಂಠಸ್ವನವನ್ನು ಕೋಗಿಲೆಗಳ

---

*ಸ್ತ್ರೀಯರು ಸ್ನಾನ ಕಾಲದಲ್ಲಿ ಕೂಡ ಡಾಬನ್ನು ಕತ್ತಿಗೆ ಹಾಕಿಕೊಂಡಿರುವುದನ್ನು ಮನಸ್ಸಿನಲ್ಲಿಟ್ಟುಕೊಂಡಿರುವ ಕವಿಯು, ಅದನ್ನು ಆದ್ಯ ರಹಸ್ಸಖಿಯೆಂದು ಕರೆದಿದ್ದಾನೆ

ಲ್ಲಿಯೂ, ಮದಾಲಸವಾದ ನಿನ್ನ ಮಂದಗಮನವನ್ನು ಕಲಹಂಸಿಗಳಲ್ಲಿಯೂ, ನಿನ್ನ ವಿಲೋಲದೃಷ್ಟಿಯನ್ನು ಹರಿಣಿಗಳಲ್ಲಿಯೂ, ನಿನ್ನ ವಿಭ್ರಮ ವಿಲಾಸಗಳನ್ನು ಗಾಳಿಗೆ ಚಲಿಸಿ ಬಳುಕುವ ಲತೆಗಳಲ್ಲಿಯೂ ಬಿಟ್ಟು ಹೋಗಿದ್ದೀಯೆ. ಅದೇನೋ ನಿಜವೇ ಆದರೂ ನಿನ್ನ ವಿರಹದಿಂದ ಉಂಟಾಗಿರುವ ಗುರುತರವಾದ ವ್ಯಥೆಯನ್ನನುಭವಿಸುತ್ತಿರುವ ನನ್ನ ಹೃದಯವನ್ನು ಸಮಾಧಾನಗೊಳಿಸಲು ಅವುಗಳಿಗೆ ಶಕ್ಯವಿಲ್ಲ ನೀನು ಈ ಸಹಕಾರ ವೃಕ್ಷಕ್ಕೆ ಪ್ರಿಯಂಗುಲತೆಯನ್ನು ಹಬ್ಬಿಸಿ ಬೆಳೆಯಿಸಿದ್ದೆ ಇವೆರಡಕ್ಕೂ ವಿವಾಹಮಂಗಲವನ್ನಾಚರಿಸದೆ ಹೊರಟುಹೋಗಿರುವುದು ಅಯುಕ್ತವೇ ಸರಿ ನಿನ್ನ ದೋಹದ ಕ್ರಿಯೆಯಿಂದ ಈ ಅಶೋಕವೃಕ್ಷವು ಹೂಗಳನ್ನು ಬಿಟ್ಟಿದೆ- ನಿನ್ನ ಅಲಕಾರಾಭರಣವಾಗಿ ಆ ಮುಂಗುರುಳಿನ ಮಧ್ಯದಲ್ಲಿ ಶೋಭಿಸಬೇಕಾಗಿದ್ದ ಈ ಅಶೋಕ ಕುಸುಮಗಳನ್ನು ಪಿಂಡ ಪ್ರದಾನಕಾಲದಲ್ಲಿ ನಿನಗೆ ಸಮರ್ಪಿಸುವ ದುಃಖವನ್ನು ಹೇಗೆ ಸಹಿಸಲಿ? ಸುಗಾತ್ರಿಯಾದ ಇಂದುಮತಿ! ಅನ್ಯದುರ್ಲಭವಾದ ನಿನ್ನ ಚರಣಾನುಗ್ರಹದಿಂದ ಈ ಅಶೋಕವೃಕ್ಷವು ಪುಷ್ಪಿತವಾಗಿದೆ † ನೂಪುರಗಳ ಶಬ್ದದಿಂದ ಕೂಡಿದ ಆ ಚರಣಾನುಗ್ರಹವನ್ನು ಸ್ಮರಿಸಿ ಕುಸುಮರೂಪದ ಅಶ್ರುಬಿಂದುಗಳನ್ನು ವರ್ಷಿಸುತ್ತ ಈ ಅಶೋಕವೃಕ್ಷವು ನಿನ್ನ ಮರಣಕ್ಕಾಗಿ ಶೋಕಿಸುವಂತಿದೆ ಕಿನ್ನರಕಂಠಿಯಾದ ಇಂದುಮತಿ! ನಿನ್ನ ನಿಃಶ್ವಾಸವನ್ನು ಹೋಲುವಂತೆ ಈ ಬಕುಲ ಪುಷ್ಪಗಳು ಸುಗಂಧವನ್ನು ಬೀರುತ್ತಿವೆ ನನ್ನ ಸಹಾಯದಿಂದ ಅವುಗಳನ್ನು ಪೋಣಿಸಿ ವಿಲಾಸಮೇಖಲೆಯನ್ನು ರಚಿಸುವ ಕಲಸವು ಅರೆವಾಸಿ ಮಾತ್ರವೇ ಮುಗಿದಿದೆ ಅದನ್ನು ಪೂರೈಸುವುದಕ್ಕೆ ಮುಂಚಿತವಾಗಿಯೇ ನೀನು ಹೀಗೇಕೆ ಮಲಗಿರುವೆ? ನಿನ್ನ ಈ ಸಖೀಜನರು ಸಮದುಃಖಸುಖರೆನಿಸಿ ನಿನ್ನ ದುಃಖದಲ್ಲಿಯೂ ನಿನ್ನ ಸಂತೋಷದಲ್ಲಿಯೂ ಸಮಭಾಗಿಗಳು ನಿನ್ನ ಅವಲಂಬನದಿಂದಲೇ ಬಳೆಯಬೇಕಾಗಿದ್ದ ಈ ನಮ್ಮ ಮಗುವಾದ ವಶ

†ಸುಂದರಿಯರಾದ ಸ್ತ್ರೀಯರು ಅಶೋಕ ವೃಕ್ಷವನ್ನು ಒದೆದರೆ ಅದು ಹೆಚ್ಚಾಗಿ ಹೂಗಳನ್ನು ಬಿಡುತ್ತದೆಂಬ ಕವಿ ಸಮಯವನ್ನು ಕಾಳಿದಾಸನು ಉಪಯೋಗಿಸಿದ್ದಾನೆ

ರಥನು ಪಾಡ್ಯಮಿಾ ಚಂದ್ರನಂತೆ ವರ್ಧಿಷ್ಣು, ನಾನು ಏಕಪತ್ನೀ ವ್ರತಸ್ಥನಾಗಿ ನಿನ್ನೊಬ್ಬಳಲ್ಲೇ ಪ್ರೇಮವುಳ್ಳವನು, ಹೀಗಿದ್ದರೂ ನಿನ್ನ ಆಶ್ರಯವನ್ನೇ ಬಯಸುತ್ತಿದ್ದ ನಮ್ಮೆಲ್ಲರನ್ನೂ ಬಿಟ್ಟು ಹೊರಟುಹೋಗಲು ನೀನು ನಿಶ್ಚಲ ಮನಸ್ಸುಮಾಡಿದುದು ಕಠಿನ ವ್ಯಾಪಾರವೇ ಸರಿ ನೀನು ನನ್ನನ್ನು ಅಗಲಿ ಹೊರಟುಹೋದುದರಿಂದ ನನ್ನ ಧೈರ್ಯವು ಮರೆಯಾಯಿತು, ನನ್ನ ಭೋಗಾಭಿಲಾಷೆಯು ಕೊನೆಗಂಡಿತು, ಗಾಯನವು ವಿರತವಾಯಿತು, ಋತುಗಳು ನನಗೆ ಸಂತೋಷವನ್ನುಂಟುಮಾಡುತ್ತಿದ್ದುದು ಮುಕ್ತಾಯವಾಯಿತು, ಆಭರಣ ಪ್ರಯೋಜನವು ನಷ್ಟವಾಯಿತು, ನನ್ನ ಶಯನವು ಪರಿಶೂನ್ಯವಾಯಿತು, ನೀನು ನನ್ನ ಗೃಹಿಣಿ, ಸಚಿವಳು, ಏಕಾಂತ ಸಖಿ, ಲಲಿತವಾದ ಚತುಸ್ಷಷ್ಠಿ ಕಲೆಗಳ ಪ್ರಯೋಗದಲ್ಲಿ ಪ್ರಿಯ ಶಿಷ್ಯೆ, ಹೀಗಿದ್ದವಳನ್ನು ಕರೆದೊಯ್ದು ಮೃತ್ಯುವು ನನ್ನ ಸರ್ವಸ್ವವನ್ನೂ ಅಪಹರಿಸಿದಂತೆಯೇ ಆಯಿತು ಮದಿರಾಕ್ಷಿ! ನನ್ನ ಬಾಯಿಯಿಂದ ಅರ್ಪಿಸಿದ (ಮಧೂಕ ಪುಷ್ಪಗಳಿಂದ ಮಾಡಿದ) ರಸವತ್ತಾಗ ಮಧುರಸವನ್ನು ಕುಡಿಯುತ್ತಿದ್ದ ನೀನು, ನನ್ನ ಕಣ್ಣೀರಿನಿಂದ ಕಲುಷಿತವಾಗಿರುವ ಕಣ್ಣೀರನ್ನು ಪರಲೋಕದಲ್ಲಿ ಹೇಗೆ ತಾನೆ ಪಾನ ಮಾಡುವೆ? ಈ ಅಜನು ಇನ್ನು ಮುಂದೆ ಸಮಸ್ತ ವೈಭವಗಳ ಮಧ್ಯದಲ್ಲಿದ್ದರೂ ಇದುವರೆಗಿನ ಸುಖವು ಮಾತ್ರವೇ ಅವನದೆಂದು ಭಾವಿಸು ಇನ್ನುಮುಂದೆ ಮತ್ತಾವ ವಿಷಯ ಭೋಗಗಳೂ ನನ್ನನ್ನು ಆಕರ್ಷಿಸಲಾರವು ನನ್ನ ಸಮಸ್ತ ಸುಖಗಳೂ ನಿನ್ನನ್ನೇ ಆಶ್ರಯಿಸಿದ್ದುವು, ನೀನಿಲ್ಲದ ಬಳಿಕ ನನಗೆ ಸುಖಾಪೇಕ್ಷೆಯೇ ಇಲ್ಲ"

ಶೋಕ ವಿಹ್ವಲನಾಗಿ ಈ ರೀತಿ ವಿಲಾಪಿಸುತ್ತಿದ್ದ ಕೋಸಲಾಧಿಪನಾದ ಅಜನ ದುಃಖವನ್ನು ಕಂಡು ಮರಗಳು ಕೂಡ ಮರುಗಿ ಮಕರಂದ ರೂಪದ ಕಣ್ಣೀರನ್ನು ಸುರಿಸಿದುವು * ಸುಂದರಿಯಾದ ಇಂದುಮತಿಯ ದೇಹವನ್ನು

* ಗಿಡಮರಗಳಿಗೂ ಸುಖದುಃಖಾನುಭವವುಂಟೆಂಬುದು ಪ್ರಾಚೀನ ಕಾಲದಿಂದಲೂ ಭರತ ಖಂಡದಲ್ಲಿ ಪ್ರಸಿದ್ಧವಾಗಿರುವ ಸಂಗತಿ ಈಚೆಗೆ ಅದಕ್ಕೆ ವಿಜ್ಞಾನದ ಮುದ್ರೆಯೂ ಬಿದ್ದಿದೆ

ಸ್ವಜನರು ಅಜನ ತೊಡೆಯಿಂದ ಹೇಗೋ ಬಹಳ ಕಷ್ಟದಿಂದ ಸೆಳೆದುಕೊಂಡರು ದಿವ್ಯ ಕುಸುಮಗಳಿಂದಲೂ ಇತರ ಮಂಗಳ ದ್ರವ್ಯಗಳಿಂದಲೂ ಅಂತ್ಯಾಲಂಕೃತ ನಾಗಿದ್ದ ಆ ದೇಹವನ್ನು ಅಗರು ಚಂದನಗಳ ಕೊರಡುಗಳಿಂದ ರಚಿತವಾಗಿದ್ದ ಚಿತೆಯ ಮೇಲಕ್ಕೆ ಸಾಗಿಸಿ ಅವರು ಅದಕ್ಕೆ ಅಗ್ನಿ ಸಂಸ್ಕಾರ ಮಾಡಿಸಿದರು ಅಜನು ಅವಳೊಡನೆ ಸಹಗಮನ ಮಾಡಲಿಚ್ಛಿಸಿದನು ಆದರೆ, ಪ್ರಮದಾ ವಿಯೋಗ ದುಃಖವನ್ನು ಸಹಿಸುವ ಸಾಮರ್ಥ್ಯವಿಲ್ಲದೆ ಅಜನು ಅವಳೊಡನೆ ಸಹಗಮನ ಮಾಡಿದನೆಂಬ ಲೋಕಾಪವಾದದ ಶಂಕೆಯಿಂದ ಆ ಪ್ರಯತ್ನ ವನ್ನು ನಿಲ್ಲಿಸಿದನು ಕೇವಲ ಜೀವಿತಾಶೆಯಿಂದ ಅವನು ಅದನ್ನು ನಿಲ್ಲಿಸಲಿಲ್ಲ ಶಾಸ್ತ್ರಜ್ಞನಾಗಿದ್ದ ಅಜನು ಗುಣಶೇಷಳಾಗಿದ್ದ ತನ್ನ ಭಾಮಿನಿಯನ್ನುದ್ದೇಶಿಸಿ ದಶಾಹದ ಅಂತ್ಯಕ್ರಿಯೆಗಳನ್ನು ಅದೇ ಉಪವನದಲ್ಲಿ ನೆರವೇರಿಸಿ ಪೂರೈಸಿದನು, ಅನಂತರ ಇಂದುಮತೀರಹಿತನಾಗಿ ಪುರ ಪ್ರವೇಶಮಾಡಿದನು ಪ್ರಾತಃಕಾಲದ ಚಂದ್ರನಂತೆ ಕಳೆಗುಂದಿದ್ದ ಅಜನನ್ನು ನೋಡಿ, ಅವನಲ್ಲಿ ಸಹಾನುಭೂತಿ ಯುಳ್ಳವರಾಗಿ ಪೌರಾಂಗನೆಯರು ಕಂಬನಿಯನ್ನು ಸುರಿಸಿ ರೋದಿಸಿದರು

ಅತ್ತ, ತನ್ನ ಆಶ್ರಮದಲ್ಲಿ ಯಜ್ಞದೀಕ್ಷೆಯನ್ನು ವಹಿಸಿದ್ದ ವಸಿಷ್ಠ ಮಹರ್ಷಿಯು ಶೋಕಜಡನಾಗಿ ಅಜನು ಪರಿತಪಿಸುತ್ತಿದ್ದುದನ್ನು ತನ್ನ ಯೋಗದೃಷ್ಟಿಯಿಂದ ತಿಳಿದು ಒಬ್ಬ ಶಿಷ್ಯನೊಡನೆ ಅಜನಿಗೆ ಸಂದೇಶ ವನ್ನು ಕಳುಹಿಸಿದನು ವಸಿಷ್ಠ ಶಿಷ್ಯನು ಅಯೋಧ್ಯೆಗೆ ಬಂದು ಅಜನಿಗೆ ತಿಳಿಸಿದುದೇನೆಂದರೆ: "ನೀನು ಪತ್ನೀವಿಯೋಗ ದುಃಖದಿಂದ ಪರಿತಪಿಸು ತ್ತಿರುವುದನ್ನು ಬಲ್ಲವರಾಗಿದ್ದರೂ ಸಹ, ಯಜ್ಞವಿಧಿಗಳು ಇನ್ನೂ ಪೂರ್ತಿ ಯಾಗಿಲ್ಲದಿರುವ ಕಾರಣ, ಗುರುಗಳು ನಿನಗೆ ಸಮಾಧಾನ ಹೇಳಿ ಸಂತೈಸು ವುದಕ್ಕಾಗಿ ತಾವೇ ಇಲ್ಲಿಗೆ ದಯಮಾಡಿಸಲು ಸಾಧ್ಯವಾಗಲಿಲ್ಲ ಎಲೈ ಸುವೃತ್ತನೆ! ಆ ಕಾರಣದಿಂದ ಅವರು ತಮ್ಮ ಕೆಲವು ಸಂದೇಶವಾಣಿಗಳನ್ನು ನಿನಗೆ ಶ್ರುತಪಡಿಸುವುದಕ್ಕಾಗಿ ನನ್ನನ್ನು ಕಳುಹಿಸಿದ್ದಾರೆ ನೀನು ಧೀರ ನೆಂದು ಪ್ರಖ್ಯಾತನಾಗಿದ್ದೀಯೆ ಆದಕಾರಣ ಅವರ ವಾಣಿಗಳನ್ನು ಮನ ಸ್ಸಿಗೆ ತಂದುಕೊಂಡು ಸಮಾಧಾನ ಹೊಂದು ಮೂರು ಲೋಕಗಳಲ್ಲಿ ತ್ರಿ

ಕಾಲಗಳಲ್ಲಿ ನಡೆಯುವುದನ್ನೂ ಗುರುವಸಿಷ್ಠರು ತಮ್ಮ ಅಪ್ರತಿಬಂಧ ಜ್ಞಾನ ದೃಷ್ಟಿಯಿಂದ ನೋಡಲು ಸಮರ್ಥರಾಗಿದ್ದಾರೆ ಹಿಂದೆ ತೃಣ ಬಿಂದುವೆಂಬ ಮಹರ್ಷಿಯೊಬ್ಬನು ದುಶ್ಚರವಾದ ತಪಸ್ಸನ್ನಾಚರಿಸುತ್ತಿದ್ದನು ಆತನ ತಪಸ್ಸಿನಿಂದ ತನ್ನ ಪದವಿಗೆಲ್ಲಿ ಚ್ಯುತಿಯುಂಟಾದೀತೋ ಎಂದು ಭೀತನಾದ ಮಹೇಂದ್ರನು ಅವನ ಯೋಗ ಸಮಾಧಿಯನ್ನು ಭೇದಿಸಿ ತಪಸ್ಸಿಗೆ ಭಂಗವನ್ನುಂಟುಮಾಡುವುದಕ್ಕಾಗಿ ಹರಿಣಿಯೆಂಬ ಸುರಾಂಗನೆಯನ್ನು ಪ್ರೇರಿಸಿದನು ತನ್ನ ತಪಸ್ಸಿಗೆ ಭಂಗವುಂಟಾದ ಕಾರಣಕ್ಕಾಗಿ ಪ್ರಲಯಕಾಲದ ತರಂಗದಂತ ಶಾಂತಿಸೀಮಾರೇಖೆಯನ್ನು ಮೀರಿ ಬಂದ ಕೋಪದಿಂದ ಕಣ್ದೆರೆದು ನೋಡಿ, ತನ್ನೆದುರಿಗೆ ಮನೋಹರವಾದ ವಿಭ್ರಮ ವಿಲಾಸಗಳಿಂದ ಬೆಡಗು ಮಾಡುತ್ತಿದ್ದ ಹರಿಣಿಯನ್ನು ಕುರಿತು 'ನೀನು ಮರ್ತ್ಯ ಲೋಕದಲ್ಲಿ ಹುಟ್ಟು' ಎಂದು ಅವನು ಶಪಿಸಿದನು ಅವಳು ಆ ಮಹರ್ಷಿಗೆ ಶರಣಾಗತಳಾಗಿ 'ಪೂಜ್ಯರೆ! ನಾನು ಪರಾಧೀನಯಾಗಿ ಪ್ರಮಾದವನ್ನಾಚರಿಸಿದವಳು ತಮಗೆ ಪ್ರತಿಕೂಲವನ್ನುಂಟುಮಾಡಿದ ಅಪರಾಧಿನಿ ನನ್ನನ್ನು ಕ್ಷಮಿಸಿ ಉದ್ಧರಿಸಬೇಕು' ಎಂದು ಬೇಡಿಕೊಂಡಳು ಮರ್ತ್ಯ ಲೋಕದಲ್ಲಿ ಹುಟ್ಟಿ ಸುರಪುಷ್ಪದರ್ಶನವಾದ ಮೇಲೆ ಶಾಪದಿಂದ ಬಿಡುಗಡೆ ಹೊಂದಬಹುದೆಂದು ತೃಣಬಿಂದು ಮಹರ್ಷಿಯು ಅವಳಿಗೆ ಅನುಗ್ರಹ ಮಾಡಿದನು ಅಪ್ಸರೆಯಾದ ಹರಿಣಿಯು ಶಾಪದ ಫಲವಾಗಿ ಕ್ರಥಕೌಶಿಕ ವಂಶದಲ್ಲಿ ಹುಟ್ಟಿ ನಿನ್ನ ಪಟ್ಟಮಹಿಷಿಯಾಗಿ ಚಿರಕಾಲ ನಿನ್ನನ್ನು ಸೇವಿಸಿದಳು ಅನಂತರ, ತನ್ನ ಶಾಪನಿವೃತ್ತಿ ಕಾರಣವಾದ ಸುರಲೋಕ ಪುಷ್ಪ ದರ್ಶನದಿಂದ ದೇಹತ್ಯಾಗಮಾಡಿದಳು ಆದಕಾರಣ, ಅವಳ ಮರಣಕ್ಕಾಗಿ ದುಃಖಿಸುವುದನ್ನು ಬಿಡು ಹುಟ್ಟಿದವರಿಗೆ ಸಾವು ಸಿದ್ಧ ದೇಹಧಾರಿಗಳಿಗೆ ವಿಪತ್ತುಗಳು ಉಪಸ್ಥಿತವಾಗಿಯೇ ಇರುತ್ತವೆ ನೀನು ಚಿಂತೆಯನ್ನು ಬಿಟ್ಟು ರಾಜ್ಯವನ್ನು ಪರಿಪಾಲಿಸು ವಸುಮತಿಯು ನರಪತಿಗಳಿಗೆ ಕಲತ್ರಸ್ಥಾನ * ಈ ವಿಯೋಗ ದುಃಖವು ಒದಗುವುದಕ್ಕೆ ಮುಂಚೆ

---

* ಸರ್ವಪ್ರಯತ್ನಗಳಿಂದಲೂ ಪತ್ನಿಯನ್ನು ಸಂತೋಷಪಡಿಸಿ ಹರ್ಷಿಸುವಂತೆ ಕಲ

ಸುಖಸಂಪತ್ತುಗಳ ಮಧ್ಯದಲ್ಲಿದ್ದೂ ನೀನು ದುರಹಂಕಾರ ವೃತ್ತಿಯಿಲ್ಲದೆ ಜ್ಞಾನಿಗುಚಿತವಾದ ರೀತಿಯಲ್ಲಿ ರಾಜ್ಯಭಾರವನ್ನು ನಿರ್ವಹಿಸುತ್ತಿದ್ದೆ ದುಃಖ ಜ್ವರವು ನಿನ್ನ ಮನಸ್ಸನ್ನು ಪೀಡಿಸುತ್ತಿರುವ ಈ ಸಮಯದಲ್ಲಿ ಧೀರತೆಯಿಂದ ವರ್ತಿಸಿ ವಿದ್ವಾಂಸರು ಸರ್ವಾವಸ್ಥೆಗಳಲ್ಲಿಯೂ ಧೈರ್ಯದಿಂದಿರುವ ರೆಂಬುದನ್ನು ನೀನು ತೋರಿಸಿಕೊಡಬೇಕು ನೀನು ಎಷ್ಟು ರೋದಿಸಿ ಎಷ್ಟು ಹಲುಬಿದರೆ ತಾನೆ ಇಂದುಮತಿಯು ಲಭಿಸಿಯಾಳೆ? ನೀನು ಅವಳೊಡನೆ ಮೃತಪಟ್ಟರೆ ತಾನೆ ಅವಳು ಲಭಿಸಿಯಾಳೆ? ಇನ್ನೆಲ್ಲಿ ಇಂದುಮತಿ? ದೇಹಿ ಗಳು ಪರಲೋಕವನ್ನು ಸಾರಿದಮೇಲೆ ಅವರವರ ಕರ್ಮಾನುಸಾರವಾಗಿ ಭಿನ್ನ ಪಥವುಳ್ಳವರಾಗುತ್ತಾರೆ ಆದುದರಿಂದ ನೀನು ಮೃತಪಟ್ಟರೂ ಅವಳು ಲಭಿ ಸಳು ನೀನು ಸಮಾಧಾನ ಮನಸ್ಸುಳ್ಳವನಾಗಿ ಪಿಂಡಪ್ರದಾನಾದಿ ವಿಧಿಗ ಳಿಂದ ನಿನ್ನ ಕುಟುಂಬಿನಿಯಲ್ಲಿ ಅನುಗ್ರಹತೋರಿ ಅವಳನ್ನು ತೃಪ್ತಿಪಡಿಸು ಸ್ವಜನರು ಅವಿಚ್ಛಿನ್ನವಾಗಿ ಕಂಬನಿಯನ್ನು ಸುರಿಸಿದರೆ ಆ ಕಂಬನಿಯು ಮೃತರ ಪ್ರೇತವನ್ನು ಏಕಪ್ರಕಾರವಾಗಿ ದಹಿಸುವುದೆಂದು ಮನುವೇ ಮುಂತಾ ದವರು ಹೇಳಿರುತ್ತಾರಲ್ಲವೆ? ಶರೀರಿಗಳಿಗೆ ಮರಣವೇ ಪ್ರಕೃತಿಯೆಂದೂ ಜೀ ವನವೇ ವಿಕೃತಿಯೆಂದೂ ವಿದ್ವಾಂಸರು ಹೇಳುವ ಕಾರಣ, ಕ್ಷಣಕಾಲ ಬದುಕಿ ದ್ದರೆ ಅಷ್ಟೇ ಲಾಭವೆಂದು ಪರಿಗಣಿಸಬೇಕಲ್ಲವೆ? ಮರಣವು ಸ್ವಭಾವಸಿದ್ಧವಾದ ಕಾರಣ, ಬದುಕಿದ್ದಷ್ಟು ಕಾಲವೇ ಅಲಭ್ಯಲಾಭವೆಂದೆಣಿಸಬೇಕು ಪ್ರಿಯರ ಮರಣವು ಹೃದಯಶಲ್ಯವೆಂದು ಮೂಢಚೇತನರು ಭಾವಿಸುತ್ತಾರೆ ಸ್ಥಿರ ಬುದ್ಧಿಯುಳ್ಳ ವಿದ್ವಾಂಸರಾದರೋ ಹುಟ್ಟಿದವರಿಗೆ ಮರಣವು ಸಿದ್ಧವೆಂಬುದನ್ನು ಮನಗಂಡು ಪ್ರಿಯರ ಮರಣವೇ ಮೋಕ್ಷದ್ವಾರವಾಗಿ ಪರಿಣಮಿಸುವುದೆಂದೂ ಅದರಿಂದ ಹೃದಯ ಶಲ್ಯನಿವೃತ್ತಿಯೆಂದೂ ಭಾವಿಸಿ ಪ್ರಶಾಂತರಾಗಿರುತ್ತಾರೆ ಇಷ್ಟಕ್ಕೂ, ಮತ್ತೆಮತ್ತೆ ದೇಹಗಳನ್ನು ಧರಿಸುವ ಜೀವಾತ್ಮನಿಗೆ ಸಂಯೋಗ ವಿಯೋಗಗಳು ಸ್ವಾಭಾವಿಕ. ಅದನ್ನು ಮನಗಂಡು ನಿತ್ಯಾನಿತ್ಯವಿವೇಕ ಹೊಂದಿದ

ತ್ರ ಸ್ಥಾನದಲ್ಲಿರುವ ವಸುಮತಿಯನ್ನ (ಅರ್ಥಾತ್ ಪ್ರಜೆಗಳನ್ನು) ಸಂತೋಷಪಡಿಸಿ ಕರ್ತವ್ಯ ನಿಷ್ಠೆಯಿಂದ ಹರ್ಷಿಸಬೇಕೆಂಬುದು ಆದರ ಆಶಯ

ಮೇಲೆ ಪುತ್ರ ಮಿತ್ರ ಕಲತ್ರಾದಿಗಳ ವಿಯೋಗದಿಂದ ಜ್ಞಾನಿಗೆ ಅನುತಾಪವುಂಟಾಗುವುದೇ ಎಂಬುದನ್ನು ನೀನೇ ಹೇಳು ಜಿತೇಂದ್ರಿಯವರ್ಯನಾದ ಅಜ ಚಕ್ರೇಶ್ವರನೇ! ನೀನು ಪಾಮರರಂತೆ ಶೋಕವಶನಾಗುವುದು ಯುಕ್ತವಲ್ಲ ಗಾಳಿಬೀಸಿದಾಗ ವೃಕ್ಷವೂ ಮತ್ತು ಪರ್ವತವೂ ಎರಡೂ ಅಲ್ಲಾಡುವುದಾದರೆ ಪರ್ವತದ ವೈಶಿಷ್ಟ್ಯವೆಲ್ಲಿ ಉಳಿದಂತಾಯಿತು?"

ವಸಿಷ್ಠ ಶಿಷ್ಯನಾದ ಆ ಮುನಿಯು ಉದಾರಮತಿಯಾದ ಗುರುವಿನ ಸಂದೇಶ ವಾಣಿಗಳನ್ನು ತಿಳಿಸಿದನು ಅವುಗಳನ್ನು ಕೇಳಿ ಅಜಚಕ್ರೇಶ್ವರನು "ಆಗಲಿ" ಎಂದು ಪ್ರತ್ಯುತ್ತರ ಕೊಟ್ಟು ಸಂದೇಶವನ್ನಂಗೀಕರಿಸಿ ಆತನನ್ನು ಬೀಳ್ಕೊಟ್ಟನು ಸದ್ಗುರು ವಸಿಷ್ಠ ಮಹರ್ಷಿಯ ಸಂದೇಶವು ಶೋಕಘನವಾಗಿದ್ದ ಅಜನ ಹೃದಯಕ್ಕಿಳಿಯಲೇ ಇಲ್ಲ ಗುರುವಿನ ಸಂದೇಶ ವಾಣಿಗಳು ಆತನ ಬಳಿಗೇ ಹಿಂತಿರುಗಿದಂತೆ ತೋರಿದುವು ಸತ್ಯಭಾಷಿಯೂ ಪ್ರಿಯಭಾಷಿಯೂ ಆಗಿದ್ದ ಅಜಚಕ್ರೇಶ್ವರನು ತನ್ನ ಕುಮಾರನಾದ ದಶರಥನು ಇನ್ನೂ ಬಾಲಕನಾಗಿದ್ದುದನ್ನು ಮನಸ್ಸಿಗೆ ತಂದುಕೊಂಡು ಅವನ ಮೇಲಿನ ಕನಿಕರದಿಂದ ಜೀವವನ್ನು ಬಿಗಿಹಿಡಿದು ರಾಜ್ಯಭಾರ ಮಾಡತೊಡಗಿದನು ಇಂದುಮತಿಯ ಚಿತ್ರಪಟಗಳನ್ನೂ, ಅವಳ ಸಾದೃಶ್ಯವಿರುವಂತೆ ಲೋಹಾದಿಗಳಿಂದ ನಿರ್ಮಿತವಾದ ಪುತ್ಥಳಿಗಳನ್ನೂ ನೋಡಿ ನೋಡಿ ಅವನು ಮನಸ್ಸನ್ನು ಸಮಾಧಾನಮಾಡಿಕೊಳ್ಳುತ್ತಿದ್ದನು ತನ್ನ ಪ್ರಿಯಳಾದ ಇಂದುಮತಿಯನ್ನು ಕ್ಷಣಭಂಗುರವಾದ ಸ್ವಪ್ನಗಳಲ್ಲಿ ಕಂಡಾಗ ಔತ್ಸುಕ್ಯದಿಂದ ಅವನು ಹರ್ಷಿಸುತ್ತಿದ್ದನು ಎಚ್ಚರವಾದಾಗ ಅವಳ ವಿಯೋಗವನ್ನು ನೆನೆದು ನೆನೆದು ಅವನು ದುಃಖಿಸುತ್ತಿದ್ದನು ಈ ರೀತಿ ಎಂಟು ವರ್ಷಗಳ ಕಾಲವನ್ನು ಅವನು ಹೇಗೋ ಅತಿಕಷ್ಟದಿಂದ ಕಳೆದನು ಇಂದುಮತಿಯ ವಿಯೋಗದಿಂದುಂಟಾದ ದುಃಖಶಲ್ಯವು ಸೌಧಾಗ್ರದಲ್ಲಿ ಹುಟ್ಟಿದ ಅರಳಿಯಮರದ ಬೇರು ಸೌಧತಲದಲ್ಲಿ ಭೇದಿಸುವಂತೆ–ಅಜನ ಹೃದಯವನ್ನು ಭೇದಿಸಿತು ಪತ್ನೀವಿಯೋಗದಿಂದುಂಟಾದ ಅವನ ಮನೋರೋಗವು ವೈದ್ಯರ ಚಿಕಿತ್ಸೆಗೆ ಅಸಾಧ್ಯವೆನಿಸಿತು ತನ್ನ ಶೋಕಶಂಕುವು ಪ್ರಾಣಾಂತಹೇತುವೆನಿಸಿದ್ದುದನ್ನು ಅರಿತೂ ಅಜನು ಹರ್ಷವನ್ನೇ ತಾಳಿದನು ಅತಿ ದುಸ್ಸಹವಾದ

ವಿರಹದುಃಖವನ್ನು ಹಗಲಿರುಳೂ ಅನುಭವಿಸುವುದಕ್ಕಿಂತಲೂ ಪರಲೋಕದ ಲ್ಲಿದ್ದ ತನ್ನ ಪ್ರಿಯೆಯ ಬಳಿಸಾರಲು ಸಹಾಯಕವಾದ ಮರಣವೇ ಲೇಸೆಂದೂ ಮತ್ತು ಮರಣವೇ ದೊಡ್ಡ ಲಾಭವೆಂದೂ ಅವನು ಭಾವಿಸಿದನು

ಅಜಚಕ್ರೇಶ್ವರನು ತನ್ನ ಶೋಕಶಲ್ಯವನ್ನೂ ಅಡಗಿಸಿಕೊಂಡು ಕರ್ತವ್ಯ ನಿಷ್ಠೆಯಿಂದ ದಶರಥನಿಗೆ ಉತ್ತಮ ಶಿಕ್ಷಣವನ್ನು ಕೊಡಿಸಿದನು ಯಥಾ ಕಾಲದಲ್ಲಿ ಯುವಕ ದಶರಥನು ವಿನೀತನೂ, ರಾಜ್ಯಭಾರ ಸಮರ್ಥನೂ, ಉಕ್ಕಿನ ಕವಚವನ್ನು ಧರಿಸಿ ಯುದ್ಧಮಾಡಲು ಶಕ್ತನೂ ಆದನು ಪ್ರಾಪ್ತ ವಯಸ್ಕನಾದ ದಶರಥನಿಗೆ ಅಜನು ಪಟ್ಟಾಭಿಷೇಕ ಮಾಡಿ ಪ್ರಜಾರಕ್ಷಣ ಕಾರ್ಯದಲ್ಲಿ ವಿಧಿವತ್ತಾಗಿ ನಿಯೋಜಿಸಿದನು ಆ ವೇಳೆಗೆ ಅವನು ಜೀವನವೇ ದುಸ್ಸಹವಾಗುವ ಮಟ್ಟಿಗೆ ರೋಗಗ್ರಸ್ತನಾಗಿದ್ದನು ಮನಸ್ಸಿಗೆ ನೆಮ್ಮದಿಯಿಲ್ಲ ದಿದ್ದ ಕಾರಣ, ಅವನ ದೇಹವೂ ನೆಟ್ಟಗಿರಲಿಲ್ಲ ಇಂದುಮತೀ ವಿಯೋಗದ ದುಃಖಾತಿರೇಕದಿಂದ ಅವನು ಆಹಾರವನ್ನು ತೊರೆದು ಪ್ರಾಯೋಪವೇಶ ಮಾಡಿ * ಜಾಹ್ನವೀ ಸರಯೂ ನದಿಗಳ ಸಂಗಮದ ಬಳಿಯ ಪವಿತ್ರ ಸ್ಥಳದಲ್ಲಿ ತನ್ನ ದೇಹತ್ಯಾಗ ಮಾಡಿದನು. ಅನಂತರ ಅವನು ದಿವ್ಯ ದೇಹವನ್ನು ಧರಿಸಿ ಮೊದಲಿಗಿಂತಲೂ ಸುಂದರಿಯಾಗಿದ್ದ ತನ್ನ ಕಾಂತೆಯೊಡನೆ ಸೇರಿ ಮಹೇಂ

---

* ಮಹಾಪಾತಕಗಳನ್ನು ಮಾಡಿದವರೂ, ಚಿಕಿತ್ಸೆಯಿಂದ ಗುಣವಾಗದ ಮಹಾ ರೋಗಗಳಿಂದ ನರಳುತ್ತಿರುವವರೂ, ಸ್ವಯಂ ದೇಹವಿನಾಶಕ್ಕಾಗಿ ಪ್ರಾಯೋಪವೇಶ ಮಾಡಿ ಆಹಾರವನ್ನು ತೊರೆದು ದೇಹತ್ಯಾಗಮಾಡಬಹುದೆಂಬುದೂ, ಇತರರಾರೂ ಹಾಗೆ ಮಾಡಕೂಡದೆಂಬುದೂ ಸ್ಮೃತಿವಾಕ್ಯಗಳು ಅಜನ ಮನೋರೋಗದ ಪರಿ ಣಾಮವಾಗಿ ಅವನ ದೇಹಸ್ಥಿತಿಯು ಕೆಟ್ಟುಹೋಗಿ ಜೀವನವೇ ದುಸ್ಸಹವಾಗುವಂ ತಿದ್ದ ಮಹಾರೋಗಕ್ಕೆ ಅವನು ಗುರಿಯಾಗಿ ಅರೀತಿ ಮಾಡಿದನು ಈ ಬಗೆಯ ಆತ್ಮಹತ್ಯವು ನಿಂದ್ಯವೇ ಅಥವಾ ಶ್ಲಾಘ್ಯವೇ ಎಂಬುದನ್ನು ನಿರ್ಧರಿಸಲಿಚ್ಛಿಸುವವರು ಜಪಾನ್ ದೇಶದಲ್ಲಿ ಆ ಕಾರ್ಯ ಮಾಡಿದವರು "ಹರಕಿರಿ"ಯಿಂದ ಆತ್ಮಹತ್ಯ ಮಾಡಿಕೊ ಳ್ಳುತ್ತಿದ್ದುದನ್ನು (ಎಂದರೆ ತಮ್ಮ ಹೊಟ್ಟೆಯನ್ನು ತಾವೇ ಕೊಯ್ದುಕೊಂಡು ಆತ್ಮ ಹತ್ಯ ಮಾಡಿಕೊಳ್ಳುತ್ತಿದ್ದುದನ್ನು) ಇಂದಿಗೂ ಪಾಶ್ಚಾತ್ಯರು ಕೂಡ ಕೊಂಡಾಡುತ್ತಿರು ವುದರ ಆಶಯವೇನೆಂಬುದನ್ನೂ ವಿಚಾರಮಾಡಬೇಕು.

ದ್ರನ ನಂದನವನದಲ್ಲಿದ್ದ ಲೀಲಾಗಾರಗಳಲ್ಲಿ ವಿಹರಿಸುತ್ತಾ ಮತ್ತೆ ಹರ್ಷವನ್ನು ತಳೆದನು †

† ಕರ್ತವ್ಯನಿಷ್ಠೆಯಿಂದ ರಣರಂಗದಲ್ಲಿ ಕಾದಿ ಮಡಿದ ವೀರರಿಗೆ ಸ್ವರ್ಗದಲ್ಲಿ ಅಪ್ಸರೆಯರು ಮೊರೆಯುತ್ತಾರೆಂಬ ಪುರಾಣಗಳ ಕಲ್ಪನೆಯನ್ನು ಕಾಲಿದಾಸನು ಹಾಸ್ಯ ಮಾಡಿರುವುದನ್ನು ಹಿಂದೆಯೇ ಸೂಚಿಸಲಾಗಿದೆ. ( ೧೦೭ ಮತ್ತು ೧೦೮ ನೆಯ ಪುಟಗಳಲ್ಲಿರುವ ಅಡಿ ಟಿಪ್ಪಣಿಯನ್ನು ನೋಡಿ ) ವಸಿಷ್ಠ ಮಹರ್ಷಿಯ ಸಂದೇಶವಾಣಿಯಲ್ಲಿ ಕೂಡ ಅಜನು ಇಂದುಮತಿಗಾಗಿ ಗೋಳಾಡಿ ದೇಹತ್ಯಾಗಮಾಡಿದರೂ_ದೇಹಧಾರಿಗಳು ಪರಲೋಕವನ್ನು ಸೇರಿದ ಮೇಲೆ ಅವರವರ ಕರ್ಮಾನುಸಾರವಾಗಿ ಭಿನ್ನಪಥವುಳ್ಳವರಾಗುವ ಕಾರಣ_ಇಂದುಮತಿಯು ಅವನಿಗೆ ದೊರೆಯಲಾರಳೆಂದು ಸೂಚಿತವಾದಂತೆ ಕಾಲಿದಾಸನು ಚಿತ್ರಿಸಿದ್ದಾನೆ ಹೀಗಿದ್ದೂ ಇಲ್ಲಿ ಅಜನು ಇಂದುಮತಿಯೊಡನೆ ಮತ್ತೆ ಸೇರಿದನೆಂದು ಬರೆದಿರುವುದು ಆಶ್ಚರ್ಯಕರವಾಗಿದೆ. ಈ ಶ್ಲೋಕವು (ಮೇಘಸಂದೇಶದ ಕಡೆಯ ಶ್ಲೋಕಗಳಂತೆ) ಪ್ರಕ್ಷಿಪ್ತವಾಗಿರಬೇಕು.

# ಒಂಬತ್ತನೆಯ ಪರಿಚ್ಛೇದ

## ಮೃಗಯಾ ವರ್ಣನ

ಸಂಯಮದಿಂದ ಜಿತೇಂದ್ರಿಯನಾದ ದಶರಥನು ತನ್ನ ತಂದೆಯ ಮರಣಾನಂತರ ಉತ್ತರ ಕೋಸಲದ ಪ್ರಜೆಗಳನ್ನು ರಕ್ಷಿಸಲುದ್ಯುಕ್ತನಾದನು ಮಹಾರಥನಾಗಿದ್ದ* ದಶರಥನು, ಸಂಯಮಿಗಳಿಂದ ರಾಜಶ್ರೇಷ್ಠರಿಗೆಲ್ಲ ಅಗ್ರಣಿಯೆನಿಸಿ, ಚಕ್ರೇಶ್ವರ ಪದವಿಯಲ್ಲಿ ವಿರಾಜಿಸಿದನು ಕ್ಷತ್ರಿಯರಿಗೆ ಶ್ರೇಷ್ಠಧರ್ಮವಾದ ಪ್ರಜಾಪರಿಪಾಲನವನ್ನು ಆತನು ವಿಚಕ್ಷಣೆಯಿಂದ ನಿರ್ವಹಿಸಿದನು ವಿಧಿವತ್ತಾಗಿಯೂ ಆತ್ಮ ಕುಲೋಚಿತವಾಗಿಯೂ ರಾಜ್ಯಭಾರ ಮಾಡುತ್ತಿದ್ದ ದಶರಥನಲ್ಲಿ ಒಟ್ಟು ಪ್ರಜಾಸಮುದಾಯವೇ ಅತ್ಯಂತ ಆಸಕ್ತಿ ಹೊಂದಿ ಪ್ರೀತಿ ತೋರಿಸಿತು ದಶರಥನು ಕುಮಾರಸ್ವಾಮಿಯಂತೆ ತೇಜಸ್ವಿಯಾಗಿ ಪ್ರಕೃತಿಮಂಡಲವನ್ನು ಪೋಷಿಸಿದನು ಶಾಂತಿಪರನಾಗಿ ಅಮರತೇಜನಾಗಿದ್ದ ದಶರಥ ಚಕ್ರವರ್ತಿಯು ರಾಜ್ಯಭಾರ ಮಾಡುತ್ತಿರುವಲ್ಲಿ, ಜನಪದಗಳಲ್ಲಿ ರೋಗಾದ್ಯುಪದ್ರವಗಳಾಗಲಿ ಶತ್ರು ಪೀಡೆಯಾಗಲಿ ಲೇಶಮಾತ್ರವೂ ತಲೆಹಾಕಲು ಅವಕಾಶವಿರಲಿಲ್ಲ ದಶರಥಸಾರ್ವಭೌಮನ ಸಾಮರ್ಥ್ಯದಿಂದ ಪ್ರಜೆಗಳೆಲ್ಲರೂ ಸುಖಸಂತೋಷ ಭರಿತರಾಗಿ ಪೃಥ್ವಿಯೇ ಫಲವತಿಯೆನಿಸುವಂತಾಯಿತು ದಶದಿಕ್ಕುಗಳನ್ನೂ ಜಯಿಸಿ ರಘುಚಕ್ರೇಶ್ವರನು ಸಂಪದಭಿವೃದ್ಧಿಮಾಡಿದ್ದನು ಅವನ ಕಾಲಾನಂತರ ಅಜನು ಅದೇ ಬಗೆಯ ಪರಾಕ್ರಮದಿಂದ ಶತ್ರುನಿಗ್ರಹ ಮಾಡಿ ರಾಜ್ಯವನ್ನು ವೃದ್ಧಿಗೊಳಿಸಿದನು ದಶರಥನು ಆಡಳಿತವನ್ನು ವಹಿಸಿದ ಮೇಲೂ ರಾಜ್ಯವು ಅದೇ ಬಗೆಯ ಕಾಂತಿಯಿಂದ ಬೆಳಗಿ ಕಳಕಳಿಸಿತು ಸಮತೆಯಿಂದ ಕೂಡಿ ನಿಷ್ಪಕ್ಷಪಾತದಿಂದ ದಶರಥನು ಪ್ರಭುತ್ವ

---

* "ಮಹಾರಥ" ಎಂದರೆ ಶಸ್ತ್ರ ಶಾಸ್ತ್ರಪ್ರವೀಣನಾಗಿ ಹತ್ತುಸಾವಿರಮಂದಿ ಯೋಧರೊಡನೆ ತಾನೊಬ್ಬನೇ ಯುದ್ಧಮಾಡಲು ಸಮರ್ಥನಾದವನೆಂದರ್ಥ. ("ಏಕೋ ದಶಸಹಸ್ರಾಣಿ ಯೋಧಯೇದ್ಯಸ್ತು ಧನ್ವಿನಾಂ । ಶಸ್ತ್ರಶಾಸ್ತ್ರಪ್ರವೀಣಶ್ಚ ಸ ಮಹಾರಥ ಉಚ್ಯತೇ ॥")

ಮಾಡುತ್ತಿದ್ದನು ಮಳೆಗರೆದು ಸಸ್ಯಸಮೃದ್ಧಿಗೆ ಕಾರಣನಾದ ವರುಣನಂತೆ ದಶರಥನು ಧನವೃಷ್ಟಿಯಿಂದ ಸಂಪದಭಿವೃದ್ಧಿಗೆ ಕಾರಣನಾಗಿದ್ದನು ದಶರಥನು ದುಷ್ಟನಿಗ್ರಹದಲ್ಲಿ ಯಮನಂತೆ ವರ್ತಿಸುತ್ತಿದ್ದನು. ತೇಜಸ್ಸಿನಲ್ಲಿ ಅವನು ಸೂರ್ಯನಂತೆ ಕಂಗೊಳಿಸುತ್ತಿದ್ದನು ಜಿತೇಂದ್ರಿಯನೂ ಮತ್ತು ಪ್ರಜಾರಂಜನ ಪರಾಯಣನೂ ಆಗಿದ್ದ ದಶರಥನಿಗೆ ಮೃಗಯಾವಿಹಾರದಲ್ಲಿ ಅಭಿರತಿಯಿರಲಿಲ್ಲ, ದ್ಯೂತದಲ್ಲಿ ಆಸಕ್ತಿಯಿರಲಿಲ್ಲ, ಬೆಳದಿಂಗಳಿನಲ್ಲಿ ಚಂದ್ರನ ಪ್ರತಿಬಿಂಬದಿಂದ ಬೆಳಗುತ್ತಿದ್ದ ಮಧುಪಾತ್ರವು ಅವನಿಗೆ ಚಿತ್ತಾಕರ್ಷಕವಾಗಿರಲಿಲ್ಲ, ನವಯೌವನೆಯಾದ ಪ್ರಿಯತಮೆಯಾವಳೂ ಅವನ ಮನಸ್ಸನ್ನು ಸೆಳಯಲಿಲ್ಲ ಪ್ರಜೆಗಳ ಅಭ್ಯುದಯ ಸಾಧನೆಗಾಗಿ ಸಂತತ ಪ್ರಯತ್ನಮಾಡುತ್ತಿದ್ದ ದಶರಥನು ಈ ಬಗೆಯ ಯಾವ ದುರ್ವ್ಯಸನಗಳಿಗೂ ವಶನಾಗದೆ ಕರ್ತವ್ಯನಿಷ್ಠೆಯಿಂದ ಶ್ರಮಿಸುತ್ತಿದ್ದನು ಆ ರೀತಿ ಕರ್ತವ್ಯನಿಷ್ಠೆಯಿಂದಲೂ ಧರ್ಮಶ್ರದ್ಧೆಯಿಂದಲೂ, ಕ್ಷಾತ್ರತೇಜಸ್ಸಿನ ಕೆಚ್ಚಿನಿಂದಲೂ ಪ್ರಭುತ್ವಮಾಡುತ್ತಿದ್ದ ದಶರಥ ಚಕ್ರೇಶ್ವರನು ಮಹೇಂದ್ರನ ಸನ್ನಿಧಿಯಲ್ಲಿ ಕೂಡ ದೀನವಾಣಿಯಿಂದ ನುಡಿಯುತ್ತಿರಲಿಲ್ಲ, ಪರಿಹಾಸಕ್ಕಾಗಿ ಮಾತನಾಡಿದಾಗ ಕೂಡ ಅಸತ್ಯವನ್ನು ನುಡಿಯುತ್ತಿರಲಿಲ್ಲ ಮೃದುಭಾಷಿಯಾದ ದಶರಥನು ಶತ್ರುಗಳಲ್ಲಿ ಕೂಡ ಪರುಷವಚನಗಳನ್ನಾಡಿ ಅವರ ಮನಸ್ಸನ್ನು ನೋಯಿಸುತ್ತಿರಲಿಲ್ಲ ವಸುಧಾಧಿಪರು ರಘೂದ್ವಹನಾದ ದಶರಥನಿಂದ ಯಥಾಯೋಗ್ಯವಾಗಿ ಹಾನಿವೃದ್ಧಿಗಳನ್ನು ಹೊಂದುತ್ತಿದ್ದರು ಆದಕಾರಣ ಅವನಲ್ಲಿ ಮೈತ್ರಿಯಿಂದಿದ್ದವರಿಗೆ ಅವನಲ್ಲಿ ದ್ವೇಷಬುದ್ಧಿಯಿಂದ ವರ್ತಿಸಿದವರಿಗೆ ಅಸ್ತ್ರಮಯವೂ ಸಿದ್ಧವಾಗಿದ್ದುವು. ಅವನ ಆಜ್ಞೆಯನ್ನು ಉಲ್ಲಂಘಿಸಿದವರಲ್ಲಿ ಅವನು ಸಹೃದಯನಾಗಿ ಮಿತ್ರನಂತೆ ವರ್ತಿಸುತ್ತಿದ್ದನು ಅವನ ಪ್ರತಿಸ್ಪರ್ಧಿಗಳಾಗಿ ಗರ್ವದಿಂದ ಸೆಡೆತು ನಿಂತವರಲ್ಲಿ, ಅವನು ಅಯೋಹೃದಯನಾಗಿ * ಕಠಿನ ಚಿತ್ತದಿಂದ ವರ್ತಿಸುತ್ತಿದ್ದನು ಈರೀತಿ ಅವನು ರಾಜರಿಗೆ ಉದಯಾಸ್ತಮಯ ಪ್ರಭುವಾಗಿ, ವಿನೀತರ ವೃದ್ಧಿಗೂ ಮತ್ತು ದುರ್ವಿನೀತರ ದುರ್ಗತಿಗೂ ಕಾರಣನಾಗಿದ್ದನು

* ಎಂದರೆ ಕಬ್ಬಿಣದ ಹೃದಯವುಳ್ಳವನಂತೆ ಕಾರ್ಯವನ್ನು ತೋರಿಸಿ

ಧನುಸ್ಸಿಗೆ ಶಿಂಜಿನಿಯನ್ನೇರಿಸಿ ವಿಜಯಯಾತ್ರೆಗಾಗಿ ಹೊರಟ ದಶರಥನು ಏಕರಥದಿಂದಲೇ ಸಮುದ್ರ ಮೇಖಲೆಯಾದ ಮೇದಿನಿಯನ್ನು ತಾನೊಬ್ಬನೇ ಜಯಿಸಿದನು ಆನೆಗಳಿಂದಲೂ, ತೀವ್ರವೇಗವುಳ್ಳ ಕುದುರೆಗಳಿಂದಲೂ ತುಂಬಿದ್ದ ಅವನ ಸೈನ್ಯವಿದ್ದುದು ಕೇವಲ ಜಯಘೋಷಮಾಡುವುದಕ್ಕಾಗಿ ಮಾತ್ರವೇ ಹೊರತು ಯುದ್ಧದಲ್ಲಿ ಅವನಿಗೆ ಸಹಾಯಮಾಡುವುದಕ್ಕಲ್ಲ ವರೂಥನೆಂಬ ರಕ್ಷಣ ಸಾಧನದಿಂದ ಕೂಡಿದ್ದ ತನ್ನ ಏಕರಥದಿಂದಲೇ ಧನುರ್ಧರನಾದ ದಶರಥನು ಅವನಿಯನ್ನು ಜಯಿಸಿ, ನಾಗರಾಂತ ವಿಜಯಿಯಾದನು ಆದಕಾರಣ, ಅವನ ಚಕ್ರಾಧಿಪತ್ಯದ ಸೀಮಾರೇಖೆಗಳಂತಿದ್ದ ಸಮುದ್ರಗಳು ಮೇಘಗಳಂತೆ ಗಂಭೀರ ಘೋಷಮಾಡುತ್ತ ಅವನ ವಿಜಯ ದುಂದುಭಿಗಳೋ-ಎಂಬಂತೆ ಮೊಳೆಯುತ್ತಿದ್ದುವು ಅವನ ಸಂಪತ್ತಾದರೋ ಕುಬೇರನ ಸಂಪತ್ತಿನಂತೆ ಅಪಾರವಾಗಿದ್ದಿತು ಹರಿತವಾದ ನೂರು ಏಣುಗಳಿಂದ ಕೂಡಿದ ವಜ್ರಾಯುಧದಿಂದ ಇಂದ್ರನು ಪರ್ವತಗಳ ಪಕ್ಷಬಲವನ್ನು ಧ್ವಂಸಮಾಡಿದನಷ್ಟೆ ಅದೇರೀತಿಯಲ್ಲಿ ಆಗತಾನೆ ಅರಳಿದ ಕೆಂದಾವರೆಯಂತೆ ಮುಖವಿದ್ದ ದಶರಥನು ತನ್ನ ಧನುಸ್ಸಿನಿಂದ ಶರವೃಷ್ಟಿಯನ್ನು ಕರೆದು ತನ್ನ ಶತ್ರುಗಳನ್ನೂ ಅವರ ಸಹಾಯಕ್ಕೆ ಬಂದವರನ್ನೂ ನಾಶಮಾಡಿದನು ಮಹೇಂದ್ರನಿಗೆ ದೇವತೆಗಳು ನಮಸ್ಕರಿಸುತ್ತಿದ್ದಂತೆ ಶರಣಾಗತರಾದ ನೂರಾರುಮಂದಿ ರಾಜರೂ ಮತ್ತು ಸಾಮಂತರಾಜರೂ ದಶರಥನಿಗೆ ನಮಸ್ಕಾರ ಮಾಡುತ್ತಿದ್ದರು ಅಖಂಡಿತ ಪೌರುಷನಾದ ದಶರಥನ ಕಾಲುಗುರುಗಳ ಕಾಂತಿಯು ಅವರ ಕಿರೀಟ ರತ್ನಗಳ ಕಾಂತಿಯಿಂದ ಮತ್ತಷ್ಟು ಹೆಚ್ಚಾಗುತ್ತಿದ್ದಿತು ಶತ್ರುರಾಜರನ್ನು ಕೊಂದಮೇಲೆ ಅವರ ಪತ್ನಿಯರನ್ನೂ, ಸಚಿವರ ಸೂಚನೆಯಂತೆ ಅಂಜಲಿಬದ್ಧರಾಗಿ ಶರಣಾಗತರಾದ ಶತ್ರುರಾಜಪುತ್ರರನ್ನೂ ಕಂಡು ದಶರಥನು ಅನುಕಂಪಪಡುತ್ತಿದ್ದನು ದಶರಥನು ಕುಬೇರನ ಅಲಕಾವತೀ ನಗರದಂತೆ ಶೋಭಿಸುತ್ತಿದ್ದ ತನ್ನ ರಾಜಧಾನಿಯಾದ ಅಯೋಧ್ಯೆಗೆ ಸಮುದ್ರತೀರದಿಂದ ಹಿಂತಿರುಗಿದನು ದಶರಥನು ರಾಜಮಂಡಲವನ್ನು ಸ್ವಾಧೀನಪಡಿಸಿಕೊಂಡು ಚಕ್ರೇಶ್ವರನಾಗಿ ಏಕಚಕ್ರಾಧಿಪತ್ಯವನ್ನು ಪಡೆದು ಅನಲನಂತೆ

ತೇಜಸ್ವಿಯಾಗಿಯೂ ಸೋಮನಂತೆ ಕಾಂತಿಯುತನಾಗಿಯೂ ಶೋಭಿಸಿದನು ಆದರೂ ರಾಜ್ಯಲಕ್ಷ್ಮಿಯು ಚಂಚಲೆಯೆಂಬುದನ್ನು ಮರೆಯದೆ, ಅಜೇಯ ನಾಗಿರಲು ದಶರಥನು ನಿರಂತರವೂ ಜಾಗರೂಕತೆಯಿಂದ ವರ್ತಿಸುತ್ತಿದ್ದನು ಕೋಸಲೇಶ್ವರ ಪುತ್ರಿಯಾದ ಕೌಸಲ್ಯಾದೇವಿಯೂ, ಮಗಧರಾಜಪುತ್ರಿಯಾದ ಸುಮಿತ್ರಾದೇವಿಯೂ, ಕೇಕಯ ರಾಜಪುತ್ರಿಯಾದ ಕೈಕಾದೇವಿಯೂ ಅವನ ಪತ್ನಿಯರು, ಶತ್ರುನಿಗ್ರಹ ಮಾಡಿದ ಪರಾಕ್ರಮಿಯಾದ ದಶರಥನನ್ನು ವಿವಾಹ ಮಾಡಿಕೊಂಡ ಆ ಮೂವರೂ ಪತಿದೇವತೆಯರಾಗಿ ಒಪ್ಪುತ್ತಿದ್ದರು ನದಿಗಳು ಸಾಗರವನ್ನು ಸೇರಿ ಶೋಭಿಸುವಂತೆ ಪತಿವ್ರತೆಯರಾದ ಅವರು ಮೂವರೂ ದಶರಥಚಕ್ರೇಶ್ವರನ ಮಡದಿಯರಾಗಿ ಶೋಭಿಸಿದರು ಶತ್ರು ಗಳನ್ನು ನಿಗ್ರಹಿಸುವ ಉಪಾಯಗಳಲ್ಲಿ ವಿಚಕ್ಷಣನಾಗಿದ್ದ ದಶರಥನು ತನ್ನ ಪ್ರಿಯತಮೆಯರಾದ ಮೂವರು ಪತ್ನಿಯರೊಡನೆ-ಮಾನವನ ಮೇಲೆ ಪ್ರಭುತ್ವ ಮಾಡಲಿಚ್ಛಿಸಿ ಪ್ರಭುಶಕ್ತಿ, ಮಂತ್ರಶಕ್ತಿ, ಮತ್ತು ಉತ್ಸಾಹಶಕ್ತಿ ಗಳೆಂಬ ಶಕ್ತಿತ್ರಯಸಮೇತನಾಗಿ ಭೂಲೋಕದಲ್ಲಿ ಅವತರಿಸಿದ —ಮಹೇಂದ್ರ ನಂತೆ ಶೋಭಿಸುತ್ತಿದ್ದನು ಮಹಾರಥನಾದ ದಶರಥನು ಇಂದ್ರನ ಸಹಾಯ ಕ್ಕಾಗಿ ರಣಮುಖದಲ್ಲಿ ರಾಕ್ಷಸರೊಡನೆ ಪರಾಕ್ರಮದಿಂದ ಯುದ್ಧ ಮಾಡಿದನು ಅವನ ಬಾಣಪ್ರಯೋಗ ಚಾತುರ್ಯದ ದೆಸೆಯಿಂದ ಸುರವನಿತೆಯರಿಗೆ ಭಯ ನಿವಾರಣೆಯಾಯಿತು ಅವರೆಲ್ಲರೂ ಅವನ ಭುಜಬಲವನ್ನು ಕೊಂಡಾಡಿದರು

ಅನಂತರ ಅವನು ತನ್ನ ರತ್ನಕಿರೀಟವನ್ನು ತೆಗೆದಿಟ್ಟು ಯಜ್ಞದೀಕ್ಷೆ ಯನ್ನು ವಹಿಸಿದನು ತಾನು ಜಯಿಸಿ ತಂದಿದ್ದ ಸಂಪತ್ತನ್ನು ಪ್ರಜೆಗಳ ಅಭ್ಯುದಯ ಸಾಧನೆಗೂ ಯಜ್ಞಕ್ಕೂ ವೆಚ್ಚ ಮಾಡಲುದ್ಯುಕ್ತನಾದನು ತಮಸಾ ಮತ್ತು ಸರಯೂ ನದಿಗಳ ಮಧ್ಯದಲ್ಲಿ ಕನಕ ನಿರ್ಮಿತವಾದ ಯೂಪ ಸ್ತಂಭದಿಂದ ಬೆಳಗುವ ವಿಶಾಲವಾದ ಯಜ್ಞಶಾಲೆಯು ನಿರ್ಮಿತವಾಯಿತು ಅಷ್ಟಮೂರ್ತಿಯಾದ ಈಶ್ವರನಂತೆಯೇ ಯಜ್ಞದೀಕ್ಷಿತ ದಶರಥನೂ ಕೃಷ್ಣಾ ಜಿನವನ್ನೂ, ಔದುಂಬರ ದಂಡವನ್ನೂ ಮತ್ತು ಕುಶಮೇಖಲೆಯನ್ನೂ ಧರಿಸಿ, ಕೃಷ್ಣಮೃಗ ಶೃಂಗವನ್ನು ಕೈಯಲ್ಲಿ ಹಿಡಿದು, ಸಂಯಮಶಾಲಿಯಾದ ಮಿತ

ಭಾಷಿಯಾದನು ಯಜ್ಞದೀಕ್ಷೆಯನ್ನು ವಹಿಸಿದ್ದ ಅವನ ದೇಹದಲ್ಲಿ ಅಷ್ಟ ಮೂರ್ತಿ ಶಂಕರನು ಯಜ್ಞವು ಪೂರೈಸುವವರೆಗೂ ತಾತ್ಕಾಲಿಕವಾಗಿ ನೆಲಸಿದನು ಯಜ್ಞವು ಪೂರೈಸಿದ ಮೇಲೆ ಅವಭೃತ ಸ್ನಾನದಿಂದ ಶುದ್ಧನೂ ಜಿತೇಂದ್ರಿಯನೂ ಆದ ದಶರಥನು ದೇವಸಭೆಯಲ್ಲಿ ಮಂಡಿಸಲು ಅರ್ಹನಾಗಿದ್ದನು. ಮಹೋನ್ನತನಾಗಿ ತಲೆಯೆತ್ತಿ ನಿಂತಿದ್ದ ದಶರಥನು ನಮಿಸಿದುದು ನಮುಚಿಶತ್ರುವಾದ ಮಹೇಂದ್ರನಿಗೆ ಮಾತ್ರವೇ ಧನುರ್ಧಾರಿಯಾದ ಅದ್ವಿತೀಯರಥ ದಶರಥನು ಇಂದ್ರನಿಗೂ ಮುಂದಾಗಿ ಯುದ್ಧರಂಗದಲ್ಲಿ ರಾಕ್ಷಸರನ್ನೆದುರಿಸಿ ಯುದ್ಧ ಮಾಡಿದನು ಆಗ ಸೂರ್ಯಮಂಡಲದ ಕಡೆಗೆ ಮೇಲಕ್ಕೇಳುತ್ತಿದ್ದ ಕೆಂಧೂಳಿನ ಗತಿಯು ಸುರದ್ವೇಷಿಗಳಾದ ರಾಕ್ಷಸರ ರಕ್ತ ಪಾತದಿಂದ ನಿವಾರಿಸಲ್ಪಡುತ್ತಿದ್ದಿತು ದಶರಥನು ಯಮ ವರುಣ ಕುಬೇರ ಮಹೇಂದ್ರರಿಗೆ ಸಮಾನನೆನಿಸುವ ಮಟ್ಟಿಗೆ ದುಷ್ಟನಿಗ್ರಹ ದುರಂಧರನಾಗಿದ್ದ ಏಕೈಕ ನರಾಧಿಪನಾಗಿ ಸಮಸ್ತರ ಆದರ ಗೌರವಗಳಿಗೂ ಪಾತ್ರನಾಗಿದ್ದನು

ಹಾಗೆ ಶೋಭಿಸುತ್ತಿದ್ದ ಮಹಾರಥನಾದ ದಶರಥನನ್ನು ನಮಿಸುವುದಕ್ಕೋ-ಎಂಬಂತೆ ನವಕುಸುಮಗಳೊಡನೆ ಮತ್ತೆ ವಸಂತಾಗಮನವು ರಂಜಿಸಿತು ಸೂರ್ಯನ ಗತಿಯು ಉತ್ತರಾಭಿಮುಖವಾಯಿತು ಪ್ರಾತಃ ಕಾಲಗಳು ಹಿಮರಹಿತವೆನಿಸಿ ಪ್ರಕಾಶಮಾನವಾಗಿ ಬೆಳಗುತ್ತಿದ್ದುವು ತರು ಗುಲ್ಮಲತೆಗಳಲ್ಲಿ ಪುಷ್ಪಗಳೂ ಪಲ್ಲವಗಳೂ ಶೋಭಿಸತೊಡಗಿದುವು ದುಂಬಿಗಳ ಝೇಂಕಾರವೂ, ಕೋಗಿಲೆಗಳ ಕೂಜಿತವೂ ಪ್ರಾರಂಭವಾದುವು ಗಿಡ ಮರಗಳಿಂದ ತುಂಬಿದ ವನಸ್ಥಲಗಳಲ್ಲಿ ಈ ರೀತಿಯಲ್ಲಿ ಯಥಾಕ್ರಮವಾಗಿ ಮಧುಮಾಸವು ಆವಿರ್ಭವಿಸಿತು ಶೌರ್ಯೌದಾರ್ಯಾದಿ ಸದ್ಗುಣಗಳಿಂದ ಕೂಡಿದ ರಾಜನನ್ನು ಉಪಕಾರಾರ್ಥಿಗಳು ಮುತ್ತುವಂತೆ, ದುಂಬಿಗಳೂ ಮತ್ತು ಹಂಸಾದಿ ಜಲಪಕ್ಷಿಗಳೂ ಸರೋವರಗಳಲ್ಲಿ ಮಧುಪುಷ್ಪವಾದ ಕಮಲ

* "ರಿಕ್ತಹಸ್ತೇನ ನೋಪೇಯಾದ್ರಾಜಾನಂ ದೇವತಾಂ ಗುರುಮ್" ಎಂಬ ಆರ್ಯೋಕ್ತಿಯಂತೆ ರಾಜನನ್ನು ಕಾಣಲು ಬರಿಗೈಯಲ್ಲಿ ಬರುವಂತಿಲ್ಲ ಆದಕಾರಣ ವಸಂತನು ಕುಸುಮಗಳೊಡನೆ ಬಂದಂತೆ ಕವಿಯು ವರ್ಣಿಸಿದ್ದಾನೆ

ಗಳನ್ನಾಶ್ರಯಿಸಿದುವು ವಸಂತಕಾಲದಲ್ಲಿ ಕಂಗೊಳಿಸುತ್ತಿದ್ದ ಅಶೋಕ ಪುಷ್ಪಗಳು ಮಾತ್ರವೇ ವಿಲಾಸಿಗಳಿಗೆ ಸ್ಮರದೀಪನ ಸಾಧನಗಳಾಗಿರಲಿಲ್ಲ ಅವರ ಪ್ರೇಯಸಿಯರ ಕರ್ಣಾಭರಣಗಳಾಗಿದ್ದ ಕಿಸಲಯುಗಳೂ ಮೋಹಕ ಸಾಮಗ್ರಿಗಳಾಗಿ ಪರಿಣಮಿಸಿದುವು ಉಪವನಶ್ರೀಮೂರ್ತಿಯ ಕೆನ್ನೆಗಳ ಮೇಲೆ ವಸಂತನು ಚಿತ್ರಿಸಿದ ಅಭಿನವ ಮಕರಿಕಾಪತ್ರಗಳೋ-ಎಂಬಂತೆ ಕುರು ಬಕ ಪುಷ್ಪಗಳು ಶೋಭಿಸುತ್ತಿದ್ದವು ಮಧುದಾನ ವಿಶಾರದಗಳಾದ ಕುರುಬಕ ಪುಷ್ಪಗಳು ಮಧುಪಾನದ ಆಕಾಂಕ್ಷೆಯುಳ್ಳ ದುಂಬಗಳಿಗೆ ಆಶ್ರಯಕೊಟ್ಟು-ದಾನಶೌಂಡರು ಅರ್ಥಿಜನರ ಸ್ತೋತ್ರಕ್ಕೆ ಕಾರಣರಾಗುವಂತೆ-ದುಂಬಿಗಳ ಝೇಂಕಾರ ರವಕ್ಕೆ ಕಾರಣವಾಗಿ ಕಂಗೊಳಿಸುತ್ತಿದ್ದುವು ಬಕುಳ ವೃಕ್ಷಗಳ ಸುಂದರಿಯರ ಮಧುಮಯವಾದ ಗಂಡೂಷಗಳ ರೂಪದ ದೋಹ ದಿಂದ ವೃದ್ಧಿಹೊಂದಿ ಮಧುಮಯವಾದ ಪುಷ್ಪಗಳನ್ನು ಬಿಡುವ ತಮ್ಮ ಸಹಜ ಗುಣಕ್ಕನುಸಾರವಾದ ಕುಸುಮೋದ್ಗಮದಿಂದ ಶೋಭಿಸಿದುವು † ಶಿಶಿರ ಋತುವು ಕಳೆದ ಮೇಲೆ ವಸಂತ ರುಚಿಯಿಂದ ಕಿಂಶುಕವೃಕ್ಷಗಳ ತುಂಬ ಮುಕುಲ ಜಾಲಗಳು* ಶೋಭಿಸಿದುವು ಪ್ರಾತಃಕಾಲಗಳಲ್ಲಿ

† ಪ್ರಿಯಂಗುಗಳು ಸ್ತ್ರೀಯರ ಸ್ಪರ್ಶದಿಂದಲೂ, ಬಕುಳವೃಕ್ಷಗಳು ಸ್ತ್ರೀಯರ ಮಧುಗಂಡೂಷಗಳಿಂದಲೂ (ಎಂದರೆ ಅವರು ಬಾಯಿಮುಕ್ಕಳಿಸಿ ಉಗುಳಿದ ಮಧು ವಿನಿಂದಲೂ), ಅಶೋಕವೃಕ್ಷಗಳು ಸ್ತ್ರೀಯರ ಪಾದಾಘಾತದಿಂದಲೂ, ತಿಲಕವೃಕ್ಷ ಗಳು ಸ್ತ್ರೀಯರ ವೀಕ್ಷಣದಿಂದಲೂ, ಕುರಬಕವೃಕ್ಷಗಳು ಸ್ತ್ರೀಯರ ಆಲಿಂಗನದಿಂ ದಲೂ, ಮಂದಾರವೃಕ್ಷಗಳು ಸ್ತ್ರೀಯರ ನರ್ಮವಾಕ್ಯಗಳಿಂದಲೂ, ಚಂಪಕವೃಕ್ಷ ಗಳು ಸ್ತ್ರೀಯರ ಮಂದಹಾಸದಿಂದಲೂ, ಚೂತವೃಕ್ಷಗಳು ಸ್ತ್ರೀಯರ ವಕ್ತ್ರಗಳ ಮೇಲಿನ ಗಾಳಿಯಿಂದಲೂ, ನಮೇರುವೃಕ್ಷಗಳು ಸ್ತ್ರೀಯರ ಗೀತಗಳಿಂದಲೂ, ಕರ್ಣಿಕಾರವೃಕ್ಷಗಳು ಸ್ತ್ರೀಯರ ನರ್ತನದಿಂದಲೂ ದೋಹದ ಹೊಂದಿ ಪುಷ್ಪಸಮೃ ದ್ಧಿಯನ್ನು ಪಡೆಯುತ್ತವೆಂಬುದು ಕವಿ ಸಮಯ ಕಾಲಿದಾಸನು ಈ ಕವಿಸಮ ಯದ ಜೊತೆಗೆ ವೃಕ್ಷಗಳು ಸಹಜಗುಣಾನುಸಾರವಾಗಿ ಕುಸುಮೋದ್ಗಮವನ್ನು ಪಡೆಯುವೆಂದು ಹೇಳಿದ್ದಾನೆ

* ಮೊಗ್ಗುಗಳ ಗೊಂಚಲುಗಳು ಅಥವಾ ಸಮೂಹಗಳು

ಹಿಮವನ್ನು ಪೂರ್ತಿಯಾಗಿ ನಾಶಮಾಡಲು ರವಿಯು ಇನ್ನೂ ಸಮರ್ಥನಾಗಿ ರಲಿಲ್ಲ. ಮೊಗ್ಗುಗಳಿಂದ ತುಂಬಿ ಮಲಯ ಮಾರುತದಿಂದ ಚಿಗುರುಗಳು ಕಂಪಿಸುತ್ತಿದ್ದ ಎಳೆಯ ಸಹಕಾರ ಲತೆಯು ನರ್ತನವನ್ನು ಕಲಿಯಲು ಅಭ್ಯಾಸಮಾಡುತ್ತಿದ್ದಂತೆ ಕಂಗೊಳಿಸಿತು ಹಾಗೆ ಕಂಗೊಳಿಸುತ್ತಿದ್ದ ಸಹಕಾರ ಲತೆಯು ರಾಗದ್ವೇಷಗಳನ್ನು ಜಯಿಸಿದ ವಿರಕ್ತರ ಮನಸ್ಸಿಗೂ ಆಸಕ್ತಿಯನ್ನುಂಟುಮಾಡಿ ಮುಗ್ಧಗೊಳಿಸುವಂತಿದ್ದಿತು ಕುಸುಮಿತವಾಗಿ ಸುಗಂಧದಿಂದ ತುಂಬಿದ್ದ ವನರಾಜಿಗಳಲ್ಲಿ ವಸಂತಕಾಲದ ಪ್ರಾರಂಭದಲ್ಲಿ ಪ್ರಥಮತಃ ಕೇಳಿ ಬರುತ್ತಿದ್ದ ಕೋಗಿಲೆಗಳ ಪರಿಮಿತವಾದ ಕೂಜಿತಗಳು–ಮುಗ್ಧ ವಧುಗಳ ಪರಿಮಿತವಾದ ನುಡಿಗಳಂತೆ – ತೋರುತ್ತಿದ್ದುವು ಶ್ರುತಿಸುಖವನ್ನುಂಟುಮಾಡುತ್ತಿದ್ದ ಭ್ರಮರ ಸ್ವನರೂಪದ ಗೀತಗಳಿಂದಲೂ, ಕುಸುಮಗಳ ರೂಪದ ಕೋಮಲ ದಂತಕಾಂತಿಯಿಂದಲೂ, ಮಂದ ಮಾರುತ ಕಂಪಿತವಾದ ಚಿಗುರುಗಳ ರೂಪದ ಕೈಗಳಿಂದಲೂ ಕೂಡಿ ಉದ್ಯಾನಗಳ ಅಂಚಿನಲ್ಲಿ ಬಳುಕುತ್ತಿದ್ದ ಲತೆಗಳು ಮುಗುಳುನಗೆಯಿಂದ ಗಾನಮಾಡುತ್ತಲೂ, ಅಂಗೈಗಳನ್ನಲುಗಿಸಿ ಲಯಗತಿಯನ್ನು ತೋರಿಸುತ್ತಲೂ ನರ್ತಿಸುವ ನರ್ತಕಿಯರನ್ನು ಹೋಲುತ್ತಿದ್ದುವು ಅಂಗನೆಯರು ಒಕುಳಪುಷ್ಪ ಕೇಸರಗಳ ಸುವಾಸನೆಯನ್ನು ಮೀರಿಸುವ ಮಟ್ಟಿನ ಸುಗಂಧದಿಂದ ಕೂಡಿ ಮದನ ಸಖನೆಂದು ತೋರುತ್ತಿದ್ದ ಆಸವವನ್ನು ಪಾನಮಾಡುತ್ತಿದ್ದರು, ಆದರೂ ತಮ್ಮ ಪ್ರಿಯರೊಡನೆ ಅನುರಾಗ ಭಂಗವಾಗುವಂತೆ ತಮಗೆ ಮತ್ತುಬರುವ ಮಟ್ಟಿಗೆ ಮಾತ್ರ ಅವರು ಮಧುಪಾನ ಮಾಡುತ್ತಿರಲಿಲ್ಲ ವಾಸಗೃಹಗಳ ಉ[illegible]ದ್ದ ಸರೋವರಗಳಲ್ಲಿ ಅರಳಿದ ಕಮಲಗಳಿದ್ದುವು ಆ ಕಮಲಗಳ ಕಡೆಗೆ ಹೋಗುತ್ತಿದ್ದ ಹಂಸಾದಿ ಜಲಪಕ್ಷಿಗಳು ಅವ್ಯಕ್ತಮಧುರವಾಗಿ ಧ್ವನಿಗೈಯುತ್ತಿದ್ದುವು ಅರಳಿದ ಕಮಲಗಳಿಂದಲೂ, ಆ ಅವ್ಯಕ್ತ ಮಧುರ ಸ್ವನಗಳಿಂದಲೂ ಕೂಡಿದ ಆ ಸರೋವರಗಳು, ಸಡಲಿದ ಮೇಖಲೆಯ ಶಿಂಜಿತ ಧ್ವನಿಯಿಂದ ಕೂಡಿ ಮಂದಹಾಸದಿಂದ ಬೆಳಗುತ್ತಿದ್ದ ಚಾರುವದನೆಯರಾದ ಸ್ತ್ರೀಯರನ್ನು ಹೋಲುತ್ತಿದ್ದುವು ಉತ್ತರಾಯನದಲ್ಲಿ (ವಸಂತಕಾಲದಲ್ಲಿ) ರಾತ್ರಿಯ ಅವಧಿಯು ಕಡ

ಮೆಯಾಗಿರುತ್ತದೆ. ಆದಕಾರಣ, ಮಧುಖಂಡಿತೆಯಾದ ರಜನೀವಧುವು ಚಂದ್ರೋದಯದಿಂದ ಪೇಲವವಾದ ಮುಖಕಾಂತಿಯುಳ್ಳವಳಾದಳು ಹಿಮವಿಲ್ಲದ ರಾತ್ರಿಯಲ್ಲಿ ಚಂದ್ರನು ವಿಮಲಕಾಂತಿಗಳುಳ್ಳವನಾಗಿ ಮಕರಧ್ವಜನಾದ ಕುಸುಮಾಯುಧನಿಗೆ ಸಹಾಯಕನಾದನು ಆಜ್ಯಾದಿ ಹೋಮಸಾಮಗ್ರಿಗಳಿಂದ ಪ್ರಜ್ವಲಿತವಾದ ಅಗ್ನಿಯಂತೆ ಪ್ರಭೆಯುಳ್ಳ ಕರ್ಣಿಕಾರ ಪುಷ್ಪಗಳು ಕೋಮಲವಾದ ದಲಕೇಸರಿಗಳಿಂದ ಕೂಡಿ ವನಸಿರಿಯ ಕನಕಾಭರಣಗಳಂತೆ ರಾಜಿಸುತ್ತಿದ್ದುವು ತಮ್ಮ ಪ್ರಿಯರು ಪ್ರೀತಿಯಿಂದ ತಂದು ಕೊಟ್ಟ ಕರ್ಣಿಕಾರ ಪುಷ್ಪಗಳನ್ನು ಯುವತಿಯರು ತಮ್ಮ ಮುಂಗುರುಳುಗಳಲ್ಲಿ ಧರಿಸಿ ಹರ್ಷಿಸುತ್ತಿದ್ದರು ಕಾಡಿಗೆಯ ಬಂಧುಗಳಂತೆ ಮನೋಹರಗಳಾಗಿದ್ದ ದುಂಬಿಗಳು ತಿಲಕಪುಷ್ಪ ಪಂಕ್ತಿಗಳಿಗೆರಗಿ ಸಾಲುಸಾಲಾಗಿ ಕುಳಿತು ಪ್ರಮದೆಯರ ತಿಲಕಗಳಂತೆ ವನಸ್ಥಲದಲ್ಲಿ ಶೋಭಿಸುತ್ತಿದ್ದುವು ವೃಕ್ಷವನ್ನಾಶ್ರಯಿಸಿ ಮಧುಗಂಧವಿಂದಲೂ ಕಿಸಲಯಾಧರದಿಂದಲೂ, ಅರಳಿದ ಹೂಗಳ ರೂಪದ ಮಂದಸ್ಮಿತದಿಂದಲೂ ಕೂಡಿದ್ದ ನವಮಲ್ಲಿಕಾ ಲತೆಯು ಸುಂದರಿಯಾದ ವಿಲಾಸಿನಿಯಂತೆ ಕಂಗೊಳಿಸುತ್ತಿದ್ದಿತು ಅದನ್ನು ಕಂಡು ನೋಟಕರು ಮೋದಗೊಳ್ಳುತ್ತಿದ್ದರು ತಿಲಕ ಪುಷ್ಪಮಂಜರಿಗಳಲ್ಲಿ ಕರಿಯ ದುಂಬಿಗಳ ಕದಂಬಗಳು ಶೋಭಿಸುತ್ತಿದ್ದುವು ಶುಭ್ರವಾದ ರಜದಿಂದ ಪರಿಪುಷ್ಟವಾದ ಅವಯವಗಳುಳ್ಳವಾಗಿ ದುಂಬಿಗಳ ಸಮೂಹದಿಂದ ಆವೃತವಾಗಿದ್ದ ತಿಲಕಪುಷ್ಪ ಮಂಜರಿಗಳು ಜಾಲಕಗಳೆಂಬ ಅಲಕಾಭರಣಗಳ ಮುತ್ತುಗಳಂತೆ ಕಂಗೊಳಿಸುತ್ತಿದ್ದುವು, ಮಂದಾನಿಲದಿಂದ ಉದ್ಧೃತವಾಗಿ ಪಸರಿಸಿದ್ದ ಕುಸುಮ ಕೇಸರ ರೇಣುಗಳ ಪರವು ಮನ್ಮಥನ ಧ್ವಜಪಟದಂತೆಯೂ, ವಸಂತ ಲಕ್ಷ್ಮಿಯ ಮುಖಚೂರ್ಣದಂತೆಯೂ ' ಶೋಭಿಸಿತು ದುಂಬಿಗಳು ಆ ಕುಸುಮಕೇಸರ ರೇಣುಗಳನ್ನು ಹಿಂಬಾಲಿಸುತ್ತಿದ್ದುವು ಅಬಲೆಯರು ಉದ್ಯಾನ

ಕಾಲಿದಾಸನ ಕಾಲದಲ್ಲಿ ಸ್ತ್ರೀಯರು ಲೋಧ್ರ ಪುಷ್ಪ ರಜ ಮುಂತಾದವುಗಳಿಂದ ರಚಿತವಾದ ಮುಖಚೂರ್ಣದಿಂದ ಅಲಂಕಾರಮಾಡಿಕೊಳ್ಳುತ್ತಿದ್ದರು ಇದನ್ನು ಹಿಂದೆಯೇ ಹೇಳಲಾಗಿದೆ.

ಗಳಲ್ಲಿ ಉಯ್ಯಾಲೆಗಳನ್ನು ಕಟ್ಟಿ ತೂಗಿಕೊಳ್ಳುತ್ತ ವಸಂತಮಹೋತ್ಸವ ಸುಖವನ್ನನುಭವಿಸಿದರು ಅವರಲ್ಲಿ ಕೆಲಕೆಲವರು ಉಯ್ಯಾಲೆಯಾಡುವುದರಲ್ಲಿ ಚತುರೆಯರಾಗಿದ್ದೂ ಹಗ್ಗದಿಂದ ಕೈಜಾರಿದಂತೆಯೂ ಕೆಲಕ್ಕುರುಳುವ ಶಂಕೆಯಿಂದ ಭಯಪಟ್ಟಂತೆಯೂ ನಟಿಸಿ ತಮ್ಮತಮ್ಮ ಬಳಿಯಲ್ಲಿ ಉಯ್ಯಾಲೆಯ ಮೇಲೆ ಕುಳಿತಿದ್ದ ತಮ್ಮತಮ್ಮ ಪತಿಯ ಕಂಠವನ್ನು ತೋಳಿನಿಂದ ಬಳಸುತ್ತಿದ್ದರು ಕೋಗಿಲೆಗಳು ಕೂಗುತ್ತಿದ್ದುವು ಅದನ್ನು ಕೇಳಿ ಆ ಕೋಗಿಲೆಗಳು "ಎಲೈ ಮಾನಿನಿಯರೇ! ರೋಷವನ್ನು ತ್ಯಜಿಸಿ, ನಿಮ್ಮ ಪ್ರಿಯನೊಡನೆ ಕಲಹವಾಡುವುದನ್ನು ನಿಲ್ಲಿಸಿ, ಸುಖಕಾಲವಾದ ಯೌವನವು ಒಮ್ಮೆ ಕಳೆದುಹೋದ ಮೇಲೆ ಮತ್ತೆ ಹಿಂತಿರುಗದು" ಎಂಬ ಮನ್ಮಥ ಸಂದೇಶವನ್ನು ತಮಗೆ ತಿಳಿಯಹೇಳುತ್ತಿದ್ದಂತೆ ಭಾವಿಸಿ, ಅವರೆಲ್ಲರೂ ವನವಿಹಾರ ಸುಖವನ್ನನುಭವಿಸಿ ಆನಂದಿಸಿದರು

ವಿಲಾಸವತೀ ಸಖನೂ † (ಎಂದರೆ ಸ್ತ್ರೀ ಸಹಚರನೂ) ಮತ್ತು ಮನ್ಮಥ ಸನ್ನಿಭನೂ ಆಗಿದ್ದ ದಶರಥ ನರಪತಿಯು ವನವಿಹಾರ ಮಾಡಿ ವಸಂತೋತ್ಸವವನ್ನು ಯಥಾಸುಖವಾಗಿ ಅನುಭವಿಸಿದನು ಆ ಬಳಿಕ ಅವನಿಗೆ ಮೃಗಯಾ ವಿಹಾರದ ಮೇಲೆ ಆಕಾಂಕ್ಷೆಯುಂಟಾಯಿತು ಬೇಟೆಯಾಡುವುದರಿಂದ, ಓಡುತ್ತಿರುವ ಪ್ರಾಣಿಗಳಿಗೆ ಗುರಿಯಿಟ್ಟು ಬಾಣಪ್ರಯೋಗ ಮಾಡಿ ಅವುಗಳನ್ನು ಕೆಳಕ್ಕುರುಳಿಸುವುದು ಅಭ್ಯಾಸವಾಗಿ ಕೈ ಚಳಕವು ವೃದ್ಧಿಯಾಗುವುದನ್ನೂ ದಶರಥನು ಆಲೋಚಿಸಿದನು ಅಲ್ಲದೆ ಭಯಪಟ್ಟ ಮತ್ತು ರೋಷಗೊಂಡ ಕಾಡುಮೃಗಗಳ ಚೇಷ್ಟಿತಗಳು ಹೇಗಿರುವುವೆಂಬುದು ಮನದಟ್ಟಾಗುವು

* ವಸಂತರುತುವಿನ ಈ ವರ್ಣನೆಯು ಮನೋಹರವಾಗಿದೆ, ಕಾಳಿದಾಸನದು ಅಸೀಮ ವರ್ಣನಾಸಾಮರ್ಥ್ಯ

† ದಶರಥನ ಮೂವರು ಪತ್ನಿಯರೂ ರಾಜಕುಮಾರಿಯರಾಗಿ ಸುಶಿಕ್ಷಿತರಾಗಿದ್ದವರು, ವಿಲಾಸವತಿಯರು ಆದರೆ ಈ ಸಂದರ್ಭದಲ್ಲಿ ದಶರಥನ ವನವಿಹಾರ ಕಾಲದಲ್ಲಿ ಬಹುಶಃ ಕೈಕೇಯಿಯನ್ನು ಅವನು ತನ್ನೊಡನೆ ಕರೆದುಕೊಂಡು ಹೋಗಿರಬೇಕು

ದೆನ್ನೂ, ಶ್ರಮಸಹಿಷ್ಣುತೆಯು ವೃದ್ಧಿಹೊಂದಿ ದೇಹಲಾಘವ ಮುಂತಾದ ಗುಣಗಳು ಅಧಿಕವಾಗುವುದನ್ನೂ ಅವನು ಗಮನಿಸಿದನು ಅದಕ್ಕಾಗಿ ಮಾತ್ರವೇ ಮೃಗಯಾ ವಿಹಾರಕ್ಕೆ ಹೋಗಿ ಬರಲು ದಶರಥನು ಸಚಿವರ ಅನುಮತಿಯನ್ನು ಪಡೆದು ಕಾಡಿಗೆ ಹೊರಡಲನುವಾದನು ಅಷ್ಟೇ ಹೊರತು, ಒಂದು ದುರ್ವ್ಯಸನದ ರೂಪದಲ್ಲಿ—ಎಂದರೆ ಒಂದು ಚಟದ ರೂಪದಲ್ಲಿ ಬೇಟೆಗೆ ಹೋಗಲು ಅವನು ಅಪೇಕ್ಷಿಸಲಿಲ್ಲ ಕಾಡುಮೃಗಗಳಿಂದ ತುಂಬಿದ ಅರಣ್ಯಕ್ಕೆ ತಕ್ಕ ವೇಷವನ್ನು ಧರಿಸಿ, ತನ್ನ ದಪ್ಪ ಕೊರಳಿನಿಂದ ಪಾರ್ಶ್ವದಲ್ಲಿ ತೂಗಾಡುವಂತೆ ಧನುಸ್ಸನ್ನು ಧರಿಸಿ ಕುದುರೆಯನ್ನೇರಿ ಅವನು ಬೇಟೆಗೆ ಹೊರಟನು ರಾಜಮಂಡಲದಲ್ಲಿ ಸೂರ್ಯನಂತಿದ್ದ ದಶರಥನ ಕುದುರೆಯ ಗೊರಸುಗಳಿಂದಲೂ ಮತ್ತು ಅವನೊಡನೆ ಬೇಟೆಗೆ ಹೊರಟಿದ್ದವರ ಕುದುರೆಗಳ ಖುರಪುಟದಿಂದಲೂ ಹೊರಟ ಕೆಂಧೂಳಿಯು ಅಂತರಿಕ್ಷವನ್ನು ವ್ಯಾಪಿಸಿ ಮೇಲ್ಭಾಗದಲ್ಲಿ ಒಂದು ವಿತಾನದಂತೆ ಕಂಡಿತು ಕಾಡಿನಲ್ಲಿ ಬೇಟೆಗಾಗಿ ಸಂಚರಿಸುವಾಗ ಆ ಹಿನ್ನೆಲೆಗೆ ಹೊಂದಿಕೊಂಡಿರುವಂತೆ ದಶರಥನು ಅದಕ್ಕೆ ತಕ್ಕ ವೇಷವನ್ನು ಧರಿಸಿದ್ದನು ಅವನು ತನ್ನ ತಲೆಯ ಕೂದಲನ್ನು ಜಟೆಯಂತೆ ಎತ್ತಿಕಟ್ಟಿ ಅದಕ್ಕೆ ಕಾಡು ಹೂಗಳ ಮತ್ತು ಎಲೆಗಳ ಮಾಲೆಯನ್ನು ಸುತ್ತಿದ್ದನು, ಗಿಡಗಳ ಎಲೆಗಳಿಗೆ ಸಮಾನವಾದ ಹಸಿರುಬಣ್ಣದ ಉಡುಪನ್ನು ಧರಿಸಿದ್ದನು * ಮೃಗಾದಿಗಳ ವಿಶ್ವಾಸಾರ್ಥವಾಗಿ ಹಾಗೆ ವೇಷವನ್ನು ಧರಿಸಿ ಕುದುರೆಯ ನ್ನೋಡಿಸಿಕೊಂಡು ಅವನು ಅರಣ್ಯ ಪ್ರವೇಶಮಾಡಿ ಕೃಷ್ಣಸಾರ ಮೃಗಗಳಿಂದ ತುಂಬಿದ ಪ್ರದೇಶವನ್ನು ಸೇರಿದನು ಕಾಡಿನಲ್ಲಿ ಓಡುತ್ತಿದ್ದ ಕುದುರೆಯ ಗತಿ ವಿಶೇಷದಿಂದ ಅವನು ತನ್ನ ಕಿವಿಗಳಲ್ಲಿ ಧರಿಸಿದ್ದ ಕುಂಡಲಗಳು ಚಲಿಸುತ್ತಿದ್ದುವು ನಯ ವಿನಯಗಳಿಂದ ಕೋಸಲ ರಾಜ್ಯದ ಪ್ರಜೆಗಳನ್ನು ಸಂತೋಷಪಡಿಸುತ್ತ ಸುಂದರವಾದ ನೇತ್ರಗಳಿಂದ ಕೂಡಿ ನಯನಮನೋಹರನಾಗಿದ್ದ ದಶರಥ

---

* ಬೇಟೆಗಾಗಿ ಪೊದೆಗಳ ಮಧ್ಯದಲ್ಲಿ ನಿಂತರೆ ಮೃಗಗಳಿಗೆ ಸುಲಭವಾಗಿ ಗೊತ್ತಾಗದಿರಲೆಂಬುದು ಅದರ ಉದ್ದೇಶ ಕಾಳಿದಾಸನ ಕಾಲದಲ್ಲಿ ಬೇಟೆಗಾರರು ಹೇಗೆ ವರ್ತಿಸುತ್ತಿದ್ದರೆಂಬುದು ಇದರಿಂದ ಗೊತ್ತಾಗುತ್ತದೆ

ನನ್ನು–ಲತೆಗಳಲ್ಲಿ ತಮ್ಮ ದೇಹಗಳನ್ನೂ, ದುಂಬಿಗಳಲ್ಲಿ ತಮ್ಮ ಕಣ್ಣುಗಳನ್ನೂ ನೆಲೆಗೊಳಿಸಿದ್ದ–ವನದೇವತೆಗಳು ತೀವ್ರಾಸಕ್ತಿಯಿಂದ ನೋಡುತ್ತಿದ್ದಂತೆ ತೋರಿತು ಬೇಟೆ ನಾಯಿಗಳನ್ನು ಬಿಟ್ಟುಕೊಂಡು "ಶ್ವಗ್ರಾಹಿ"ಗಳೂ, ಮೃಗಬಂಧನಿಗಳಾದ ಬಲೆಗಳನ್ನು ತೆಗೆದುಕೊಂಡು ಜಾಲಿಕರೂ, ಆ ಮೊದಲೇ ತೆರಳಿದ್ದರು ಅಲ್ಲದೆ ವನಶೋಧಕರೂ ಆ ಮೊದಲೇ ಕಾಡುಗಿಚ್ಚಿನ ಭಯ ವಿಲ್ಲದೆ ಜಲಸಮೃದ್ಧವಾಗಿದ್ದ ಪ್ರದೇಶಗಳನ್ನು (ಬೀಡಿಗಾಗಿ) ಗೊತ್ತುಮಾಡಿ, ಕೆಸರಿಲ್ಲದೆ ಕುದುರೆಗಳ ಸಂಚಾರಕ್ಕೆ ಸುಗಮವಾಗಿದ್ದ ಪ್ರದೇಶಗಳನ್ನು ನಿರ್ಧ ರಿಸಿ, ಘಾತುಕ ಮೃಗಗಳಿಂದಲೂ ಮತ್ತು ಇತರ ಮೃಗ ಪಕ್ಷಿಗಳಿಂದಲೂ ತುಂಬಿದ್ದ ಸ್ಥಳದಲ್ಲಿ ಬೇಟೆಗೆ ಅನುಕೂಲಗಳನ್ನು ಕಲ್ಪಿಸಲು ಸಿದ್ಧವಾಗಿದ್ದರು

ಮೃಗಯಾ ವಿಹಾರಕ್ಕಾಗಿ ದಶರಥನು ಅಲ್ಲಿಗೆ ಹೋಗಿ ಸೇರಿದನು ಆತಂಕರಹಿತನಾಗಿ ಹೃಷ್ಟಮನಸ್ಕನಾಗಿದ್ದ ದಶರಥನು ತನ್ನ ಧನುಸ್ಸಿಗೆ ಮೌರ್ವಿ ಯನ್ನು ತೊಡಿಸಿದನು ಕನಕ ಪಿಂಗಲವರ್ಣದ ಮಿಂಚಿನ ಮೌರ್ವಿಯುಳ್ಳ ತ್ರಿದಶಾಯುಧವಾದ ಕಾಮನಬಿಲ್ಲಿನಿಂದ ಸಂಯುತವಾದ ಭಾದ್ರಪದ ಮಾಸದ ನೆನಪನ್ನು ತರುವಂತಿದ್ದ ಅವನ ಧನುಸ್ಸಿನ ಟಂಕಾರದಿಂದಲೂ, ಅವನ ಪರಿಜನರ ಕಲ ಕಲ ರವದಿಂದಲೂ ಸಿಂಹಗಳಿಗೆ ರೋಷವುಂಟಾಯಿತು ಜಿಂಕೆ ಗಳ ಹಿಂಡೊಂದನ್ನು ದಶರಥನು ಕಂಡನು ದೊಡ್ಡ ಜಿಂಕೆಗಳು ದರ್ಭೆಯ ಹುಲ್ಲನ್ನು ಮೇಯುತ್ತಿದ್ದುವು, ಹುಲ್ಲನ್ನು ಮೇಯುತ್ತಲೇ ಮುಂದುವರಿಯು ತ್ತಿದ್ದುವು ಆದರ ಸಣ್ಣಮರಿಗಳಿದ್ದ ಹೆಣ್ಣು ಜಿಂಕೆಗಳು ಮಾತ್ರ ಆ ಮರಿಗಳ ಜೊತೆಗೆ ನಿಧಾನವಾಗಿ ನಡೆಯಬೇಕಾಗಿದ್ದುದರಿಂದ ಇತರ ಜಿಂಕಗಳಿ ಗಿಂತ ಹಿಂದೆಬಿದ್ದುವು ಕೊಬ್ಬಿ ಗರ್ವಿತವಾಗಿದ್ದ ಕೃಷ್ಣಸಾರಮೃಗವು ಆ ಜಿಂಕೆಗಳ ಯೂಥದಲ್ಲಿ ಉಳಿದ ಜಿಂಕೆಗಳಿಗಿಂತ ಮುಂದೆ ನಡೆಯುತ್ತಿ ದ್ದಿತು ಉಳಿದ ಜಿಂಕೆಗಳು ಹಿಂಡಿನ ಯಾಜಮಾನ್ಯವಹಿಸಿದ್ದ ಆ ಗಂಡು ಜಿಂಕೆಯನ್ನು ಹಿಂಬಾಲಿಸುತ್ತಿದ್ದುವು * ಮುಂದೆ ಓಡಿಹೋದ ಜಿಂಕೆಗಳನ್ನು

* ಆನೆಗಳ ಹಿಂಡಿನಲ್ಲಾಗಲಿ, ಜಿಂಕೆಗಳ ಹಿಂಡಿನಲ್ಲಾಗಲಿ, ಎಷ್ಟು ಒಕ್ಕಟ್ಟೊ ಶಿಸ್ತೂ ಇರುವುದೆಂಬುದು ವಿಸ್ಮಯಕರ. ಹಿಂಡಿನಲ್ಲಿ ಅತ್ಯಂತ ಬಲಿಷ್ಠವಾದ ಸಲಗಕ್ಕೇ

ವೇಗಶಾಲಿಯಾದ ತನ್ನ ಕುದುರೆಯ ಮೇಲೆ ಕುಳಿತು ದಶರಥನು ಹಿಂಬಾಲಿಸಿ ತನ್ನ ಬತ್ತಳಿಕೆಯಿಂದ ಬಾಣವನ್ನು ಹಿರಿದನು ಅದರಿಂದ ಭ್ರಾಂತವಾದ ಜಿಂಕೆಗಳಗುಂಪು ಒಡೆದು ಜಿಂಕೆಗಳು ಸುತ್ತಲೂ ಚದರಿ,ಭಯದಪರಿಣಾಮವಾಗಿ ಕೊಂಚ ಕಣ್ಣೀರುತುಂಬಿದ ಆರ್ದ್ರದೃಷ್ಟಿಯಿಂದ ನೋಡುತ್ತಿದ್ದುವು ಸುತ್ತಲೂ ನಿಂತು ಆರ್ದ್ರವಾದ ಮತ್ತು ಆಕುಲವಾದ ದೃಷ್ಟಿಯಿಂದ ಅವು ಹಾಗೆ ನೋಡುತ್ತಿದ್ದ ವನಪ್ರದೇಶವು ಬಿರುಗಾಳಿಯಿಂದ ಹರಡಿದ ಉತ್ಪಲ ದಳಗಳಿಂದ ತುಂಬಿದಂತಿದ್ದಿತು ದಶರಥನು ಹಿಂಡಿನ ಕೃಷ್ಣಸಾರ ಮೃಗಕ್ಕೆ ಬಾಣವನ್ನು ಗುರಿಯಿಟ್ಟು ಶಿಂಜಿನಿಯನ್ನು ಆಕರ್ಣಾಂತವಾಗಿ ಸೆಳೆದಿದ್ದನು ಆ ಗಂಡು ಜಿಂಕೆಯನ್ನು ಳಿಸುವುದಕ್ಕಾಗಿ ಅದರ ದೇಹಕ್ಕೂ ಗುರಿಯಿಟ್ಟಿದ್ದ ಬಾಣಕ್ಕೂ ನಡುವೆ ಅದರ ಸಹಚರಿಯಾದ ಹರಿಣಿಯು ಅಡ್ಡವಾಗಿ ನಿಂತುದನ್ನು ಕಂಡು ಮಹೇಂದ್ರನಂತೆ ಶರಸಾಮರ್ಥ್ಯವುಳ್ಳವನಾಗಿದ್ದ ಅವನ ಮನಸ್ಸು ಕರಗಿ ಹೋಯಿತು ದಾಂಪತ್ಯಧರ್ಮದ ಸವಿಯನ್ನನುಭವಿಸಿ ಪ್ರೇಮದ ಹಿಂದಿರುವ ತ್ಯಾಗದ ಸ್ವರೂಪವನ್ನರಿತಿದ್ದ ದಶರಥನು ಆಕರ್ಣಾಂತವಾಗಿ ಸೆಳೆದಿದ್ದ ಬಾಣವನ್ನು ಪ್ರಯೋಗಿಸದೆ (ಉಪಸಂಹಾರ ಮಾಡುವುದು ಕಷ್ಟವಾಗಿದ್ದರೂ) ಕೃಪಾಮೃದುವಾದ ಮನಸ್ಸಿನಿಂದ ಉಪಸಂಹರಿಸಿದನು ಅನಂತರ ಅವನು ಇತರ ಜಿಂಕೆಗಳ ಕಡೆಗೆ ಗುರಿಯಿಟ್ಟು ಬಾಣಗಳನ್ನು ಮುಷ್ಟಿಯಲ್ಲಿ ಹಿಡಿದ್ದ ಶಿಂಜಿನಿಯನ್ನು ಮತ್ತೆ ಆಕರ್ಣಾಂತವಾಗಿ ಸೆಳೆದನು ಆದರೆ ಭಯಚಕಿತವಾದ ಚಟುಲ ದೃಷ್ಟಿಗಳಿಂದ ಹರಿಣಿಗಳು ಹರಿಣಗಳನ್ನು ನೋಡುತ್ತಿದ್ದ ಆಗಿನ ಕರುಣಾಜನಕವಾದ ಸನ್ನಿವೇಶವನ್ನು ಕಂಡ ದಶರಥನು ಪ್ರೌಢಯಾಗಿದ್ದ ತನ್ನ ಪ್ರಿಯೆಯಾದ ಕೌಸಲ್ಯಾದೇವಿಯ ನಯನ ವಿಭ್ರಮ ಚೇಷ್ಟಿತಗಳನ್ನು ಸ್ಮರಿಸಿಕೊಂಡನು, ಒಡನೆಯೇ ಅವನು ತನ್ನ ದೃಢಮುಷ್ಟಿಯನ್ನು ಸಡಿಲಿಸಿ ಬಾಣಗಳನ್ನು ಪ್ರಯೋಗಿಸದೆ ಸುಮ್ಮನಾದನು

---

ಯೂಥಪಮಾನ್ಯ ಕೆಲವು ವೇಳೆ ಹೆಣ್ಣಾನೆಯೇ ಸಲಗವಾಗಿ ಯೂಥಪಮಾನ್ಯ ವಹಿಸುತ್ತದೆ ಉಳಿದ ಹೆಣ್ಣಾನೆಗಳೂ, ಗಂಡಾನೆಗಳೂ ಅದರಲ್ಲಿ ವಿಧೇಯತೆಯನ್ನು ತೋರಿಸುತ್ತವೆ

ಅನಂತರ ಅವನು ಸಾಧುಪ್ರಾಣಿಗಳಾದ ಜಿಂಕೆಗಳ ಮೇಲೆ ಬಾಣ ಪ್ರಯೋಗ ಮಾಡುವ ಯೋಚನೆಯನ್ನೇ ಬಿಟ್ಟು ಕ್ರೂರಜಂತುಗಳಾದ ಕಾಡು ಹಂದಿಗಳನ್ನು ಬೇಟೆಯಾಡುವ ಪ್ರಯತ್ನವನ್ನು ಕೈಕೊಂಡನು ಕಾಡುಹಂದಿ ಗಳ ಯೂಥವೊಂದು ಹೊಂಡದ ಕೆಸರಿನ ಮಧ್ಯದಲ್ಲಿ ಮುಸ್ತಾಹುಲ್ಲಿನ ಅಂಕು ರಗಳನ್ನು ತಿನ್ನುತ್ತಿದ್ದು ಅಲ್ಲಿಂದ ಓಡಿಹೋಗಿದ್ದುದನ್ನು ಕೆಸರಿನಿಂದ ತುಂಬಿದ್ದ ಅವುಗಳ ಹೆಜ್ಜೆಗಳ ಗುರುತಿನ ಜಾಡಿನಿಂದಲೂ ಅವುಗಳು ಅರೆವಾಸಿಯಾಗಿ ಅಗಿದು (ಓಡಿದ ಶ್ರಮದಿಂದ ಉಂಟಾದ) ಬಾಯಿನೊರೆಯೊಡನೆ ಉಗುಳಿದ ಮುಸ್ತಾ ಹುಲ್ಲಿನ ತುಂಡುಗಳು ಹರಡಿದ್ದುದರಿಂದಲೂ ದಶರಥನು ಗುರುತಿಸಿ, ಅದೇಮಾರ್ಗವಾಗಿ ಕುದುರೆಯನ್ನೋಡಿಸಿಕೊಂಡು ಹೋದನು ಅವನು ಕುದುರೆಯ ಮೇಲೆ ಕುಳಿತು ಧನುಸ್ಸನ್ನುಪಯೋಗಿಸುವ ರಭಸದಲ್ಲಿ ಒಂದು ಪಾರ್ಶ್ವಕ್ಕೆ ಬಾಗಿ ಕಾಡುಹಂದಿಗಳಿಗೆ ಗುರಿಯಿಟ್ಟು ಬಾಣಪ್ರಯೋಗಮಾಡ ಲಾರಂಭಿಸಿದನು ಕೋಪೋದ್ರೇಕದಿಂದ ಕಾಡುಹಂದಿಗಳ ಕೂದಲುಗಳು ನಿಮಿರಿ ನಿಂತುವು ಅವುಗಳು ಅವನಮೇಲೆ ಸೇಡು ತೀರಿಸಿಕೊಳ್ಳುವುದಕ್ಕಾಗಿ ಕುದುರೆಯಮೇಲೆರಗಬೇಕೆಂದು ಮುಂದೆ ನುಗ್ಗಲನುವಾದುವು ದಶರಥನ ಬಾಣಗಳು ಅವುಗಳ ದೇಹವನ್ನು ಭೇದಿಸಿ ಅವುಗಳು ಒರಗಿದ್ದ ವೃಕ್ಷಗಳ ಕಾಂಡಗಳಿಗೆ (ಮೊಳೆಗಳನ್ನು ಹೊಡೆದಂತೆ) ಕೀಲಿಸಿದ್ದುದರಿಂದ ಅವುಗಳ ಪ್ರಯತ್ನವುಸಾಗಲಿಲ್ಲ ದಶರಥನು ಕಾಡುಹಂದಿಗಳ ಬೇಟೆಯನ್ನು ಮುಗಿಸುವ ವೇಳೆಗೆ ಅವನ ಮೇಲೆರಗುವುದರಲ್ಲಿದ್ದ ಕಾಡುಕೋಣದ ನೇತ್ರಮಧ್ಯಕ್ಕೆ ಅವನು ಬಾಣಪ್ರಯೋಗಮಾಡಿದನು ಆ ಬಾಣವು ಅದರ ದೇಹವನ್ನು ಭೇದಿಸಿತು ಬಾಣದ ಹಿಂದಿನ ಭಾಗವು ರಕ್ತದಸೋಂಕೇ ಇಲ್ಲದೆ ಹೊರಗೆ ಬರುವಷ್ಟು ಮಹತ್ತರ ವೇಗದಿಂದ ದಶರಥನು ಬಾಣಪ್ರಯೋಗ ಮಾಡಿ ದ್ದನು, ಕಾಡುಕೋಣವು ನೆಲಕ್ಕುರುಳಿದ ಮೇಲೆ ಬಾಣವು ಅದರ ತಲೆಯನ್ನು ಭೇದಿಸಿಕೊಂಡು ಹೊರಬಿದ್ದಿತು ಅವನು ತನ್ನನ್ನೆದುರಿಸಿದ ಖಡ್ಗಮೃಗಗಳ ಮೇಲೆ ಅರ್ಧಚಂದ್ರಾಕೃತಿಯ ಉಕ್ಕಿನ ಅಲಗಿನಿಂದ ಕೂಡಿದ ಬಾಣಗಳನ್ನು ಪ್ರಯೋಗಿಸಿ ಅವುಗಳ ಮೂಗಿನ ಮೇಲಿನ ಕೊಂಬುಗಳನ್ನು ಹಾರಿಸಿ ಅವುಗಳ

ತಲೆಗಳ ಮೇಲಿನ ಭಾರವನ್ನಿಳಿಸಿದನು † ದುಷ್ಟನಿಗ್ರಹ ನಿರತನಾಗಿದ್ದ ದಶರಥ ನಿಗೆ ಉದ್ಧತರ ದುರಹಂಕಾರ ಶೃಂಗವನ್ನು ಕಂಡರೆ ಮಾತ್ರ ಅಸಹನವೇ ಹೊರತು ಅವರ ದೀರ್ಘಾಯುಷ್ಯದ ವಿಚಾರದಲ್ಲಲ್ಲ ಗುಹೆಗಳಿಂದ ಹೊರ ಬಿದ್ದು ಹುಲಿಗಳು ಆರ್ಭಟಿಸುತ್ತ ಬಂದಾಗ ಅವನು ನಿರ್ಭೀತನಾಗಿ ಅತ್ಯಂತ ಕ್ಷಿಪ್ರಹಸ್ತತೆಯಿಂದ ಅತಿಶೀಘ್ರವಾಗಿ ಬಾಣ ಪ್ರಯೋಗಮಾಡಿ ಅವುಗಳನ್ನು ಕೊಂದನು ಬಾಯಿಗಳಲ್ಲಿಯೂ ತಲೆಗಳಲ್ಲಿಯೂ ರಂಧ್ರಮಾಡಿ ನಾಟಿಕೊಂಡಿದ್ದ ಸರಳುಗಳನ್ನು ನೋಡಿದರೆ ನೆಲಕ್ಕುರುಳಿದ್ದ ಆ ಹುಲಿಗಳ ಬಾಯಿಗಳು ಬತ್ತಳಿಕೆಗಳಂತೆ ತೋರುತ್ತಿದ್ದುವು ಬಾಣಗಳು ನಾಟಿಕೊಂಡು ನೆಲದ ಮೇಲೆ ಬಿದ್ದಿದ್ದ ಆ ಹುಲಿಗಳು ಬಿರುಗಾಳಿಯ ಹೊಡೆತದಿಂದ ಕೆಳಕ್ಕುರುಳಿದ ಆಸನವೃಕ್ಷದ ಪುಷ್ಪಿತವಾದ ಶಾಖೆಗಳಂತೆ ತೋರುತ್ತಿದ್ದುವು ಅವನು ಬಿರುಗಾಳಿಯ ಸುಳಿಯ ಮೊರೆತದ ಘೋಷದಂತೆ ಶಿಂಜಿನಿಯ ಮಿಡಿತದ ಶಬ್ದಮಾಡಿ ಪೊದೆಗಳಲ್ಲಿದ್ದ ಸಿಂಹಗಳನ್ನು ಕೆರಳಿಸಿದನು ಮೃಗರಾಜ ಶಬ್ದದ ದೆಸೆಯಿಂದ ಅವನಿಗೆ ಸಿಂಹಗಳಲ್ಲಿ ಅಸೂಯೆಯುಂಟಾಯಿತು ಗಜಕುಲದಲ್ಲಿ ಬದ್ಧವೈರವುಳ್ಳ ಆ ಸಿಂಹಗಳನ್ನು ತನ್ನ ಬಾಣಗಳಿಂದ ಕೊಂದು, ಚಿರಕಾಲ ತನ್ನ ಸೈನ್ಯದಲ್ಲಿ ಸೇವೆ ಮಾಡಿದ್ದ ಮದಗಜಗಳ ಉಪಕಾರದ ಭಾರವನ್ನು ತೀರಿಸಿದಂತೆ ಭಾವಿಸಿ ಋಣವಿಮುಕ್ತನಾದನು ಚಮರೀ ಮೃಗಗಳನ್ನು ಕಂಡು ದಶರಥನು ಅವುಗಳ ಮೇಲೂ ಬಾಣಪ್ರಯೋಗ ಮಾಡಿದನು ಆದರೆ ಅವುಗಳನ್ನು ಕೊಲ್ಲುವ ಉದ್ದೇಶದಿಂದಲ್ಲ ಅವುಗಳ ಶುಭ್ರವಾದ ಕೂದಲನ್ನು (ಚಾಮರಕ್ಕೆ ಉಪಯೋಗವಾಗುವ ಕೂದಲನ್ನು) ಕತ್ತರಿಸುವ ಉದ್ದೇಶದಿಂದ ವಿಶೇಷ ವಿಧದ ಹರಿ

---

† ಈ ವರ್ಣನೆಯಿಂದ ದಶರಥನ ಕೈಚಳಕವೂ ಧೈರ್ಯವೂ ವ್ಯಕ್ತವಾಗುತ್ತವೆ ಇದನ್ನು ದಶರಥನಿಗೆ ಹೊಂದಿಸಿರುವುದು ನಿಜವಾದರೂ, ರಾಜಾಸ್ಥಾನದಲ್ಲಿದ್ದ ಕಾಳಿದಾಸ ಮಹಾಕವಿಯು ತನ್ನ ಕಾಲದ ವೀರರಾದ ಬೇಟೆಗಾರರ ಸಾಹಸವನ್ನು ಪ್ರತ್ಯಕ್ಷವಾಗಿ ಕಂಡ ಅನುಭವವನ್ನು ಇಲ್ಲಿ ಚಿತ್ರಿಸಿದ್ದಾನೆಂಬುದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ ಕಾಡುಕೋಣಗಳ ಸ್ವಭಾವವನ್ನರಿತವರಿಗಂತೂ, ಇದರಿಂದ ಆಶ್ಚರ್ಯಾನಂದವಾಗುತ್ತದೆ

ತವಾದ ಅಲಗಿನಿಂದ ಕೂಡಿದ "ಭಲ್ಲ' ಗಳೆಂಬ ಬಾಣಗಳನ್ನು ಪ್ರಯೋಗಿಸಿ ಅವನು ಕೃತಕಾರ್ಯನಾದನು ಒಂದು ನವಿಲು ಅವನ ಕುದುರೆಯ ಬಳಿ ಸಾರಿ ಹಾರಿ ಹೋಯಿತು ಅದರ ಮೇಲೆ ಅವನು ಬಾಣ ಪ್ರಯೋಗ ಮಾಡ ಲಿಲ್ಲ. ಸುಂದರವಾಗಿದ್ದ ನವಿಲುಗರಿಗಳನ್ನು ನೋಡಿದಾಗ ದಶರಥನಿಗೆ ತನ್ನ ಪ್ರಿಯಳ ಚಿತ್ರಮಾಲ್ಯಾನುಕೀರ್ಣವಾದ ಕೇಶಪಾಶದ ನೆನಪಾಯಿತು. ಕರ್ಕಶವಾದ ಮೃಗಯಾವಿಹಾರದ ಆಯಾಸದಿಂದ ಅವನ ಮುಖದ ಮೇಲೆ ಮೂಡಿದ ಬೆವರಿನ ಬಿಂದುಗಳು, ಪಲ್ಲವ ಪುಟಗಳನ್ನು ಭೇದಿಸಿಕೊಂಡು ಬೀಸು ತ್ತಿದ್ದ ತುಷಾರಶೀಕರವಾದ ತಂಗಾಳಿಯಿಂದ* ಮಾಯವಾದುವು

ರಾಜ್ಯಭಾರವನ್ನು ಸಚಿವರಿಗೆ ವಹಿಸಿ ಬಂದಿದ್ದ ದಶರಥನು ಮತ್ತಾವ ಕರ್ತವ್ಯದ ಆತಂಕವೂ ಮನಸ್ಸಿನಲ್ಲಿಲ್ಲದೆ ತನ್ನ ಇತರ ಕರ್ತವ್ಯಗಳನ್ನೆಲ್ಲ ಸಂಪೂರ್ಣವಾಗಿ ಮರೆತು ಮೃಗಯಾವಿಹಾರ ಮಗ್ನನಾಗಿದ್ದನು, ಸಂತತ ಸೇವೆಯಿಂದ ರಾಗವೃದ್ಧಿ ಮಾಡಿ † ಪ್ರೀತಿಯನ್ನು ಸಂಪಾದಿಸಿದ ಚತುರೆಯಾದ

* ಮಧ್ಯಾಹ್ನ ಕಾಲದಲ್ಲಿ ಕೂಡ, ದಟ್ಟವಾದ ಕಾಡಿನಲ್ಲಿ ತಂಗಾಳಿ ಬೀಸುತ್ತದೆ ನಡು ಹಗಲಿನ ಸೂರ್ಯ ಕಿರಣಗಳೂ ಪೂರ್ತಿಯಾಗಿ ಕೆಳಗಿಳಿಯದೆ ಮಬ್ಬು ಕವಿದಿರುವ ಕಾನನಪ್ರದೇಶಗಳೂ ಉಂಟು

† ದ್ಯೂತ, ಬೇಟೆ, ಮುಂತಾದ ದುರ್ವ್ಯಸನಗಳಿಗೆ ಈಡಾಗದೆ ವಿಚಕ್ಷಣೆಯಿಂದಲೂ ಧರ್ಮವಾಗಿಯೂ ರಾಜ್ಯಭಾರ ಮಾಡುತ್ತಿದ್ದ ದಶರಥನು, ಮೃಗಯಾವ್ಯಾಮೋಹಕ್ಕೆ ಮನಸೋತು ಮೃಗಯಾಲೋಲುಪನಾದಂತೆ ಕವಿಯು ಚಿತ್ರಿಸಿದ್ದಾನೆ ಇಲ್ಲಿ ಕೊಟ್ಟಿ ರುವ ಉಪಮಾನವು ಹೃದಯಂಗಮವಾಗಿದೆ ಬೇಟೆಯಲ್ಲಿ ಮಿತಿಮೀರಿ ಆಸಕ್ತಿ ಹುಟ್ಟಿ ಪರಿಜನರಿಂದ ಕೂಡ ದೂರನಾಗಿ ಹೊರಟುಹೋದ ದಶರಥನು, ಆ ತರುವಾಯ ಬೇಟೆಯ ಮೇಲಿನ ಗೀಳಿನಿಂದ, ಮುನಿಕುಮಾರನು ಗಡಿಗೆಗೆ ಹೊಳೆಯ ನೀರನ್ನು ತುಂಬಿ ಕೊಳ್ಳುತ್ತಿದ್ದಾಗ ಉಂಟಾದ ಶಬ್ದವನ್ನು ಆನೆಯು ನೀರನ್ನು ಕುಡಿಯುವ ಶಬ್ದವೆಂದು ಭ್ರಮಿಸಿ, ಅದನ್ನು ದೃಢಪಡಿಸಿಕೊಳ್ಳದೆಯೇ ಬಾಣ ಪ್ರಯೋಗ ಮಾಡಿ ಅವನ ಸಾವಿಗೆ ಕಾರಣನಾದ ಕರುಣಾಜನಕ ಪ್ರಸಂಗದ ಮೂಲಕ, ಆಶೆಯು ಉಪಭೋಗದಿಂದ ಶಾಂತ ವಾಗುವುದಿಲ್ಲವೆಂಬ ಮತ್ತು ಅತಿ ವರ್ತನೆಯು ಅನರ್ಥ ಹೇತುವೆಂಬ ಸಂದೇಶವನ್ನು ಕವಿಯು ಸಾರಿದ್ದಾನೆ.

ಕಾಮಿನಿಯಂತೆ ಮೃಗಯಾಲಾಲಸೆಯು ದಶರಥನನ್ನು ಆಕರ್ಷಿಸಿತು. ಕ್ರೂರ ಮೃಗಗಳನ್ನು ಬೇಟೆಯಾಡುತ್ತ ಬಹುದೂರ ಹೊರಟುಹೋದ ದಶರಥನು ಪರಿಜನರನ್ನಗಲಿ ಏಕಾಕಿಯಾದನು. ಕೋಮಲವಾದ ಕುಸುಮಗಳನ್ನೂ ಚಿಗುರುಗಳನ್ನೂ ಹಾಸಿಕೊಂಡು (ಎಂದರೆ "ಲಲಿತ ಕುಸುಮ ಪ್ರವಾಳಶಯ್ಯೆ'ಯನ್ನು ರಚಿಸಿಕೊಂಡು) ಮಹೌಷಧಿಗಳಿಂದ ಹೊರಡುತ್ತಿದ್ದ ಬೆಳಕಿನಲ್ಲಿ ರಾತ್ರಿಯ ಮೂರು ಜಾವಗಳನ್ನು ಕಳೆದನು. ಮಂಗಳವಾದ್ಯಸ್ವನಗಳಿಂದಲೂ, ವಂದಿಮಾಗಧರ ಗಾಯನದಿಂದಲೂ ರಾಜಧಾನಿಯಲ್ಲಿ ಎಚ್ಚರಗೊಳ್ಳುತ್ತಿದ್ದ ದಶರಥನಿಗೆ ಆ ದಿನ ಉಷಃಕಾಲದಲ್ಲಿ ಯೂಥಗಳ ಆನೆಗಳು ಕಿವಿಗಳನ್ನು ಬಡಿಯುತ್ತಿದ್ದ ತಾಳ ಪಟಹ ಧ್ವನಿಯಿಂದಲೂ, ಪಕ್ಷಿಗಳ ಕಲರವದ ಮಧುರ ಮಂಗಲ ಗೀತದಿಂದಲೂ ಎಚ್ಚರವಾಯಿತು. ಬೇಟೆಗೆ ಹೊರಟು ಪರಿಜನರನ್ನಗಲಿ ಬಂದಿದ್ದುದರಿಂದ ಅವರು ತನ್ನನ್ನು ಹುಡುಕಿಕೊಂಡು ಬರುವುದಕ್ಕೆ ಮೊದಲೇ ದೂರವಾಗಿ ಹೋದ ದಶರಥನು ತಾನೊಬ್ಬನೇ ರುರು ಜಾತಿಯ ಜಿಂಕೆಯೊಂದನ್ನು ಅಟ್ಟಿಕೊಂಡು ಹೋದನು. ಬಹಳ ವೇಗವಾಗಿ ಬಹಳ ದೂರ ಓಡಿದ ಆಯಾಸದಿಂದ (ವಿಶೇಷವಾಗಿ ಪ್ರಾಣ ಭಯದಿಂದ ಮಿಕ್ಕಿಮೀರಿದ

---

* ತನ್ನ ರಾಜ್ಯಭಾರವು ಆರಂಭವಾದಾಗ ದಶರಥನಿಗೆ ದ್ಯೂತ ಮೃಗಯಾದಿಗಳಲ್ಲಿ ಪ್ರವೃತ್ತಿಯೇ ಇರಲಿಲ್ಲ. ಮೃಗಯಾ ವಿಹಾರಕ್ಕೆ ಹೊರಟ ಪ್ರಾರಂಭ ದಶೆಯಲ್ಲಿ ಅವನು ಜಿಂಕೆಗಳ ಮೇಲೂ ನವಿಲುಗಳ ಮೇಲೂ ಬಾಣ ಪ್ರಯೋಗ ಮಾಡಲು_ಅವು ನಿರಪರಾಧ ಜಂತುಗಳಾದ ಸಾಧು ಪ್ರಾಣಿಗಳಾಗಿದ್ದ ಕಾರಣದಿಂದ_ಹಿಂದೆಗೆದು ಹೂಡಿದ ಬಾಣಗಳನ್ನು ಉಪಸಂಹರಿಸಿದನು. ಕ್ರಮೇಣ ಅವನು ಮೃಗಯಾಲೋಲುಪನಾದನು, ಜಿಂಕೆಯನ್ನು ಅಟ್ಟಿಕೊಂಡು ಹೋಗುವ ಮಟ್ಟಿಗೆ ಅವನ ತೋಳ ತೀಟೆಯು ವೃದ್ಧಿಯಾಯಿತು, "ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ । ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥" ಎಂಬಂತೆ ದುರ್ವ್ಯಸನಗಳ ಮೇಲಿನ ದುರಾಸೆಯೂ, ಪ್ರವೃತ್ತಿಯೂ ಅವುಗಳ ಅನುಭವದಿಂದ ಶಾಂತವಾಗುವುದಿಲ್ಲ. ಹವಿಸ್ಸಿನಿಂದ ಅಭಿವರ್ಧಿಸುವ ಅಗ್ನಿಯಂತೆ ಉಪಭೋಗ ಮಾಡಿದಷ್ಟೂ ಅವೂ ಅಭಿವರ್ಧಿಸುತ್ತವೆ. ಬೇಟೆಯ ಗೀಳು ಹಿಡಿದ ದಶರಥನ ವಿಚಾರಶಕ್ತಿಯು ಕಡಮೆಯಾಗುತ್ತ ಬಂದುದನ್ನು ಕವಿಯು ವರ್ಣಿಸಿದ್ದಾನೆ.

ವೇಗದಿಂದ ಓಡುತ್ತಿದ್ದ ಜಿಂಕೆಯನ್ನು ಹಿಂಬಾಲಿಸಿದ ಆಯಾಸದಿಂದ) ಅವನ ಕುದುರೆಯ ಬಾಯಿಂದ ನೊರೆಯು ಸುರಿಯುತ್ತಿದ್ದಿತು  ದಶರಥನು ಜಿಂಕೆಯನ್ನಟ್ಟಿಕೊಂಡು ತಪಸ್ವಿಗಳಿಂದ ಸೇವಿತವಾಗಿದ್ದ ತಮಸಾ ನದಿಯ ತೀರವನ್ನು ಸೇರಿದನು  ಗಡಿಗೆಯಲ್ಲಿ ನೀರುತುಂಬುತ್ತಿದ್ದ ಶಬ್ದವನ್ನು ಕೇಳಿ ಅದು ನೀರನ್ನುಕುಡಿಯುತ್ತಿದ್ದ ಆನೆಯಿಂದ ಬಂದ ಸದ್ದೆಂದು ಭ್ರಮಿಸಿದ ದಶರಥನು ಶಬ್ದ ಮೂಲದ ಕಡೆಗೆ ಹೋಗಿ ಘಾತಿಸುವ ಶಬ್ದಪಾತಿಯೆಂಬ ಅಸ್ತ್ರವನ್ನು ಪ್ರಯೋಗಿಸಿದನು  ಜೊಂಡು ಹುಲ್ಲು ಎತ್ತರವಾಗಿ ಬೆಳದಿದ್ದ ಕಾರಣ ಅದರ ಮರೆಯಲ್ಲಿ ಗಡಿಗೆಗೆ ನೀರುತುಂಬಿಕೊಳ್ಳುತ್ತಿದ್ದವನು ಮುನಿಕುಮಾರನೆಂಬುದನ್ನರಿಯದೆ, ಮೃಗಯಾ ವಿಹಾರದಲ್ಲೇ ಮನಸ್ಸು ನಾಟಿಹೋಗಿದ್ದ ದಶರಥನು ಪ್ರಮಾದ ವಶದಿಂದ ಹಾಗೆ ಮಾಡಿದನು  ಒಂದು ವೇಳೆ ಅದು ಆನೆಯೇ ಆಗಿದ್ದರೂ ಅದು ಕ್ಷತ್ರಿಯನಿಗೆ ನಿಷಿದ್ಧಕಾರ್ಯ  ಹಾಗಿದ್ದೂ ಬೇಟೆಯ ಗೀಳುಹಿಡಿದಿದ್ದ ದಶರಥನು ಶಾಸ್ತ್ರನಿಯಮವನ್ನು ಉಲ್ಲಂಘಿಸಿ ಪ್ರತಿಷಿದ್ಧ ಕಾರ್ಯವನ್ನೇ ಮಾಡಿದನು, ಧರ್ಮ ಸೂಕ್ಷ್ಮವನ್ನರಿತ ವಿದ್ವಾಂಸರಾದ ಶ್ರುತವಂತರೂ ಕೂಡ, ರಜೋನಿಮೀಲಿತರಾದಾಗ, ಧರ್ಮ ನಿಷ್ಠೆಯುಳ್ಳವರು ಅನುಸರಿಸ ಕೂಡದ ಮಾರ್ಗದಲ್ಲಿ ಹೆಜ್ಜೆಯಿಡುತ್ತಾರೆ ‡

ಶಬ್ದಪಾತಿ ಬಾಣದಿಂದ ಆಹತನಾದ ಮುನಿಪುತ್ರನು "ಹಾ ! ತಂದೆ" ಎಂದು ಕೂಗಿಕೊಂಡ ಆಕ್ರಂದನ ಸ್ವರವನ್ನು ಕೇಳಿ ದಶರಥನಿಗೆ ಉತ್ಸಾಹಭಂಗವುಂಟಾಯಿತು  ದಶರಥನು ವಿಷಣ್ಣನಾಗಿ ಆ ಧ್ವನಿಯು ಬಂದಕಡೆಗೆ ಹೋಗಿ ಜೊಂಡು ಹುಲ್ಲಿನ ಮರೆಯಲ್ಲಿ ಬಾಣದ ಏಟುಬಿದ್ದು ನರಳುತ್ತಿದ್ದ ಮುನಿಪುತ್ರನನ್ನು ಕಂಡನು  ನೀರು ತುಂಬಿದ ಗಡಿಗೆಯೂ ಅವನ ಬಳಿಯಲ್ಲಿದ್ದಿತು

---

‡ ಯುದ್ಧರಂಗದಲ್ಲಿ ಅಥವಾ ಆತ್ಮರಕ್ಷಣೆಯ ಪ್ರಯತ್ನದಲ್ಲಿ ಹೊರತು ಮತ್ತಾವಾಗಲೂ ಮತ್ತೆಲ್ಲಿಯೂ ಕಾಡಾನೆಯನ್ನು ಕೊಲ್ಲ ಕೂಡದೆಂಬುದು ಶಾಸ್ತ್ರನಿಯಮ  ಶಾಪಗ್ರಸ್ತನಾಗಿ ಕಾಡಾನೆಯ ರೂಪವನ್ನು ಪಡೆದಿದ್ದ ಗಂಧರ್ವನು ಅಜನ ಮೇಲೆ ಎರಗಿ ಬಂದಾಗ ಕೂಡ, ಅವನು ಆನೆಯನ್ನು ಕೊಲ್ಲದೆ ಅದನ್ನು ಘಾತಿಸಿ ಓಡಿಸುವ ಪ್ರಯತ್ನ ಮಾಡಿದನು, ಶಾಸ್ತ್ರ ನಿಯಮವನ್ನು ಪಾಲಿಸುವುದಕ್ಕೆ ಮನಸ್ಸು ಮಾಡಿದನು

ಬಾಣವು ಮೈಗೆ ನಾಟಿದ್ದ ಮುನಿಪುತ್ರನನ್ನು ಕಂಡು ದುಃಖಿತನಾದ ದಶರಥ ಕ್ಷಿತಿಪಾಲನು ತನ್ನ ಹೃದಯಕ್ಕೇ ಶಲ್ಯವೊಂದು ನಾಟಿಕೊಂಡಿದ್ದಂತೆ ಪರಿತಪಿಸಿದನು ಪ್ರಖ್ಯಾತವಂಶದವನಾದ ದಶರಥನು, ಕುದುರೆಯಿಂದಿಳಿದು, ಜಲಕುಂಭವನ್ನು ಒರಗಿಕೊಂಡು ಬಾಧೆಪಡುತ್ತ ನೆಲದ ಮೇಲೆ ಕುಳಿತಿದ್ದ ತಪಸ್ವಿಪುತ್ರನ ಬಳಿಗೆ ಹೋಗಿ ಅವನ ಅನ್ವಯವನ್ನು ವಿಚಾರಿಸಿದನು ನೋವಿನಿಂದ ಬಾಧೆಪಡುತ್ತಿದ್ದ ತಪಸ್ವಿಪುತ್ರನು ನೋವಿನಿಂದಲೂ ನಿಶ್ಶಕ್ತಿಯಿಂದಲೂ ಸ್ಖಲಿತವಾಣಿಯಲ್ಲಿ ಕಚ್ಚಿ ಕಚ್ಚಿ ಮಾತನಾಡುತ್ತ ತಾನು ದ್ವಿಜೇತರ ತಪಸ್ವಿಪುತ್ರನೆಂದು ತಿಳಿಸಿ ಕಷ್ಟದಿಂದ ತನ್ನ ವಾರ್ತೆಯನ್ನರುಹಿದನು ತಪಸ್ವಿಪುತ್ರನಿಂದ ಚೋದಿತನಾದ ದಶರಥನು ಅವನ ಕೋರಿಕೆಯಂತೆ, ವೃದ್ಧರೂ ಅಂಧರೂ ಆದ ಅವನ ತಾಯಿತಂದೆಗಳ ಬಳಿಗೆ ಅವನನ್ನು ಕರೆದುಕೊಂಡು ಹೋದನು ತಪಸ್ವಿಪುತ್ರನ ದೇಹಕ್ಕೆ ನಾಟಿದ್ದ ಅಸ್ತ್ರವನ್ನು ಹಿರಿಯದೆ ಹಾಗೆಯೇ ಅವರ ಬಳಿಗೆ ಅವನನ್ನು ಕರದುಕೊಂಡು ಹೋಗಿ ಅವರಿಗೆ ಏಕಮಾತ್ರ ಪುತ್ರನಾದ ಆ ತರುಣನು ಜೊಂಡಿನ ಮರೆಯಲ್ಲಿದ್ದುದನ್ನರಿಯದೆ ತಾನು ಅಜ್ಞಾನವಶದಿಂದ ಬಾಣಪ್ರಯೋಗ ಮಾಡಿದ ದಾರುಣ ವಾರ್ತೆಯನ್ನು ತಿಳಿಸಿದನು ದಂಪತಿಗಳಿಬ್ಬರೂ ಬಹುವಾಗಿ ವಿಲಾಪಿಸಿ, ತರುಣನ ಎದೆಗೆ ನಾಟಿದ್ದ ಶಲ್ಯವನ್ನು ಹೊರಕ್ಕೆ ಹಿರಿಯುವಂತೆ ದಶರಥನಿಗೆ ಹೇಳಿದರು ಅವನು ಶಲ್ಯವನ್ನು ಹಿರಿದೊಡನೆಯೇ ತಪಸ್ವಿಪುತ್ರನು ಮರಣ ಹೊಂದಿದನು ' ಒಡನೆಯೇ ದುಃಖ

---

ಆದರೆ, ಅವನ ಮಗನಾದ ದಶರಥನು ಮಾತ್ರ ಬೇಟೆಯ ಗೀಳು ಹಿಡಿದ ಆವೇಶಭರದಲ್ಲಿ ಶಾಸ್ತ್ರನಿಯಮವನ್ನು ಲ್ಲಂಘಿಸಿ (ಕಾಡಾನೆಯು ನೀರು ಕುಡಿಯುತ್ತ ಶಬ್ದ ಮಾಡುತ್ತಿದೆಯೆಂದು ಭ್ರಮಿಸಿ) ಕಾಡಾನೆಯನ್ನು ಕೊಲ್ಲಲು ಬಾಣ ಪ್ರಯೋಗ ಮಾಡಿದನು "ರಜೋಗುಣದಿಂದ ಆವೃತರಾಗಿ ವಿಚಾರ ಪರತೆಯ ಕಣ್ಣು ಮುಚ್ಚಿಕೊಂಡಾಗ ಧರ್ಮಸೂಕ್ಷ್ಮವನ್ನರಿತ ಶ್ರುತವಂತರು ಕೂಡ ಅಪಥದಲ್ಲಿ ಹೆಜ್ಜೆಯನ್ನಿಡುತ್ತಾರೆ" ("ಅಪಥೇ ಪದಮರ್ಪಯನ್ತಿ ಶ್ರುತವಂತೋऽಪಿ ರಜೋನಿಮೀಲಿತಾಃ ।") ಎಂದು ಅದಕ್ಕೋಸ್ಕರವೇ ವರ್ಣಿಸಿರುವುದು ಅಪಥದಲ್ಲಿ ಹೆಜ್ಜೆಯಿಟ್ಟ ದಶರಥನು ಅನರ್ಥಕ್ಕೇ ಗುರಿಯಾಗಬೇಕಾಯಿತು

* ತಪಸ್ವಿ ಪುತ್ರನು ನದೀ ತೀರದಲ್ಲೇ ಮೃತಪಟ್ಟಂತೆ ರಾಮಾಯಣದಲ್ಲಿದೆ

ಭರದಲ್ಲಿ ಕಣ್ಣೀರು ಬಿಡುತ್ತ ವೃದ್ಧ ತಪಸ್ವಿಯು ಪಶ್ಚಾತ್ತಾಪಿತವಾದ ತನ್ನ ನಯನವಾರಿಯನ್ನೇ ಶಾಪೋದಕವಾಗಿಟ್ಟುಕೊಂಡು ದಶರಥನನ್ನು "ಎಲೈ ರಾಜನೇ! ನೀನೂ ಕೂಡ ವೃದ್ಧಾಪ್ಯದಲ್ಲಿ ನನ್ನಂತೆಯೇ ಪುತ್ರನಿಮಿತ್ತವಾದ ಶೋಕದಿಂದಲೇ ಸಂತಪ್ತನಾಗಿ ಮರಣಹೊಂದು" ಎಂದು ಶಪಿಸಿದನು, ತುಳಿಸಿಕೊಂಡ ಸರ್ಪವು ರೋಷದಿಂದ ವಿಷವನ್ನು ಬಿಡುವಂತೆ ವೃದ್ಧತಪಸ್ವಿಯು ಶಪಿಸಿದನು ಆ ಮಾತುಗಳನ್ನು ಕೇಳಿ, ಪ್ರಥಮಾಪರಾಧಿಯಾದ ದಶರಥನು ವೃದ್ಧನನ್ನು ಕುರಿತು "ಭಗವನ್! † ನಾನಿನ್ನೂ ತನಯನ ಮುಖಪದ್ಮವನ್ನು ಕಂಡಿಲ್ಲ ಈ ಶಾಪದ ಮೇರೆಗೆ ನನ್ನ ಅಂತ್ಯಕಾಲದಲ್ಲಿ ಪುತ್ರನ ಅಗಲಿಕೆಯ ದುಃಖವುಂಟಾಗಬೇಕಾದರೆ, ನನಗೆ ಪುತ್ರನಾಗಲೇ ಬೇಕಾಯಿತು ಆಗ ಕಾರಣ, ಈ ಶಾಪವೂ ನನ್ನಲ್ಲಿ ಅನುಗ್ರಹವಾಗಿಯೇ ಪರಿಣಮಿಸಿತು ಕಾಷ್ಠ ಕಿಚ್ಚಿನ ಉರಿಯು ಸುಟ್ಟುಹಾಕಿದ ಗಿಡಗಳಿಂದ ಭೂಮಿಯು ಫಲವತ್ತಾಗಿ ಉತ್ಪಾದನ ಶಕ್ತಿಯು ಹೆಚ್ಚಾಗುವ ಕಾರಣ, ಅಗ್ನಿಯ ದಹನ ಕಾರ್ಯವೂ ಉಪಕಾರವಾಗಿ ಪರಿಣಮಿಸುವಂತೆ ತಮ್ಮ ಶಾಪವೂ ನನ್ನ ಸುಖಹೇತುವಾಗಿ

*ದಶರಥನು ಅವನನ್ನು ಆಶ್ರಮಕ್ಕೆ ಕರೆದುಕೊಂಡು ಒಂದು ಅವನ ತಾಯಿ ತಂದೆಗಳ ಬಳಿ ಸಾರುವಂತೆಯೂ, ಅವರು ಆಜ್ಞಾಪಿಸಿದಂತೆ ತರುಣನ ಎದೆಗೆ ನಾಟಿದ್ದ ಬಾಣವನ್ನು ಹಿರಿದ ಮೇಲೆ ಅವನು ಮೃತಪಡುವಂತೆಯೂ ಕಾಲಿದಾಸನು ಮಾರ್ಪಡಿಸಿದ್ದಾನೆ ಕರುಣಾರಸ ಪುಷ್ಟಿಗಾಗಿ ಹಾಗೆ ಮಾಡಿದ್ದಾನೆ

†ಉದಾರ ಹೃದಯನಾದ ಕಾಲಿದಾಸ ಮಹಾ ಕವಿಗೆ ಯೋಗ್ಯತೆಯೊಂದೇ ಪ್ರಧಾನ, ವರ್ಣ, ಕುಲ ಮುಂತಾದುವುಗಳು ಗೌಣ ಮೃತನು ದ್ವಿಜೇತರ ತಪಸ್ವಿ ಪುತ್ರನೆಂಬುದನ್ನು ಅವನ ಮಾತುಗಳಿಂದಲೇ ಕೇಳಿ ತಿಳಿದುಕೊಂಡಿದ್ದೂ ದಶರಥನು ವೃದ್ಧ ತಪಸ್ವಿಯನ್ನು "ಭಗವನ್!" ಎಂದು ಸಂಬೋಧಿಸುವಂತೆಯೂ, ಆತನಲ್ಲಿ ಅತ್ಯಂತ ಗೌರವವನ್ನು ತೋರಿಸುವಂತೆಯೂ ಕಾಲಿದಾಸ ಮಹಾ ಕವಿಯು ಚಿತ್ರಿಸಿದ್ದಾನೆ. ವೃದ್ಧರಾದ ಬ್ರಾಹ್ಮಣ ತಪಸ್ವಿಗಳು ಕೂಡ ಕ್ಷತ್ರಿಯ ಕನ್ಯೆಯಾದ ತಪಸ್ವಿನಿ ಉಮಾದೇವಿಯ ದರ್ಶನಾಕಾಂಕ್ಷಿಗಳಾಗಿ ಬಂದು ಗೌರವ ತೋರಿದಂತೆ ಕುಮಾರ ಸಂಭವ ಕಾವ್ಯದಲ್ಲಿ ಅವನು ಚಿತ್ರಿಸಿದ್ದಾನೆ

ಪರಿಣಮಿಸಿದೆ ಆದರೆ ಈ ಸನ್ನಿವೇಶದಲ್ಲಿ ನಾನು ನಿಷ್ಕರುಣೆಯಿಂದ ವರ್ತಿಸಿದ್ದೇನೆ. ನಿರ್ಘೃಣನಾದ ನಾನು ತಮ್ಮಿಂದ ವಧ್ಯನಾಗಿದ್ದೇನೆ ನಾನೇನನ್ನು ಮಾಡಬೇಕೆಂಬುದನ್ನು ಆಜ್ಞಾಪಿಸಬೇಕು" ಎಂದು ಹೇಳಿದನು ದುಃಖಾರ್ತನಾಗ ವೃದ್ಧತಪಸ್ವಿಯು ತಾನೂ ಮತ್ತು ತನ್ನ ಪತ್ನಿಯೂ ತಮ್ಮ ಪುತ್ರನನ್ನೇ ಹಿಂಬಾಲಿಸುವುದಕ್ಕಾಗಿ ಅಗ್ನಿಪ್ರವೇಶ ಮಾಡುವುದಾಗಿ ಸೂಚಿಸಿ ಚಿತೆಯನ್ನು ಸಿದ್ಧಗೊಳಿಸಬೇಕೆಂದು ಆಜ್ಞಾಪಿಸಿದನು ಅಷ್ಟು ಹೊತ್ತಿಗೆ ದಶರಥನ ಅನುಚರರು ಅಲ್ಲಿಗೆ ಬಂದರು ದಶರಥನು ವೃದ್ಧತಪಸ್ವಿಯ ಆಜ್ಞೆಯನ್ನು ನೆರವೇರಿಸಿದನು ಮುನಿವಧಾರೂಪದ ಪಾತಕವನ್ನಾಚರಿಸಿದ ಕಾರಣದಿಂದ ಖಿನ್ನನಾಗಿ ಅವನು ರಾಜಧಾನಿಗೆ ಹಿಂದಿರುಗಿದನು ಅವನು ಉತ್ಸಾಹಹೀನನಾಗಿ ಪಶ್ಚಾತ್ತಾಪದಿಂದ ಕೊರಗುತ್ತಿದ್ದನು ಆತ್ಮವಿನಾಶ ಹೇತುವಾದ ಪಾಪವು ಅವನ ಮನಸ್ಸನ್ನು ಮಿಡಿಯುತ್ತಿದ್ದಿತು ಮೇಲೆ ನೋಡಲು ಜಲರಾಶಿಯಿಂದ ಕೂಡಿದ್ದರೂ ಒಳಗೆ ಬಡಬಾನಲಜ್ವಾಲೆಯಿಂದ ತಪಿಸುವ ಸಮುದ್ರದಂತೆ ಅವನ ಸ್ಥಿತಿಯೂ ಆಗಿದ್ದಿತು ಸಮುದ್ರ ಗಾಂಭೀರ್ಯದಿಂದ ಅವನು ತನ್ನ ಕರ್ತವ್ಯಗಳನ್ನು ನೆರವೇರಿಸುತ್ತಿದ್ದರೂ, ಪಾತಕವನ್ನಾಚರಿಸಿದ ಪಶ್ಚಾತ್ತಾಪದಿಂದಲೂ ಮತ್ತು ತನಗೆ ಪ್ರಾಪ್ತವಾಗಿದ್ದ ಶಾಪನಿಮಿತ್ತನಾದ ಸಂತಾಪದಿಂದಲೂ ಅವನು ಪರಿತಪಿಸುತ್ತಿದ್ದನು

— ೦ —